ಸಚಿತ್ರ

# ಇಂದ್ರಜಾಲ ವಿದ್ಯಾರಹಸ್ಯ

(ಮಹೇಂದ್ರಜಾಲ ಯಕ್ಷಿಣಿ ವಿನೋದ)



ಲೇಖಕರು :

ಶಿವರುದ್ರಸ್ವಾಮಿಗಳು ಸಾಲಿಮಠ





ಭಾರತ ಬುಕ್ ಡಿಪೋ ಕೊಪ್ಪಿಕರರೋಡ
ಹುಬ್ಬಳ್ಳಿ.

೧೯೬೧) (ಬೆಲೆ: ೩—೦೦

ಮುದ್ರಕರು ಮತ್ತು ಮುದ್ರಣ ಸ್ಥಳ
ಶ್ರೀ ಎಮ್. ಡಿ. ಜಕಾತೆ
ಸ್ವಸ್ತಿಕ್ ಪ್ರಿಂಟಿಂಗಪ್ರೆಸ್ ಮರಾಠಾಗಲ್ಲಿ, ಹುಬ್ಬಳ್ಳಿ.



*

ಮುಖಚಿತ್ರ ರಚನೆ:
(ಮೂರ್ತಿ ಧಾರವಾಡ)




ಮೊದಲ ಮುದ್ರಣ: ೧ ಡಿಸೆಂಬರ ೧೯೬೧.




*



*

ಬೆಲೆ: ೩—೦೦

*

ಪ್ರಕಾಶಕರು ಹಾಗು ಪ್ರಕಾಶನ ಸ್ಥಳ
ಶ್ರೀ ಎಸ್. ಎಸ್. ಚಿಕ್ಕಮಠ ಭಾರತ ಬುಕ್ ಡಿಪೋ
ಕೊಪ್ಪಿಕರರೋಡ ಹುಬ್ಬಳ್ಳಿ.

## —ಮೊದಲು ಮಾತು—

ಈ ಇಂದ್ರಜಾಲ, ಮಹೇಂದ್ರಜಾಲ, ಯಕ್ಷಿಣಿ ವಿದ್ಯೆಗಳನ್ನು ಮಾಡಲ ಪೇಕ್ಷೆಯುಳ್ಳವನು, ಮೊದಲು ತಾನು ಶ್ರೀ ಸದ್ಗುರುವಿನನ್ನು ಗೊತ್ತು ಹಚ್ಚಿ, ಆತನಿಂದ ಸೇವಾ ತತ್ಪರನಾಗಿ, ಕೆಲವು ದಿನಗಳನ್ನು ಕಳೆದ ನಂತರ, ಆತನ ಪೂರ್ಣ ಮನವಲಿಸಿ, ಆತನಿಂದ ಅನುಗ್ರಹವನ್ನು ಪಡೆದುಕೊಂಡು, ಆ ಸದ್ಗುರುವಿನ ಕೃಪೆಗೆ ಪಾತ್ರನಾಗಬೇಕು. ಇದು ಮೊದಲನೆಯ ಕೆಲಸವು.

ಆ ಮೇಲೆ, ಈ ವಿದ್ಯೆಯ ವಿಷಯವಾಗಿ, ಕೆಲ-ಕೆಲವು ಅಭಿಪ್ರಾಯಗಳನ್ನು ಆ ಗುರುವಿನ ಮುಖದಿಂದ ಸಂಪೂರ್ಣವಾಗಿ ಕೇಳಿಕೊಂಡು, ಆತನು ಹೇಳಿದ ಪ್ರಕಾರ ಅದನ್ನು ಚನ್ನಾಗಿ ತಿಳಿದುಕೊಂಡು, ಅದನ್ನು ತಾನು ಮನೆಯಲ್ಲಿ ಮಾಡಿ, ಅನುಭವವನ್ನು ಮಾಡಿಕೊಳ್ಳುತ್ತಲೂ, ಸದಾ ಇದ್ದು ಈ ಇಂದ್ರಜಾಲ-ಮಹೇಂದ್ರಜಾಲ, ಯಕ್ಷಿಣಿ ವಿದ್ಯೆಗಳನ್ನು ಕಲಿತು ಸಾಧಿಸಿಕೊಳ್ಳತಕ್ಕದ್ದು.

ಹೀಗೆ ಮಾಡದೆ, ಪೇಟೆಯಲ್ಲಿ ಮಾರಲ್ಪಡುವ ಪುಸ್ತಕವನ್ನು ಕ್ರಯಕ್ಕೆ ತೆಗೆದುಕೊಂಡು ಬಂದು ಅದರಲ್ಲಿ ಬರೆದದ್ದನ್ನು ನೋಡಿಕೊಂಡು ಸ್ವಂತ ಅನುಭವವನ್ನು ತಗೆದುಕೊಳ್ಳದೆ, ತಾನು ನಾಲ್ಕು ಜನರನ್ನು ಕೂಡಿಸಿಕೊಂಡು, "ನಾನೂ ಜಾದು ಮಾಡುವೆನು ಬನ್ನಿರಿ" ಎಂದು ಹೇಳಿ, ಅವರನ್ನು ಕೂಡಿಸಿ ಅವರೆದುರಿನಲ್ಲಿ, ಮಾಡಲಿಕ್ಕೆ ಖಂಡಿತಾ ಹೋಗಬಾರದು.

ಯಾಕಂದರೆ, ಜಾದೂ ವಿದ್ಯೆಯು ಬಹಳ ಮಹತ್ವದ್ದು ಇರುತ್ತದೆ. ಇದು ಆಡುವ ಮಕ್ಕಳು ಮಾಡುವಂಥಾ ವಿದ್ಯೆವಲ್ಲ. ಈ ಜಾದೂ ವಿದ್ಯೆಯು ಅವರು ಸಣ್ಣವರೇ ಇರಲಿ ಅಥವಾ ದೊಡ್ಡವರೇ ಇರಲಿ, ಅದನ್ನು ತಾನು ಮೊದಲು ಗುರುಮುಖದಿಂದಲೇ, ಕೇಳಿ ತಿಳಿದುಕೊಂಡು, ಆ ಗುರುವಿನ ಆಜ್ಞಾನುಸಾರವಾಗಿಯೇ ಮಾಡಲು ಉಪಯುಕ್ತನಾಗಬೇಕು,

ಇದೆಲ್ಲವನ್ನು ಬಿಟ್ಟು ತಮಗೆ ಸರಿಕಂಡಂತೆ ತಾವೇ ಮಾಡಲಿಕ್ಕೆ ಹೋದರೆ, ಆ ಎಲ್ಲ ಕಾರ್ಯಗಳೂ ಎಂದೂ ಸಿದ್ಧಿಯಾಗಲಾರವು. ಅಲ್ಲದೇ ಸ್ವಲ್ಪ ಸಮಯದಲ್ಲಿಯೇ ಕೆಟ್ಟು ಹೋಗುವದುಂಟು. ಆದ್ದರಿಂದ ಈ ರೀತಿಯಾಗಿ ತನ್ನ ಗೌರವವನ್ನು ಕಳೆದುಕೊಳ್ಳುವದಲ್ಲದೇ, ಆ ವಿದ್ಯೆಗೆ ಸಹ ಅಗೌರವವನ್ನು ಮಾಡಿದಂತಾಗುತ್ತದೆ. ಯಾವದನ್ನು ಅರಿಯದೇ, ತಿಳಿಯದೇ ಮಾಡಿ ತನ್ನನುಭವವು ಇಲ್ಲದಲೇ, ಅಂಥ ವಿದ್ಯೆಯನ್ನು ಆಚರಣೆಯಲ್ಲಿ ಖಂಡಿತವಾಗಿ ತರಕೂಡದು.

ಈ ಜಾದೂ ವಿದ್ಯೆಯು ನಿಜಕ್ಕೂ ಸುಳ್ಳಲ್ಲ. ಈ ವಿದ್ಯೆಯನ್ನು, ಗುರು-ಮುಖದಿಂದಲೇ ತಿಳಿದು ತನ್ನ ಸ್ವಂತ ಅನುಭವವಿಲ್ಲದೆ ಮಾಡತಕ್ಕವನು, ಜನತೆಯ ಅಪಾರ ಹಾಸ್ಯಕ್ಕೆ ಗುರಿಯಾಗುತ್ತಾನೆ. ತನ್ನ ಮನಸ್ಸಿಗೆ ಬಂದಂತೆ ನಡೆದು, ಆಚಾರ ವಿಚಾರ ಹೀನನಾಗಿ ಉದರ ನಿಮಿತ್ಯಕ್ಕೆ, ಅದರಲ್ಲಿ ಏನಿದೆ, ಇದರಲ್ಲ ಏನಿದೆ, ಎಂದು ತಮ್ಮ ಮಾನವನ್ನು ಕಳೆದುಕೊಳ್ಳಬಾರದು.

ಈ ಜಾದು ವಿದ್ಯೆಯು ವಿಶೇಷವಾಗಿ ಬಹು ಜನರಿಗೆ ಮನವಲಿಸುತ್ತದೆ. ಆದರೆ, ಆ ವಿದ್ಯೆಯು ನಿಜವಾದ ತತ್ವವನ್ನು ಅರಿಯದೇ ಮಾಡ ಹೋದರೆ, ಅದು ಎಂದಿಗೂ ಸಾಧಿಸಲಾರದು. ತತ್ವನ್ನರಿಯು ಹೋದಲ್ಲಿ ನಿಜಕ್ಕೂ ಸಾಧಿಸುತ್ತದೆ. ಪ್ರಪಂಚದಲ್ಲಿಯ ಪ್ರತಿ ಕಾರ್ಯಕ್ಕೂ ಒಂದು ವಿಶಿಷ್ಟವಾದ ನಿಯಮವಿರುತ್ತದೆ. ಪ್ರತಿಯೊಬ್ಬನು ಇಂಥ ಜಾದು ವಿದ್ಯೆಯನ್ನಪೇಕ್ಷೆಯುಳ್ಳವನು, ಮೊದಲು ತನ್ನ ಗುರು-ಹಿರಿಯರಲ್ಲಿಯೂ, ಸದಾ ದೇವತಾ ಭಕ್ತನು ಆಗಿರಬೇಕು. ಈ ರೀತಿಯಾಗಿ ಇದ್ದಲ್ಲಿ, ಅವನ ಸಕಲ ಕಾರ್ಯಗಳು ಸರ್ವ ಸಿದ್ಧಿಯನ್ನು ಹೊಂದುತ್ತವೆ ಇದರಲ್ಲಿ ಎಳ್ಳಷ್ಟು ಸಂದೇಹ ಇಲ್ಲವೆಂದೇ ಹೇಳಬಹುದು.

ಏನೂ ಅರಿಯದೇ ತನಗೆ ತಿಳಿದಂತೆ ಏನಾದರೊಂದು ಮಾಡಿ ಮುಖಹೀನನಾಗಬಾರದು. ತತ್ವವನ್ನು ಪೂರ್ಣ ಅರಿತು ನಂತರ ಅದನ್ನು ತನ್ನ

ಆಚರಣೆಯಲ್ಲಿ ತರಬೇಕು. ಇದಕ್ಕೆ ಸಿದ್ಧಿಯೋಗವೆನ್ನುತ್ತಾರೆ. ಕೆಲವರು ತಮಗೆ ಸರಿ ಕಂಡಂತೆ ಏನಾದರೊಂದು ಮಾಡಿ, ಕಾರ್ಯವನ್ನು ಸಾಧಿಸದೇ ಮೂಲ ವಿದ್ಯೆಗೆ ನಿಂದಿಸಬಾರದು ಅದು ಅವನ ಹೇಡಿತನದ ಪರಮಾವಧಿ ಎಂದೇ ಹೇಳಬಹುದು. ಇದರಲ್ಲಿ ತಿಳಿಸಿದಂತೆ ಚಾಚು ತಪ್ಪದೇ ಪ್ರತಿ ಕಾರ್ಯಗಳನ್ನು ಒಳ್ಳೇ ಮನಸ್ಸಿನಿಂದ ಮಾಡಿ, ಅದನ್ನು ಮೊದಲು ಪೂರ್ಣ ಜಯ ಸಿದ್ಧಿಯನ್ನು ಸಂಪಾದಿಸಿ ಮುಂದೆ ತಮ್ಮ ಕಾರ್ಯ ತತ್ಪರರಾಗಬೇಕು. ಈ ಎಲ್ಲ ಕಾರ್ಯಗಳನ್ನು ಸದಾ ಗೌಪ್ಯವಾಗಿಯೇ ಮನೆಯಲ್ಲಿ ಸಂಪೂರ್ಣ ವಾಗಿ ಸಾಧಿಸಿಕೊಳ್ಳಬೇಕು. ಒಮ್ಮೆ ಸಾಧಿಸದಿದ್ದಲ್ಲಿ ಪುನಃ ಪ್ರಯತ್ನವನ್ನು ಮಾಡಬೇಕು. ಈ ರೀತಿಯಾಗಿ ನಾಲ್ಕಾರು ಸಲ ಗೃಹ ಸಿದ್ಧಿಯನ್ನು ಮಾಡಿ ದಲ್ಲಿ, ಅದು ಮುಂದೆ ನಿಜಕ್ಕೂ ಜಯ ಸಿಗುತ್ತದೆ. ಆ ಮೇಲೆ ನೀವು ಆ ಕಾರ್ಯವನ್ನು ಮುಂದೆ ಒಳ್ಳೇ ಪ್ರತಿಷ್ಠ ಸ್ಥಾನದಲ್ಲಿ ಯಾವ ನಿರ್ಭಯವಿಲ್ಲದೆ ಸಹಜವಾಗಿ ಮಾಡಬಹುದು. ಇದು ಜಾಲ ವಿದ್ಯೆಯು ತನ್ನ ವಶಪಡಿಸಿ ಕೊಳ್ಳುವ ಪ್ರಥಮ ಹಂತವು.

ಈ ಜಾಲ ವಿದ್ಯೆಯ ವಶೀಕರಣ ಪುರುಷರು, ಮೊದಲು ಇದೇ ರೀತಿ ಯಾಗಿ ಪೂರ್ಣವಾಗಿ ಗೃಹ-ಸಿದ್ಧಿಯನ್ನು ಪಡೆದು, ಮುಂದೆ ತಮಗೆ ಎಲ್ಲಿ ಯಾವ ಕಾರ್ಯವನ್ನು ಸಾಧಿಸಿಕೊಳ್ಳಬೇಕೋ, ಅಲ್ಲಿ ನಿರ್ಭಯದಿಂದ ಅತಿ ಸುಲಭೋಪಾಯದಿಂದ, ತಮ್ಮ ಕಾರ್ಯಗಳನ್ನು ಸಾಧಿಸಿಕೊಳ್ಳುತ್ತಾರೆ. ಆದರೆ, ಈ ಜಾಲವಿದ್ಯೆಯ ವಶೀಕರಣ ಮಹಾ ಪುರುಷರು ಒಂದು ಮಾತನ್ನು ಮಾತ್ರ ಸದಾ ನೆನಪಿನಲ್ಲಿಡಬೇಕು. ಏಕೆಂದರೆ—

ಅನ್ಯರಿಗೆ ನಿಮ್ಮ ಕಾರ್ಯದಿಂದ ಯಾವಾಗಲೂ, ಎಂಥ ಸಮಯ ದಲ್ಲಿಯೂ ಹೆಚ್ಚಿನ ಕೆಡಕನ್ನು ಅವರಿಗೆ ಉಂಟು ಮಾಡಬಾರದು. ಯಾಕೆಂದರೆ ಆಕಸ್ಮಾತ್ ಒಂದು ಸಮಯ, ಅವರಿಗೆ ತಿಳಿದು ಬಂದಲ್ಲಿ, ಆ ಸೇಡನ್ನು ತೀರಿಸಿ ಕೊಳ್ಳಲು ನಿಮ್ಮ ಮೇಲೆ ಪ್ರಯೋಗವನ್ನು ಮಾಡಿದಲ್ಲಿ, ನೀವು ನಿಜಕೂ ಮಣ್ಣು ಪಾಲಾಗುವದು ನಿಶ್ಚಿತ ಅದಕ್ಕಾಗಿ ಯಾವತ್ತೂ ಬಹಳ ಜಾಗೃತರಾಗಿ

ಇರುವದು. ಬಹಳ ಉತ್ತಮ. ಸಧ್ಯ ಇದರಿಂದ ಹಾನಿಗೊಳಗಾದ ಬಹು ಜನರು ಸಧ್ಯ ಇದ್ದಾರೆ. ಆದಕ್ಕಾಗಿ ಈ ಮಾತನ್ನು ಒತ್ತಿ ಹೇಳಬೇಕಾಗಿದೆ, ಈ ವಿದ್ಯೆಯು ಬಹು ಜನರಿಗೆ ಸುಳ್ಳು ಎಂಬ ಗೃಹಕ್ಕೆ ಇದೆ. ಆದರೆ ಈ ವಿದ್ಯೆಯು ನೂರಕ್ಕೆ ನೂರು ನಿಜವಿದೆ ಎಂದು ನಾವು ನಮ್ಮ ಕೆಲ ಪ್ರಯೋಗಗಳಿಂದ ವಿಶ್ವಾಸದಿಂದ ಹೇಳಬಲ್ಲೆವು.

# ಪೀಠಿಕೆ

ಶಿವನೊಂದು ದಿನ ರಜತಾದ್ರಿಯಲ್ಲಿ ಧ್ಯಾನ ಮಗ್ನನಾಗಿ ಕುಳಿತು ಕೊಂಡಿದ್ದ. ರುದ್ರ ಗಣಗಳು ಏಕ ಪ್ರಕಾರವಾಗಿ ಮುಕ್ತ ಕಂಠದಿಂದ ದೇವ-ದೇವನಾದ ಮಹಾದೇವನನ್ನು ಸ್ತುತಿಸತೊಡಗಿದ್ದರು. ಆ ಸಮಯದಲ್ಲಿ ಜಗನ್ಮಾತೆಯಾದ ಪಾರ್ವತೀದೇವಿಯು ಮಹಾದೇವನ ಸಂದರ್ಶನಕ್ಕಾಗಿ ಅಲ್ಲಿಗೆ ಬಂದಳು.

ಅರ್ಧ ನಿಮೀಲಿತ ನೇತ್ರಗಳಿಂದ ಧ್ಯಾನ ತನ್ಮಯನಾದ ಚಿನ್ಮಯ ಮೂರ್ತಿ ಪುರುಷನನ್ನು ಕಂಡು ಪ್ರಕೃತಿಯು ಭಾವೋದ್ರೇಕ ಭರಿತಳಾದಳು. ಭಕ್ತಿ ಪರವಶತೆಯಿಂದ ಸಾಂಬಶಿವನ ಅಡಿದಾವರೆಗಳಲ್ಲಿ ತನ್ನ ಮಸ್ತಕವನ್ನಿಟ್ಟು ನಮಸ್ಕರಿಸಿ ಅತನ ವಾಮಭಾಗಿಯಾಗಿ ಕುಳಿತಳು.

ದೇವಿಯ ಆಗಮನದಿಂದ ಧ್ಯಾನ ಬಾಹಿರನಾದ ಶಂಕರನು ಪ್ರಸನ್ನವದನನಾಗಿ ಪಾರ್ವತಿಯತ್ತ ಹೊರಳಿ ನೋಡಿದನು. ಹಾಗು ದೇವಿಯ ಬಯಕೆಯ ಮುಖಮುದ್ರೆಯನ್ನು ಗ್ರಹಿಸಿದ ಪಶುಪತಿಯು ಅತ್ಯಂತ ಹಸನ್ಮುಖಿಯಾಗಿ:

"ಜಗದ್ಧಾತ್ರಿಯ ಈಗಿನ ಆಗಮನಕ್ಕೆ ಯಾವುದೋ ಒಂದು ಪ್ರಬಲ ಕಾರಣವಿರಬೇಕೆಂದು ತೋರುವುದು'' ಎಂದನು.

ಆಗ ಜಗನ್ಮಾತೆಯಾದ ಪಾರ್ವತೀದೇವಿಯು ಕೊಂಚ ನಕ್ಕು:

"ನಾಥಾ ! ತಾವು ಊಹಿಸಿರುವುದು ಅಕ್ಷರಶಃ ಸತ್ಯ! ನನ್ನ ಮನಾಂತರಂಗವನ್ನು ತಾವು-ಈಗಾಗಲೆ ಊಹಿಸಿರುವಿರಾದರೂ ತಮ್ಮಲ್ಲಿ ಅರಿಕೆ ಮಾಡಿಕೊಳ್ಳಬೇಕಾದ ವಿಷಯಗಳು ಬಹಳಷ್ಟಿವೆ. ಈಗಿನ ಸಂದರ್ಭದಲ್ಲಿ ತಮ್ಮ

ಅಂತರಂಗಕ್ಕೆ ವೇದ್ಯವಾಗುವುದಾದರೆ, ನನ್ನ ಮನದಲ್ಲುಂಟಾದ ಸಂದೇಹಕ್ಕೆ ದಯವಿಟ್ಟು ಸಮಾಧಾನವನ್ನು ನೀಡತಕ್ಕದ್ದು" ಎಂದಳು.

"ಹೇ ಶಂಕರಿ!" ಮಹಾದೇವನು ಉತ್ತರಿಸಿದ. "ನಿನ್ನ ಮನೋಭಿಷ್ಟವನ್ನು ಪೂರ್ಣಗೊಳಿಸುವುದಕ್ಕಿಂತಲೂ ಹೆಚ್ಚಿನ ಮಹತ್ಕಾರ್ಯವು ನನಗೆ ಬೇರಾವುದಿರುವುದು? ಇಂದು ಭೂಲೋಕದಲ್ಲಿ ಸರ್ವ ಜನಾದರಣೀಯವಾದ ಇಂದ್ರಜಾಲ ವಿದ್ಯೆಯ ಮಹತ್ವವನ್ನು ಅರಿತುಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯು ನಿನ್ನ ಮನದಲ್ಲುಂಟಾಗಿದೆಯಷ್ಟೆ!"

"ಅಹುದು ನಾಥಾ! ಸರ್ವಾಂತರ್ಯಾಮಿಗಳಾದ ತಾವು ನನ್ನ ಮನದಿಂಗಿತವನ್ನು ಸರಿಯಾಗಿಯೇ ಊಹಿಸಿರುವಿರಿ. ಸ್ವಭಾವ ಜನ್ಯ ಕಾಮರೂಪಿಗಳಾದ ದೈತ್ಯದಾನವರು ತಮ್ಮ ಜೀವಿತದಲ್ಲಿ ಚಿತ್ರ-ವಿಚಿತ್ರಗಳಾದ ನಾನಾ ಬಗೆಯ ಚಮತ್ಕಾರಗಳನ್ನು ಮಾಡಿ ತೋರಿಸುತ್ತಿದ್ದರು. ದೇವಾಂಶ ಸಂಭೂತರಾದ ದೇವತೆಗಳಿಗಂತೂ ಆ ವಿದ್ಯೆಯು ಕರ ತಲಾಮಲಕವಾಗಿರುವುದು ಆದರೆ ಇಂದು ಭೂಲೋಕದಲ್ಲಿ ಕ್ಷಣಿಕರಾದ ಮಾನವರಲ್ಲೂ ಅದು ಪ್ರಚಾರದಲ್ಲಿದೆಯೆಂದಾಗ, ಅದರ ಮಹತ್ವತೆಯನ್ನು, ಒಳಗುಟ್ಟನ್ನು ಅರಿತುಕೊಳ್ಳಬೇಕೆಂದ ನಾನು ಸಹಜ ಕುತೂಹಲಿಯಾಗಿರುವೆನು. ಅದಕ್ಕಾಗಿ ತಾವು ದಯವಿಟ್ಟು ಆ ಇಂದ್ರಜಾಲ ವಿದ್ಯೆಯ ಒಳಗುಟ್ಟನ್ನು ನನಗೆ ತಿಳಿಸಬೇಕು" ಎಂದು ಪಾರ್ವತಿಯು ಕೇಳಿಕೊಂಡಳು.

"ದೇವಿ! ಆ ವಿದ್ಯೆಯ ಒಳ ತಿರುಳನ್ನು ಅರಿತುಕೊಂಡು ನಿನಗೇನು ಮಾಡಬೇಕಾಗಿದೆ? ಅಲ್ಲದೆ ನಿನಗೆ ಅದರಿಂದಾಗುವ ಪ್ರಯೋಜನವಾದರೂ ಏನು?" ಎಂದು ಮಹಾದೇವ ಪ್ರಶ್ನಿಸಿದ.

"ಹೃದಯೇಶ್ವರ! ಆ ವಿದ್ಯೆಯು ಮಾನವ ಜನಾಂಗದ ದುಃಖವನ್ನು ಹರಣಮಾಡಿ, ಅವರಿಗೆ ಸದಾ ಸುಖ ಶಾಂತಿಗಳ ಸುಭಿಕ್ಷೆಯನ್ನು ನೀಡುವುದರಿಂದ ಅದರ ಬಗ್ಗೆ ನನ್ನ ಆಸಕ್ತಿಯು ನಿಮಿಷ-ನಿಮಿಷಕ್ಕೂ ಹೆಚ್ಚಾಗುತ್ತ ನಡೆದಿರುವುದು."

"ನಿಜ ದೇವಿ! ನೀನು ಹೇಳುವಂತೆ ಇಂದ್ರಜಾಲ ವಿದ್ಯೆಯು ಮನುಷ್ಯನಿಗೆ ಸದಾ ಆನಂದವನ್ನೀಯುವುದಲ್ಲದೆ ಆಶ್ಚರ್ಯವನ್ನುಂಟು ಮಾಡತಕ್ಕ ಮಹತ್ ಸಾಧನೆಯ ಜೊತೆಗೆ ಶತೃಗಳನ್ನು ನಾಶ ಮಾಡತಕ್ಕ, ಪೀಡಾ ನಿವಾರ

ಣೆಯು ಯೋಗ ಸಿದ್ಧಿಯೂ ಹೌದು; ಅದಕ್ಕಾಗಿ ಆ ವಿದ್ಯೆಯ ಮರ್ಮವನ್ನು ನಾನು ನಿನಗೆ ಈಗ ಹೇಳುವೆನು. ನೀನು ತದೇಕ ಚಿತ್ತಳಾಗಿ ಆಲಿಸು" ಎಂದು ನುಡಿದು ಮಹಾದೇವನು ಪಾರ್ವತಿಗೆ ಇಂದ್ರಜಾಲ ವಿದ್ಯೆಯ ಮಹತ್ವವನ್ನು ಹಾಗು ಅದನ್ನು ಸಾಧಿಸಿಕೊಳ್ಳತಕ್ಕ ಕರ್ಮಾಚಾರಗಳನ್ನೂ ಹೇಳಲಾರಂಭಿಸಿದನು.

"ಹೇ, ಶಾಂಭವಿ ಕೇಳು !

"ಶಾಸ್ತ್ರ ಧರ್ಮಾನುಸಾರವಾಗಿ ಈರೇಳು ಲೋಕಗಳಲ್ಲಿಯೂ ಬಳಕೆಯಲ್ಲಿರುವಂಥ ಅರವತ್ತು ನಾಲ್ಕು. ವಿದ್ಯೆಗಳಲ್ಲಿ ಇಂದ್ರಜಾಲ ವಿದ್ಯೆಯು ಅತ್ಯಂತ ಶ್ರೇಷ್ಠವಾದುದಾಗಿದೆ. ಏಕೆಂದರೆ ಎಷ್ಟೋ ಸಲ ಅಸಾಧ್ಯವೆಂದೆಣಿಸಿಕೊಂಡಂಥ ಮಹಾ-ಮಹಾಕಾರ್ಯಗಳು ಕೂಡ ಇಂದ್ರಜಾಲ ವಿದ್ಯೆಯ ಮೂಲಕ ಸುಲಭವಾಗಿ, ಸರಳವಾಗಿ, ಸರಾಗವಾಗಿ ನೆರವೇರಿಸಿಕೊಳ್ಳಬಹುದಾಗಿದೆ. ಅಷ್ಟೊಂದು ಘನತರವಾದುದಾಗಿದೆ, ಈ ವಿದ್ಯೆ.

"ಇಂತಹ ಆ ಇಂದ್ರಜಾಲ ವಿದ್ಯೆಯು ಮಾನವನ ವಶಾನುವರ್ತಿಯಾಗಬೇಕಾದರೆ ಸಾಧಕನು ಸದಾಚಾರಕ್ಕಿಂತಲೂ ವಾಮಾಚಾರಿಯಾಗಿರುವುದೇ ಮೇಲು. ಅಲ್ಲದೆ ಹಾಗಿರುವುದರಿಂದ ಅದರ ಮಾರ್ಗವೂ ಸುಲಭವಾಗುವುದು. ಏಕೆಂದರೆ ಕಾರ್ಯಾರಂಭದಲ್ಲಿ ಮೊದ ಮೊದಲು ಭಯವೂ, ಕಷ್ಟ ನಷ್ಟಗಳೂ ಉಂಟಾಗುವ ಸಂಭವವಿದೆಯಾದರೂ ವಾಮಾಚಾರದಿಂದ ಮುಂದುವರಿದ ಸಾಧಕನಿಗೆ ಅವೆಲ್ಲವೂ ತೃಣಸಮಾನವಾಗಿ ಪರಿಣಮಿಸುವವು.

ಇದಲ್ಲದೆ ಮಾನವನು ಸ್ವಭಾವತ: ಸಾಹಸ ಜೀವಿಯಾಗಿರುವ ಕಾರಣ ಅವನಿಗೆ ಅಸಾಧ್ಯವೆಂಬುದು ಯಾವುದೂ ಇಲ್ಲವೆಂದೇ ಹೇಳಬೇಕು. ಯಾವ ಸಾಧಕನು ಇಂದ್ರಜಾಲ ವಿದ್ಯೆಯನ್ನು ತನ್ನ ಗುರುವಿನಿಂದ ಕ್ರಮ ಬದ್ಧವಾಗಿ ಉಪದೇಶಪಡೆಯುತ್ತಾನೆಯೋ ಅಂಥವನಿಗೆ ಆ ವಿದ್ಯಾದೇವಿಯು ಬಹುಬೇಗ ಒಲಿಯುತ್ತಾಳೆ. ಅಸಾಧ್ಯವಾದ ಎಷ್ಟೋ ಕಾರ್ಯಗಳನ್ನು ಲೀಲಾಜಾಲವಾಗಿ ಅವನಿಂದ ಮಾಡಿಸಿ ಅವನ ಕೀರ್ತಿ ಪ್ರತಿಷ್ಠೆಗಳನ್ನು ಹೆಚ್ಚಿಸುವಳು.

ಈ ವಿದ್ಯೆಯ ಉಪದೇಶವನ್ನು ಕೊಡುವಂತಹ ಗುರುವು ಯಾವಾಗಲೂ ನಿರ್ಮಲಚಿತ್ತನಾಗಿರತಕ್ಕದ್ದು. ಅಲ್ಲದೆ ಅವರು ಶಕ್ತಿ ದೇವತೆಯ ಪರಮಭಕ್ತನು ಆಗಿರಬೇಕು. ಪ್ರತಿ-ಅಮಾವಾಸ್ಯೆಯ ಪ್ರತಿಪದೆಯರಾತ್ರಿ ಈ ವಿದ್ಯೆಯ ಉಪಚರ ಗಣಗಳಿಗೆ ಅನ್ನ-ರಕ್ತದ ಬಲಿಯಿಂದ ಪ್ರೇತ

ಶಾಂತಿಯನ್ನು ಮಾಡುವಂತಹ ಮಹಾಹಠಯೋಗಿಯೂ ಆಗಿರಬೇಕು. ಆಗ ಮಾತ್ರ ಸಾಧಕನು ಅಂತಹ ಗುರುವನ್ನೇ ಹುಡುಕಿಕೊಂಡು ಹೋಗಿ ಅವನಿಂದ ಉಪದೇಶ ಪಡೆದು ತನ್ನ ಸಾಧನೆಯನ್ನು ಮುಂದುವರೆಯಿಸ ತಕ್ಕದ್ದು.

"ಸಾಧನೆಯ ಪೂರ್ವದಲ್ಲಿ ಗುರು-ಶಿಷ್ಯರೀರ್ವರೂ ಕಟ್ಟು ನಿಟ್ಟಾಗಿ ಆಚರಿಸಬೇಕಾದ ಮಹಾ ಕರ್ಮವೊಂದಿರುವುದು. ಅದನ್ನು "ಶಾಂಭವೀ ಹೋಮ"ವೆಂದು ಕರೆಯುತ್ತಾರೆ. ಆ ಹೋಮವನ್ನು ಮಾಡದೆ ಇಂದ್ರಜಾಲ ವಿದ್ಯೆಯನ್ನು ಸಾಧಿಸಹೋದರೆ ಅದು ಯಾವ ಕಾಲಕ್ಕೂ ಸಿದ್ಧಿಸಲಾರದು. ಅಲ್ಲದೆ ಅದರಿಂದ ಯಾವುದೇ ಬಗೆಯ ಫಲವು ದೊರೆಯಲಾರದು. ಶಾಂಭವೀ ಹೋಮನ್ನು ನಡೆಯಿಸುವಂತಹ ಗುರು–ಶಿಷ್ಯರಿಬ್ಬರೂ ಒಂದು ಕಾರ್ಯವನ್ನು ಮಾಡತಕ್ಕದ್ದು.

"ಅಂದರೆ, ಮಂಗಳವಾರ ದಿನ ಅಮಾವಾಸ್ಯೆ ಬರುವುದನ್ನೇ ಎದುರು ನೋಡತಕ್ಕದ್ದು ಅದು ಬಂದಿತೆಂದರೆ, ಆ ರಾತ್ರಿ ಸ್ಮಶಾನಕ್ಕೆ ಹೋಗಿ ಗರ್ಭಿಣಿ ಹೆಂಗಸಿನ ಬಲಹಸ್ತವನ್ನು ಸಂಪಾದಿಸಬೇಕು. ಅನಂತರ ಸ್ಮಶಾನದ ಮೂಲೆ ಯೊಂದರಲ್ಲಿ ನೆಲದ ಮೇಲೆ ಆ ಹಸ್ತದಿಂದ ಶಕ್ತಿಮಂಡಲವನ್ನು ಬರೆಯತಕ್ಕದ್ದು [ಶಕ್ತಿಮಂಡಲನ್ನು ಯಾವ ರೀತಿಯಿಂದ ಬರೆಯಬೇಕು ಎಂಬುದರ ಚಿತ್ರವನ್ನು ಮುಂದೆ ಯಂತ್ರಗಳ ವಿಭಾಗದಲ್ಲಿ ಕೊಡಲಾಗಿರುವುದು. ಅದನ್ನು ನೋಡಿ ಕೊಳ್ಳಬೇಕು.

"ಶಕ್ತಿ ಮಂಡಲವನ್ನು ಬರೆದ ನಂತರ ಅದರ ಮೇಲೆ ಕುಶಾಸನವನ್ನು ಸಿದ್ಧಪಡಿಸಿ ಗುರು-ಶಿಷ್ಯರಿಬ್ಬರೂ ಸ್ನಾನ ಮಾಡಿ ಬರತಕ್ಕದ್ದು. ಆ ಮೇಲೆ ಅವರೀರ್ವರೂ ಕುಶಾಸನದ ಮೇಲೆ ದಿಗಂಬರರಾಗಿ ಎದುರು-ಬದರು ಕುಳಿತು ಕೊಳ್ಳತಕ್ಕದ್ದು. ಹಾಗು ಕುಳಿತುಕೊಂಡೊಡನೆ ಶಾಂಭವೀ ಮಂತ್ರವು ಈ ರೀತಿಯಾಗಿದೆ:

"ಓಂ ಶ್ರೀ ಫಳಿಕಾ ದೂತಿ ! ಮಮ ಸಾಧನಾ ಸಿದ್ಧಂ ಕುರು"

ಈ ಮಂತ್ರವನ್ನು ತಲೆಯ ಮೇಲಿನ ನೀರು ಆರುವುದರೊಳಗಾಗಿ ಒಂದು ಸಾವಿರದ ಒಂದು ಬಾರಿ ಜಪಿಸತಕ್ಕದ್ದು. ಆಗ ಶಾಂಭವಿಯು ಪ್ರಸನ್ನ ಳಾಗಿ ವಿದ್ಯೆಯು ಸಿದ್ಧಿಯಾಗುವಂತೆ ಅನುಗ್ರಹಿಸಿ ಸಕಲ ಕಾರ್ಯಗಳೆಲ್ಲವಕ್ಕೂ ನೆರವಾಗುವಳು.

ಈ ರೀತಿಯಾಗಿ ಜಪವನ್ನು ಮಾಡಿದ ನಂತರ ಅಂತ್ಯದಲ್ಲಿ-ಕೊನೆಯಲ್ಲಿ-ಗುರು-ಶಿಷ್ಯರಿಬ್ಬರೂ ಅದೇ ಸ್ಮಶಾನದ ದಕ್ಷಿಣ ದಿಕ್ಕಿನಲ್ಲಿರುವಂಥ ವಟವೃಕ್ಷ ವನ್ನು ಹುಡುಕಿಕೊಂಡು ಹೋಗಿ [ಇಲ್ಲಿ ಗಮನಿಸತಕ್ಕ ಮಾತೆಂದರೆ, ಸ್ಮಶಾನದ ದಕ್ಷಿಣಕ್ಕೆ ವಟವೃಕ್ಷವಿರುವಂತಹ ಸ್ಮಶಾನವನ್ನು ಮೊದಲೇ ಆಯ್ದುಕೊಂಡಿರು ವುದು ಒಳ್ಳೆಯದು.] ಅದರ ಸಮಿಧೆಯೊಂದನ್ನು ಮುರಿದುಕೊಂಡು ಅದೇ ವೃಕ್ಷದಡಿಯಲ್ಲೇ ಉತ್ತರಾಭಿಮುಖವಾಗಿ ಕುಳಿತು ಏಳು ಚೌಕೋನದ ಕುಂಡಲಿಯನ್ನು ರಚಿಸಿ, ಅದರೊಳಗೆ:

"ಅಂದಿನ ತಿಥಿ, ವಾರ, ನಕ್ಷತ್ರ ಹಾಗು ಗುರು-ಶಿಷ್ಯರಿಬ್ಬರೂ ತಮ್ಮ-ತಮ್ಮ ಹೆಸರುಗಳನ್ನು ಸಮಿಧೆದಲ್ಲಿ ಬರೆದು, ಮಧ್ಯದ ಚೌಕೋನದಲ್ಲಿ ಮಾತ್ರ ಹಿಂದೆ ತಿಳಿಸಿರುವಂತಹ ಶಾಂಭವೀ ಮಂತ್ರವನ್ನು ಬರೆದು ತನ್ಮೂಲಕ ಅದರಲ್ಲಿ ಶಾಂಭವಿಯನ್ನು ಆಹ್ವಾನಿಸಿ ಸಾಧಕನ ತರ್ಜನೀ ಬೆರಳಿನ ರಕ್ತದಿಂದ ಪೂರ್ಣಾಹುತಿಯನ್ನೀಯಬೇಕು.

ಇಷ್ಟು ಕಾರ್ಯಗಳನ್ನು ಮಾಡಿದ ನಂತರ ಈ ಹೋಮವು ವಿಧಿಯುಕ್ತ ವಾಗಿ, ಸಾಂಗವಾಗಿ ನೆರವೇರಿದಂತಾಗುವದು. ಹಾಗು ಅದರಿಂದ ಮುಂದಿನ ಸಕಲ ಕಾರ್ಯಗಳು, ಅಭೀಷ್ಟಗಳು ಯಾವುದೇ ಬಗೆಯ ಅಡೆತಡೆಗಳಿಲ್ಲ ದೆಯೇ ನೆರವೇರುವುವು. ಇದರಲ್ಲಿ ಸಂಶೇಹವಿಲ್ಲ.

ಪ್ರಸ್ತುತ ಇಂದ್ರಜಾಲ ವಿದ್ಯೆಯು ಆರು ಬಗೆಯ ಕರ್ಮಗಳಲ್ಲಿ ಅವಿ ರ್ಭಾವಿಯಾಗಿ ಹರಿದಿರುವುದೆಂಬುದು ಈ ಕೆಳಗಿನ ಶ್ಲೋಕದಿಂದ ವ್ಯಕ್ತ ವಾಗುವದು,

ಶಾಂತಿಂ ಗಚ್ಛೆ ವಶ್ಯತೆ ವಿಪ್ತಿ ಸ್ತಂಭಿ ನೋನಾಂ ವಿದ್ವೇಷಣಾಂ ||
ಉಚ್ಚಾಟಣಾಂ ಮಾರಣಂ ಕರ್ಮಂ ಷಟ್ ಕರ್ಮಣಿ ದಧೀತಿನಃ ||

ಅಂದರೆ ಇದರ ಅರ್ಥವು ಈ ರೀತಿಯಾಗಿರುವುದು. ಅರ್ಥಾತ್ ಇಂದ್ರಜಾಲ ವಿದ್ಯೆಯೊಳಗಿನ ಆರು ಬಗೆಯ ಕರ್ಮಗಳು ಈ ರೀತಿಯಾಗಿ ರುವುವು.

ಮೊದಲನೆಯದು ಶಾಂತಿ ಕರ್ಮ, ಎರಡನೆಯದು ವಶೀಕರಣ ಕರ್ಮ, ಮೂರನೆಯದು ಸ್ತಂಭನ ಕರ್ಮ, ನಾಲ್ಕನೆಯದು ವಿದ್ವೇಷಣಾ ಕರ್ಮ, ಐದನೆಯದು ಉಚ್ಚಾಟನಾ ಕರ್ಮ, ಆರನೆಯದು ಮಾರಣ ಕರ್ಮ.

ಈ ಬಗೆಯ ಆ ಕರ್ಮಗಳು ರೂಪುಗೊಳ್ಳುವುವು. ಇನ್ನು ಯಾವ ಯಾವ ಕರ್ಮಗಳಿಂದ ಏನೇನು ಸಾಧಿಸಬಹುದೆಂಬುದನ್ನು ವಿವೇಚಿಸುವಾ!

**ಶಾಂತಿ ಕರ್ಮ**

ಶಾಂತಿ ಕರ್ಮದಿಂದ ರೋಗ–ರುಜಿನಾದಿಗಳನ್ನೂ, ಗೃಹಪೀಡೆ ಹಾಗು ಪಿಶಾಚತ್ವಗಳೇ ಮೊದಲಾದ ಅನಿಷ್ಟಗಳನ್ನು ಸುಲಭವಾಗಿ ನಿವಾರಿಸಬಹುದಾಗಿದೆ.

**ವಶೀಕರಣ ಕರ್ಮ**

ವಶೀಕರಣದಿಂದ ಅಸಾಧಾರಣವಾದ ಕಾರ್ಯಗಳು ಕೂಡ ಸರಾಗವಾಗಿ ಕೈಗೂಡುವುವು. ಅಂದರೆ ಇದರಿಂದ ಎಂತಹ ವೈರಿ ಇದ್ದರೂ ಅವನು ಬೆಕ್ಕಿನಂತೆ ಹಿಂದಿಂದೆ ತಿರುಗುವುನು. ಅಷ್ಟೊಂದು ಬಲವತ್ತರವಾಗಿರುತ್ತದೆ. ಈ ಕರ್ಮದ ಮಹನ್ನತಿ; ಅದಕ್ಕಾಗಿ ಈ ಕರ್ಮವನ್ನು ಸಿದ್ಧಿಸಿಕೊಂಡವನಿಗೆ ಯಾರ ಭಯವೂ ಇರುವದಿಲ್ಲವೆಂದು ಹೇಳಬಹುದು.

**ಸ್ತಂಭನ ಕರ್ಮ**

ಎಂಥ ಸ್ಥಿರಚಿತ್ತನಾದವನೇ ಇರಲಿ, ಅಂಥವನ ಮಾನಸಿಕ ಪ್ರವೃತ್ತಿಯನ್ನು ತಡೆದು ನಿಲ್ಲಿಸುವಂಥದು ಈ ಸ್ತಂಭನ ಕರ್ಮದ ಮುಖ್ಯ ಉದ್ದೇಶವಾಗಿರುವುದು.

**ವಿದ್ವೇಷಣಾ ಕರ್ಮ**

ಎರಡು ಅಪಾರ, ಹಾಗು ಭಯಂಕರ ಶಕ್ತಿಗಳ ಮಧ್ಯ ವಿಪರ್ಯಾಸವನ್ನು ತಂದೊಡ್ಡುವಂಥದು ವಿದ್ವೇಷಣಾ ಕರ್ಮವೆನ್ನಿಸುವುದು. ಇದರ ಸಾಮರ್ಥ್ಯವು ಕೂಡ ಸಾಮಾನ್ಯವಾದುದಲ್ಲವೆಂದು ಹೇಳಬಹುದಾಗಿದೆ.

**ಉಚ್ಚಾಟಣಾ ಕರ್ಮ**

ಪ್ರಸ್ತುತ ಕರ್ಮದ ಹೆಸರೇ ಸೂಚಿಸುವಂತೆ ಯಾವುದೇ ವ್ಯಕ್ತಿಯನ್ನು ಇಲ್ಲವೆ ಶಕ್ತಿಯನ್ನು ದೂರ ಮಾಡುವಂಥದು ಉಚ್ಚಾಟನಾ ಕರ್ಮವೆನ್ನಿಸುವುದು.

**ಮಾರಣ ಕರ್ಮ**

ಯಾವುದೊಂದು ಜೀವಿತ ಪ್ರಾಣಿಯ ಪ್ರಾಣ ಹರಣ ಮಾಡುವಂಥದು ಮಾರಣ ಕರ್ಮವೆನ್ನಿಸುವುದು.

ಈ ವಿದ್ಯೆಯ ಸಾಧನೆಯ ಮಾರ್ಗದಲ್ಲಿ ಸಾಧಕನಿಗೆ ಚಿತ್ತ ಶುದ್ಧಿಯು ಅತ್ಯಗತ್ಯವಾದುದಾಗಿದೆ. ಜೊತೆಗೆ ಏಕಾಗ್ರತೆಯೂ ಅವಶ್ಯಕವಾಗಿರುವುದು.

ಏಕೆಂದರೆ ಜಪ-ತಪಗಳನ್ನು ಪೂರೈಸಲು ಏಕಚಿತ್ತ ಹಾಗು ದೃಢಮನಸ್ಸು ಬೇಕಾಗುತ್ತದೆ. ಚಂಚಲ ಚಿತ್ತದಿಂದ ಯಾವ ಕಾರ್ಯಗಳೂ ಸಾಂಗವಾಗಿ ನೆರವೇರಲಾರವು. ಅದಕ್ಕಾಗಿ ಸಾಧಕನು ಮೇಲೆ ಹೇಳಿದಂತಯೇ ನುಡಿಗಳು ಳ್ಳವನಿರಬೇಕು. ಇನ್ನು ಮಂತ್ರ, ಜಪ ಹಾಗು ತಪಗಳ ಬಗೆಗೆ ಹೆಚ್ಚಿನ ವಿಮೋಚನೆಯು ಅಗತ್ಯವಾದುದರಿಂದ ಆ ಬಗ್ಗೆ ಯೋಚಿಸುವುದು ಒಳ್ಳೆಯದು.

ಮಂತ್ರ-ಜಪವು ವಾಚಕ, ಉಪಚಾರ, ಹಾಗು ಮಾನಸಿಕವೆಂದು ಮೂರು ವಿಧವಾದುದಾಗಿದೆ. ಗಟ್ಟಿಯಾಗಿ ಉಚ್ಚರಿಸಲ್ಪಡುವಂತಹ ಮಂತ್ರವು ವಾಚಕ ವೆನ್ನಿಸುವುದು. ಹೃದಯದಲ್ಲಿಯೇ ಯಾರಿಗೂ ಗೊತ್ತಾಗದಂತೆ ಹೃದಯದಲ್ಲಿಯೇ ಜಪಿಸುವಂಥದು ಉಪಾಯವೆನ್ನಿಸುವುದು ಹಾಗು ಮನ ದಲ್ಲಿಯೇ ಮಾಡುವಂಥ ಜಪವು ಮಾನಸಿಕವೆನ್ನಿಸುವುದು ಈ ಮೂರು ಬಗೆಯ ಮಂತ್ರಗಳು ಸಿದ್ಧದಾಯಕ-ವಾಗಿರುವುವಲ್ಲದೆ ಪಾಪನಾಶಕಗಳೂ ಆಗಿರುವು ವೆಂಬುದನ್ನು ಮರೆಯತಕ್ಕದ್ದಲ್ಲ.

ಇರಲಿ, ಎಂತಹ ವಿರಧ್ಧ ಸ್ವಭಾವದ ವ್ಯಕ್ತಿಗಳೇಇರಲಿ ಲೀಲಾಜಾಲವಾಗಿ ತಮ್ಮ ವಶಾನು ವರ್ತಿಯಾಗಿಮಾಡಿಕೊಳ್ಳಬಹುದು. ಮಾನಸಿಕ ಪ್ರವೃತ್ತಿಯನ್ನು ತಡೆದು ನಿಲ್ಲಿಸುವುದೇ ಸ್ತಂಭನ ಕರ್ಮವು. ಎರಡು ಶಕ್ತಿಗಳಮಧ್ಯೆ ವಿಪರ್ಯಾಸವನ್ನು ತಂದೊಡ್ಡುವುದೇ ವಿದ್ವೇಷಣಾ ಕರ್ಮ ಪರಸ್ಪರ ವ್ಯಕ್ತಿ ಅಥವಾ ಶಕ್ತಿಗಳನ್ನು ದೂರಗೊಳಿಸುವುದೋ ಉಚ್ಚಾಟನಾ ಕರ್ಮವು ಪ್ರಾಣಹರಣ ಮಾಡುವುದೇ ಮಾರಣ ಕರ್ಮವು.

ಈ ವಿದ್ಯೆಯ ಸಾಧನಾ ಮಾರ್ಗದಲ್ಲಿ ಸಾಧಕನಿಗೆ ಚಿತ್ತ ಶುದ್ಧಿಯೂ, ಮನಸ್ಸಿನ ಏಕಾಗ್ರತೆಯೂ ಅತ್ಯವಶ್ಯಕವಾಗಿರುವುದು ಏಕೋ ದೃಢ ಮನಸ್ಸಿನಿಂದ ಜಪತಪಾದಿಗಳನ್ನು ಪೂರೈಸಬೇಕು. ಮಂತ್ರ ಜಪವುಯಲ್ಲಿಟ್ಟ ಜಲವೂ ಪ್ರೋಕ್ಷಣಾ ಜಲವೆನಿಸಿಕೊಳ್ಳುವುದು

ಕಾರ್ಯಾರಂಭದ ಮೊದಲು ಇಷ್ಟದೇವತೆಯನ್ನು ಪೂಜಿಸಬೇಕು. ಆದನಂತರ ಆಯಾ ಕರ್ಮದ ಅಧಿದೇವತೆಗಳನ್ನು ಜಪತಪಾದಿಗಳಿಂದ ಸಂತುಷ್ಟ ಗೊಳಿಸಬೇಕು. ಒಂದೊಂದು ಕರ್ಮಕ್ಕೂ ಒಂದೊಂದು ಅಧಿದೇವತೆವ ಗಳಿರುವುವು. ಅವುಗಳಾವುವೆಂದರೆ-ಶಾಂತಿಕರ್ಮದ ಅಧಿದೇವತೆ-ಸರಸ್ವತಿ. ವಶೀಕರಣ ಕರ್ಮದ ಅಧಿದೇವತೆ-ರತಿ. ಸ್ತಂಭನ ಕರ್ಮದ ಅಧಿದೇವತೆ

ಸ್ವಾಹಾದೇವಿ. ವಿದ್ವೇಷಣ ಕರ್ಮದೇವತೆ ಚಂಡಿ- ಉಚ್ಚಾಟನಾ ಕರ್ಮದೇವತೆ- ಮಹಾಕಾಳಿ- ಮಾರಣ ಕರ್ಮದ ಅಧಿದೇವತೆ ಭೈರವಿ.

ಆಯಾ ಕರ್ಮಕ್ಕೆ ಆಯಾ ದೇವತೆಗಳಿದ್ದಂತೆ ಅವುಗಳನ್ನು ಪೂಜಿಸುವಾಗಲೂ ಕ್ರಮಬದ್ಧವಾದ ವಿಶಿಷ್ಟಾಸನಗಳಿರುವುವು.

ಶಾಂತಿ ಕರ್ಮದ ಸರಸ್ವತಿಪೂಜಿಸುವಾಗ ನವಿಲು ಗರಿಯ ಮೇಲೆ ಪದ್ಮಾಸೀನನಾಗಿ ಧ್ಯಾನಿಸಬೇಕು. ವಶೀಕರಣ ರತಿಯನ್ನು ಪೂಜಿಸುವಾಗ. ಮಲ್ಲಿಕಾಲತೆಯಿಂದ ಕೂಡಿದ ಚಿಗುರೆಲೆಯ ತೊಪ್ಪಲ ಮೇಲೆ ಸ್ವಸ್ತಿಕಾಶೀನನಾಗಿಧ್ಯಾನಿಸಬೇಕು.

ಸ್ತಂಭನ ಕರ್ಮದ ಸ್ವಾಹಾದೇವಿಯನ್ನು ಪೂಜಿಸುವಾಗ ಎದುರಿಗೆ ಬೆಂಕಿಯನ್ನು ನಿರ್ಮಿಸಿಕೊಂಡು ಜಿಂಕೆಯ ಚರ್ಮದಮೇಲೆ ಮಂದ್ರಾಸೀನನಾಗಿ ಧ್ಯಾನಿಸಿರಿ. ವಿದ್ವೇಷಣಾ ಕರ್ಮದ ಚಂಡಿಯನ್ನು ಪೂಜಿಸುವಾಗ ಹಸ್ತಿಯ ಚರ್ಮದಮೇಲೆ ಭದ್ರಾಸೀನನಾಗಿ ಧ್ಯಾನಿಸಬೇಕು. ಉಚ್ಚಾಟನಾಕರ್ಮದ ಮಹಾಕಾಳಿಯನ್ನು ಪೂಜಿಸುವಾಗ ವ್ಯಾಘ್ರ್ಯಚರ್ಮದ ಮೇಲೆ ಚಕ್ರಾಸೀನನಾಗಿರಬೇಕು. ಮಾರಣ ಕರ್ಮದ ಭೈರವಿಯನ್ನು ಪೂಜಿಸುವಾಗ ಕುಶಾಸನದೊಂದಿಗೆ ಅರ್ಧ ಚಕ್ರಾಸನವನ್ನೂ ಪ್ರಯೋಗಿಸಿ ಧ್ಯಾನಿಸಬೇಕು.

ಹಾಗೆಯೇಧ್ಯಾನ ಮಾಡುವದಕ್ಕೂ ಕೂಡಾ ಒಂದೊಂದು ದಿಕ್ಕನ್ನು ನಿಷ್ಕರಿಸಲ್ಪಟ್ಟದೆ- ಶಾಂತಿಕರ್ಮಕ್ಕಾಗಿ ಉತ್ತರಾಭಿ ಮುಖನಾಗಿಯೂ, ವಶೀಕರಣ ಕರ್ಮಕ್ಕಾಗಿ ಪೂರ್ವಾಭಿಮುಖನಾಗಿಯೂ, ಸ್ಥಂಭನ ಕರ್ಮಕ್ಕಾಗಿ ಪಶ್ಚಿಮಾಭಿಮುಖನಾಗಿಯೂ ಉಚ್ಚಾಟನಾ ಮತ್ತು ಮಾರಣ ಕರ್ಮಕ್ಕಾಗಿ ಊರ್ಧ್ವ ಮುಖನಾಗಿಯೂ ಧ್ಯಾನಿಸಬೇಕು.

ಧ್ಯಾನಕ್ಕಾಗಿ ದಿಕ್ಕಿನಂತೆ ವೇಳೆಯನ್ನೂ ನಿಷ್ಕರಿಸಲ್ಪಟ್ಟಿದೆ. ರಾತ್ರಿಯ ಪ್ರಥಮ ಜಾವದಲ್ಲಿ ಶಾಂತಿ – ಮತ್ತು ವಶೀಕರಣ ಕರ್ಮವನ್ನೂ, ಎರಡನೇ ಜಾವದಲ್ಲಿ ಸಂಭನ ವಿದ್ವೇಷಣ ಕರ್ಮವನ್ನೂ, ಕೊನೆಯ ಜಾವದಲ್ಲಿ ಉಚ್ಚಾಟನಾ ಮತ್ತು ಮಾರಣ ಕರ್ಮವನ್ನು ಪೂರೈಸಬೇಕು.

ಇನ್ನು ಆಯಾ ಕರ್ಮಗಳನ್ನು ಕೈಗೊಳ್ಳಬೇಕಾದ ವಾರ ಹಾಗು ತಿಥಿಗಳು,

ಸೋಮವಾರ ಮತ್ತು ಗುರುವಾಳ ರೇವತಿ, ಉತ್ತರಾಷಾಢ, ಜೇಷ್ಠಾ ಹಸ್ತಾ ಪುನರ್ವಸು. ಈ ವಾರ ನಕ್ಷತ್ರಗಳಲ್ಲಿ ಶಾಂತಿ ಕರ್ಮವನ್ನು ಕೈಕೊಳ್ಳ ಬೇಕು. ಮಂಗಳವಾರ ಶ್ರವಣ ಧನಿಷ್ಠ ಪೂರ್ವಾಭಾದ್ರಾ. ಕೃತ್ತಿಕಾ ಮಘಾ ಈ ವಾರ ನಕ್ಷತ್ರಗಳಲ್ಲಿ ವಶೀಕರಣ ಕರ್ಮವನ್ನೂ ಶನಿವಾರ ಆದಿತ್ಯವಾರ ಅಶ್ವಿನಿ ರೋಹಿಣಿ ಸ್ವಾತಿ ವಿಶಾಖಾ ಅನೂರಾಧಾ ಹುಬ್ಬ ಚಿತ್ರಾ ಈ ವಾರ ನಕ್ಷತ್ರಗಳಲ್ಲಿ ಸ್ತಂಭನ ಹಾಗೂ ವಿದ್ವೇಷಣಾ ಕಾರ್ಯವನ್ನೂ, ಮಂಗಳವಾರ ಶುಕ್ರವಾರ ಮೂಲಾ ಹಸ್ತಾ ಪೂರ್ವಾಷಾಢ ಭರಣಿ, ಮೃಗಶಿರಾ, ಧನಿಷ್ಠಾ ಶತಭಿಷ ಈ ವಾರ ನಕ್ಷತ್ರಗಳಲ್ಲಿ ಉಚ್ಚಾಟನೆ ಹಾಗೂ ಮಾರಣ ಕರ್ಮವನ್ನು ಕೈಗೊಳ್ಳಬೇಕು.

ಸಾಧನೆಯನ್ನು ಪ್ರಾರಂಭಿಸಿದ ನಂತರ ಸ್ವಲ್ಪವೂ ಮಂತ್ರ ಲೋಪವಾಗದಂತೆ ಎಚ್ಚರಿಕೆ ವಹಿಸಬೇಕು. ಕಟ್ಟುನಿಟ್ಟಾದ ಬ್ರಹ್ಮಚರ್ಯವನ್ನು ಪಾಲಿಸಬೇಕು. ಮಿತಾಹಾರಿಯಾಗಿರಬೇಕು. ಮಿತಭಾಷಿಯಾಗಿರಬೇಕು. ತ್ರಿಕಾಲಗಳಲ್ಲಿ ಸ್ನಾನಾಹ್ನಿಕ ಮಾಡುತ್ತಾ ಬಂದು ಇಷ್ಟದೇವತೆಯ ಪೂಜಾ ಪರಿಪಾಠ ವಿಡಬೇಕು. ಹಣೆಯಲ್ಲಿ ತ್ರಿಪುಂಢ್ರಲವನ್ನು ಧರಿಸಿದವನಾಗಿಯೂ, ಸದಾ ಅಧೋಮುಖನಾಗಿ ಓಡಾಡುವಂಥನೂ ಆಗಿರಬೇಕು. ಈ ನಿಯಮಗಳಿಗೆ ಸ್ವಲ್ಪವಾದರೂ ಧಕ್ಕೆ ಬಂದಲ್ಲಿ ಕುಪಿತಳಾದ ಮಂತ್ರದೇವತೆ ಸಾಧಕನ ಪ್ರಾಣಕ್ಕೇ ಅಪಾಯ ತಂದೊಡ್ಡಬಲ್ಲಳು.

## ಶಾಂತಿ ಮಂತ್ರ

ಸರ್ವವಿದ್ಯಾ ದೇವತೆಯಾದ ಸರಸ್ವತಿಯೇ ಶಶಂತಿಕರ್ಮದ ಅಧಿದೇವತಿಯೆಂದು ಹಿಂದೆಯೇ ಹೇಳಲಾಗಿದೆಯಷ್ಟೇ ? ಸರ್ವಕರ್ಮಗಳಲ್ಲೂ ಸರ್ವಕಾಲಗಳಲ್ಲೂ ಕಾರ್ಯಾರಂಭದ ಪೂರ್ವ ಸರಸ್ವತಿಯನ್ನೇ ಪೂಜಿಸಿ, ಸಂತುಷ್ಟಿಸಿ ಕಾರ್ಯಾರಂಭ ಮಾಡಬೇಕು. ಹಾಗೆ ಮಾಡಿದರೇನೇ ಕಾರ್ಯ ಸಿದ್ಧಿಯಾಗಿ ಸಾಧಕನು ಸಫಲ ಮನೋರಥನಾಗುವನು. ಅಂತಹ ಪ್ರಭಾವಶಾಲಿಯಾದ ಶಾಂತಿ ಮಂತ್ರವು ಈ ರೀತಿ ಇರುವುದು.

"ಭವತ್ಸಾಗರ ಸರ್ವೇ । ದುರಿತ ಪಾಪವಿನಾಶಿನಿ ॥
ಭುವನ ಮೋಹಕರೂಪೇ । ಕಾಮಿತಾರ್ಥಪ್ರದಾಯಿನಿ ॥
ಓಂ ಶ್ರೀ ಸರಸ್ವತ್ಯೈನಮಃ
ಓಂ ಶ್ರೀ ಸಾವಿತ್ರ್ಯೈನಮಃ

ಓಂ ಶ್ರೀ ಗಾಯತ್ರ್ಯೈನಮಃ
ಓಂ ಶ್ರೀ ಶಕ್ತಿ ರೂಪಿಣ್ಯೈನಮಃ
ಓಂ ಶ್ರೀ ಯುಕ್ತಿ ರೂಪಿಕಾರ್ಯೇನಮಃ
ಓಂ ಶಾಂತಿ: ಶಾಂತಿಃ ಶಾಂತಿಃ

ಎಂಬುದಾಗಿ ಇರುವುದು. ಈ ಮಂತ್ರವನ್ನು ಶನಿವಾರ ದಿನ ಪ್ರಾಥ: ಕಾಲ ಹಾಗೂ ರಾತ್ರಿಯ ಪ್ರಥಮ ಪ್ರಹರದಲ್ಲಿ ನೂರೆಂಟು ಬಾರಿ ಮಾನಸಿಕ ಜಪಮಾಡಿ ಜಪಾಂತ್ಯದಲ್ಲಿ ಮುತ್ತೈದೆಯೊಬ್ಬಳಿಗೆ ಹೂ ವೀಳೆಯವನ್ನು ಪ್ರಸಾದ ರೂಪವಾಗಿ ಕೊಡಬೇಕು. ಆಗ ಸರಸ್ವತಿಯು ಪ್ರಸನ್ನಳಾಗಿ ಸಾಧಕನ ಸರ್ವಾಭೀಷ್ಟವನ್ನೂ ನೇರವೇರಿಸಿ ಕೊಡುವಳು.

॥ ಓಂ ಭವತಾಂಣೀ ಸರ್ವಕರ್ತಾಣೀ ! ವಿಶ್ವರೂಪಿಣೀ ಸರ್ವಮಹಾ ಕಾರಿಣಿ ॥ ಪಾಪನಾಶಿನಿ ಪದ್ಮಪೂಸಿನಿ ! ಲೋಕ ಲೋಕ ನಿವಾಸಿನಿ॥

ಈ ಮಂತ್ರವದ್ನು ಪ್ರತಿದಿನವೂ ಒಂದು ಮೂಹೂರ್ತಕಾಲ ತಪ್ಪದೇ ಜಪಿಸುತ್ತಾ ಬಂದಲ್ಲಿ ಮಂಗಳಾದೇವಿಯು ಸಂತುಷ್ಟಳಾಗಿ ಸದಾ ಗೃಹಶಾಂತಿಯನ್ನೂ, ಧನ ಕನಕಾದಿ ಅಷ್ಟೈರ್ಶವನ್ನೂ ಕರುಣಿಸಿ ಕಾಪಾಡುವಳು.

# ವಶೀಕರಣ ಕರ್ಮ

ಎಲ್ಲರಿಗೂ ಒಳ್ಳೆಯವರಾಗಿರುವುದೇ ವಶೀಕರಣದ ಮೂಲತತ್ವ. ಆದರೆ ಇದು ಎಲ್ಲರಿಗೂ ಸಾಧ್ಯವಾಗದೇ ಇರುವುದರಿಂದ ಕೆಲವೊಂದು ವೇಳೆ ಸಾಧನಾ ಮಾರ್ಗವನ್ನು ಅನುಸರಿಸಬೇಕಾಗುವುದು.

॥ ಮನ್ಯಥೋ ವಶನಭೂತಿ ವಶ್ಯತೋ ಆಶನದೂತಿ ॥

ಇದು ವಶೀಕರಣ ಕರ್ಮದ ಮೂಲ ಮಂತ್ರ. ಸಾಧಕನು ಪೌರ್ಣಿಮಿಯ ದಿನ ರಾತ್ರಿ ಪ್ರಥಮ ಜಾವದಲ್ಲಿ ಕೆಂಡ ಸಂಪಿಗೆಯ ಮರದಡಿಯಲ್ಲಿ ಕುಳಿತು ಒಂದು ಲಕ್ಷದ ಒಂದುಬಾರಿ ಚಿತ್ತಶಾಂತಿಯಿಂದ ಜಪಿಸಿದಲ್ಲಿ ಕರ್ಮದ ಅಧಿದೇವತೆಯಾದ ರತಿಯು ಸುಪ್ರೀತಳಾಗಿ ಸಿದ್ಧಿ ನೀಡುವಳು.

ಮೊದಲು ಸಾಧಕನಾಗಿ ಬುದ್ಧಿಯನ್ನು ಪಡೆದು ಕೊನೆಗೆ ಸಿದ್ಧಪುರುಷನೆನಿಸಿಕೊಂಡಾಗಲೇ ಈ ವಶೀಕರಣದ ಪ್ರಯೋಗ ಮಾಡಬಹುದು. ಅದರಿಂದ ಪ್ರಯೋಜನ ಪಡೆಯಲೂ ಬಹುದು. ಹಾಗೆ ಮಾಡದೇ, ಬೀಜ ಮಂತ್ರದಿಂದ ಅಧಿದೇವತೆಯನ್ನು ಪ್ರಸನ್ನಗೊಳಿಸದೇ ಸಿದ್ಧಿಯನ್ನು ಪಡೆಯದೇ ಸಾಧಕನೆನಿಸಿಕೊಳ್ಳದೇ ಈ ವಶೀಕರಣ ಪ್ರಯೋಗವನ್ನು ಮಾಡಿ ಸಫಲತೆಯನ್ನು ಕಾಣುವುದೆಂದರೆ ಅದೊಂದು ಮಹಾ ಮೂರ್ಖತನವೇ ಸರಿ. ಯಾವ ಕರ್ಮವಾದರೂ ಸರಿಯೇ ಮೊದಲು ಆಯಾಯಾ ಕರ್ಮದ ಅಧಿದೇವತೆಗಳಿಂದ ಸಿದ್ಧಿಯನ್ನು ಪಡೆದೇ ಕಾರ್ಯೋನ್ಮುಖರಾಗಬೇಕು.

## ಪ್ರಯೋಗಗಳು

### ಸ್ತ್ರೀ ವಶೀಕರಣ ಪ್ರಯೋಗ

ಶಂಖ, ಪುಷ್ಪ ಮತ್ತು ಮಲ್ಲಿಗೆ ಮೊಗ್ಗು ಇವೆರಡನ್ನೂ ಕರವೀರ ರಸದಲ್ಲಿ ಮಿಶ್ರಣ ಮಾಡಿ ಅದರ ಕಾಡಿಗೆಯನ್ನು ಯಾವ ಸ್ತ್ರೀಗೆ ಹಚ್ಚಿಕೊಳ್ಳಲು ಕೊಡುವಿರೋ ಆಕೆ ಖಂಡಿತವಾಗಿ ಮುಂದೆ ಒಂದು ಪಕ್ಷದ ಒಳಗಾಗಿ ನಿಮ್ಮ ವಶಾನುವರ್ತಿಯಾಗುವಳು.

ನವಿಲುಗರಿಯ ಕಣ್ಣು, ಪಚ್ಚೆ ಕರ್ಪೂರ, ಗುಲಾಬಿ ಹೂವಿನ ಎಸಳು ಇವು ಮೂರನ್ನೂ ಒಂದು ಹೊಸ ತಾಮ್ರ ಪಾತ್ರೆಗೆ ಹಾಕಿ ಅದರಲ್ಲಿ ಸ್ವಲ್ಪ




ನೀರನ್ನು ಹುಯ್ಯಬೇಕು.. ನಂತರ ಅದನ್ನು ಯಾರ ಕಣ್ಣಿಗೂ ಬೀಳದ ಸ್ಥಳ ದಲ್ಲಿ ಏಳು ದಿನಗಳವರೆಗೆ ಇಡಬೇಕು. ಆ ಮೇಲೆ ಆ ನೀರನ್ನು ನೀವುಯಾವ ಸ್ತ್ರೀಗೆ ಕುಡಿಯುವ ನೀರಿನಲ್ಲಿ ಬೆರೆಸಿ ಕೊಡುವಿರೋ ಆಕೆ ಖಂಡಿತವಾಗಿಯೂ ನಿಮ್ಮ ದಾಸಿಯಾಗುಳಿವಳು.

ಹತ್ತಿಗಿಡದ ಬೇರು ಮತ್ತು ಮುತ್ತುಗದ ಕುಡಿ, ಇವೆರಡನ್ನೂ ಚೆನ್ನಾಗಿ ಸುಟ್ಟು ಬೂದಿಮಾಡಿ ಆ ಭಸ್ಮವನ್ನು ನೀವು ಧರಿಸಿದರೆ ಆಗ ಸರ್ವ ಜನರು ನಿಮ್ಮ ವಶಾನುವರ್ತಿಯಾಗುವರು.

ಮಂಗಳವಾರದಂದು ಅಕ್ಕಿ ಹಿಟ್ಟಿನಲ್ಲಿ ಅರೆದಾಳವನ್ನು ನಿರ್ಮಿಸಿ ಅದರಲ್ಲ ನೀವು ಇಚ್ಛಿಸಿದ ಸ್ತ್ರೀಯ ಹೆಸರನ್ನು ಬರೆದು ಹನ್ನೊಂದು ಬಾರಿ ಮಂತ್ರವನ್ನು ಹೇಳಿ ಅದನ್ನವಳಿಗೆ ತಿನ್ನಲು ಕೊಟ್ಟರೆ ಆಕೆ ಮಂತ್ರಮುಗ್ಧ ಹಾವಿನಂತೆ ನಿಮ್ಮನ್ನೇ ಹಿಂಬಾಲಿಸುವಳು. ಇದರ ಮಂತ್ರ ಓಂ ಘೂಂ ಅಸ್ತ್ರಾಯ ಫಟ್ ಸ್ವಾಹಾ ಎಂದು.

ಬಿದಿರು; ಭಸ್ಮ. ಕೇಸರಿ, ಸಮುದ್ರನೊರೆ ಇವು ಮೂರನ್ನೂ ಸಮ ಭಾಗವಾಗಿ ಸೇರಿಸಿ ಚೂರ್ಣ ಮಾದಬೇಕು. ಈ ಚೂರ್ಣವನ್ನು ಅಭಿಮಂತ್ರಿಸಿ ಯಾವ ಸ್ತ್ರೀಯ ತಲೆಯ ಮೇಲೆ ಹಾಕುವಿರೋ ಆ ಸ್ತ್ರೀಯು ಖಂಡಿತವಾ ಗಿಯೂ ನಿಮ್ಮ ವಶವಾಗುವಳೆಂದು ತಿಳಿಯಿರಿ.

ಕನ್ಯೈದಲೇ ಎಲೆಯ ರಸದಲ್ಲಿ ಹಾಗಲ ಬೀಜವನ್ನು ತೆಯಿಡು ಆ ಗಂ ಧವನ್ನು ನೀವು ತಿಲಕದಂತೆ ಧರಿಸಿ ಯಾವ ಸ್ತ್ರೀಯ ಮುಂದೆ ಹಾಯುವಿರೋ ಆ ಸ್ತ್ರೀಯು ಆಜನ್ಮ ದಾಸಿಯಾಗುವಳು.

ರಾತ್ರಿಯ ಕೊನೆಯ ಪ್ರಹರದಲ್ಲಿ ಪುರುಷನು ತನ್ನ ವೀರ್ಯವನ್ನು ಆಡಿನ ಹಾಲಿನೊಂದಿಗೆ ಬೆರೆಸಿ ಇಚ್ಛಿತ ಸ್ತ್ರೀಯ ನೆತ್ತಿಗೆ ಲೇಪಿಸಿದಲ್ಲಿ ಆ ಸ್ತ್ರೀಯು ಖಂಡಿತವಾಗಿಯೂ ಪುರುಷನಿಗೆ ವಶವಾಗುವಳು.

ಬಿಳೀ ಎಕ್ಕದ ಬೇರನ್ನೂ, ಬಾಳೆಯ ನಾರನ್ನೂ ಹಸುವಿನ ತುಪ್ಪದಲ್ಲಿ ಚೆನ್ನಾಗಿ ಅರೆದು ಅದರ ಗಂಧವನ್ನು ಹುಣ್ಣಿಮೆಯ ದಿನ ನೀವು ಯಾವ ಸ್ತ್ರೀಯಳ ಸ್ತನಗಳಿಗೆ ಲೇಪಿಸುವಿರೋ ಆಕೆ ನಿಮ್ಮ ವಶಕ್ಕೆ ಬರುವುದರಲ್ಲಿ ಯಾವ ಸಂದೇಹವೂ ಇಲ್ಲ.

ಹಸಿ ಅಡಿಕೆಯ ತಿರುಳನ್ನು ಒಣ ಕೊಬ್ಬರಿಯೊಂದಿಗೆ ಬೆರೆಸಿ ಇಚ್ಛಿತ ಸ್ತ್ರೀಯಳಿಗೆ ತಾಂಬೂಲದೊಂದಿಗೆ ಮಡಚಿ ಕೊಟ್ಟಲ್ಲಿ ಆಕೆ ಅದನ್ನು ತಿಂದನಂತರ, ಸದಾ ನಿಮ್ಮ ಧ್ಯಾನದಲ್ಲಿಯೇ ಕೊರಗುವಳಲ್ಲದೇ ನಿಮ್ಮ ವಶಾನುವರ್ತಿಯಾಗಿ ಎಂದೂ ನಿಮ್ಮ ಮಾತನ್ನು ಮೀರಿ ನಡೆಯುವದಿಲ್ಲ.

ನೀವು ವಶಪಡಿಸಿಕೊಳ್ಳಬೇಕಾದ ಸ್ತ್ರೀಯ ಮೇಲೆ ನೀವು ವಶೀಕರಣ ಮಾಡಬಯಸಿದಲ್ಲಿ ಅವಳ ತುರುಬಿನ ಒಂದು ಹೂವು, ಅವಳು ತಲೆ ಬಾಚಿ ಕೊಂಡ ಜಾಗದಲ್ಲಿ ಬಿದ್ದ ಅವಳ ತಲೆಕೂದಲು ಹಾಗೂ ಅವಳ ಎಡಗಾಲ ಕೆಳಗಿನ ಮಣ್ಣು ಇವು ಮೂರನ್ನೂ ಅವಳಿಗೆ ತಿಳಿಯದಂತೆ ಸಂಪಾದಿಸಿ ಅದನ್ನು ಅಭಿಮಂತ್ರಿಸಬೇಕು. ಮತ್ತು ಅದನ್ನೊಂದು ಗಂಟು ಕಟ್ಟಿ ಹುಣ್ಣಿಮೆಯ ದಿನ ರಾತ್ರಿ ಅವಳಿಗರಿವಿಲ್ಲದಂತೆಯೇ ಅವಳ ದಿಂಬಿನಡಿಯಲ್ಲಿಟ್ಟು ಬರಬೇಕು ಅಂದಿನಿಂದಲೇ ಆ ಸ್ತ್ರೀಯು ನಿಮ್ಮ ಕೈಗೊಂಬೆಯಾಗುಳಿವುದರಲ್ಲಿ ಯಾವ ಸಂದೇಹವೂ ಇಲ್ಲ.

ನಿಮ್ಮ ಕೈಕಾಲುಗಳ ಉಗುರನ್ನು ಇಚ್ಛಿತ ಸ್ತ್ರೀಯ ಕಿವಿಯ ಕುಗ್ಗಿಯನ್ನೂ ಬೆರಸಿ ಸುಟ್ಟು ಅದರ ಕಾಡಿಗೆಯನ್ನು ನೀವು ತಿಲಕದಂತೆ ಹಚ್ಚಿಕೊಂಡಲ್ಲಿ ಹಾಗೂ ಸ್ತ್ರೀಯು ಕಣ್ಣಿಗೆ ಅಂಜನದಂತೆ ಲೇಪಿಸಿಕೊಂಡದ ಆ ಸ್ತ್ರೀಯು ಸದಾ ನಿಮ್ಮ ಅಜ್ಞಾನುವರ್ತಿಯಾಗುಳಿವಳು.

ಮಂಗಳವಾರವೇ ಹುಣ್ಣಿಮೆ ಬರುವುದನ್ನೇ ಸಾಧಿಸಿ ಆದಿನ ರಾತ್ರಿ ಕೇದಿಗೆ ಹುವಿನ ಮಡಿಯನ್ನು ತಂದು ಔಡಲ ಎಣ್ಣೆಯಲ್ಲಿ ಅದರ ಕಾಡಿಗೆಯನ್ನು ತಯಾರಿಸಿ ನೀವು ವಶಪಡಿಸಿಕೊಳ್ಳಬೇಕಾದ ಸ್ತ್ರೀಯ ಕಣ್ಣಿಗೆ ಅದನ್ನು ಹಚ್ಚಿದರೆ ಆಜನ್ಮ ಪರ್ಯಂತರ ಆಕೆ ನಿಮ್ಮ ನೆಚ್ಚಿನ ಗೆಳತಿಯಾಗುಳಿವಳು.

## ಸರ್ವ ವಶೀಕರಣದ ಬೀಜಮಂತ್ರ

ಓಂ ಹ್ರೀಂ ವಶ್ಯಮೇವ ತ್ರೈಲೊಕ್ಯೆ
ವಶೀಕರಣ ಪ್ರಭಾಸ್ವಿತ: ||

ಎಂಬುದಾಗಿ ಬೀಜ ಮಂತ್ರವಿರುವುದು.

ಬಾಣಂತಿ ಸ್ತ್ರೀಯ ಬಲಗೈ ಹಸ್ತವನ್ನು ಸಂಪಾದಿಸಬೇಕು ಶುಕ್ರವಾರ ದಂದು ಗೋಮೂತ್ರದಲ್ಲಿ ಅದನ್ನು ಚೆನ್ನಾಗಿ ಶುದ್ಧೀಕರಿಸಿ ಅದರ ಮೇಲೆ ಗೋಪೀ ಚಂದನವನ್ನು ಲೇಪಿಸಬೇಕು. ಆ ರಾತ್ರಿ ಉತ್ತರ ದಿಕ್ಕಿಗೆ ಮುಖ

ಮಾಡಿ ಕುಳಿತು ಕಾರ್ಯಸಿದ್ಧಿಯಾಗಲೆಂದು ಅದಕ್ಕೆ ವಿದ್ಯುಕ್ತವಾಗಿ ಪೂಜಿ ಯ್ಯಬೇಕು. ಹಸ್ತಕ್ಕೆ ದೇವಿಯನ್ನು ಆಹ್ವಾನಿಸಿದ ತರುವಾಯ ಅದರಿಪುರ ಹೋಮಕುಂಡವನ್ನು ನಿರ್ಮಿಸಿ ಬಿಳಿ ಎಳ್ಳು, ಕಣಲ ಹೂವು, ಮತ್ತು ತು ದಿಂದ ಆಹುತಿ ಕೊಡುತ್ತಾ ಬೀಜ ಮಂತ್ರವನ್ನು ಸಾವಿರದ ಒಂದು ಬಾ ಪಠಣ ಮಾಡಬೇಕು. ಆಗ ದೇವಿಯೊಲಿದು ವಶೀಕರಣದ ಸತ್ವವನ ಹಸ್ತಕ್ಕೆ ನೀಡುವಳು. ನಂತರ ಹೋಮಕ್ಕೆ ಜೇನುತುಪ್ಪದ ಪೂರ್ಣಾಹು ಯನ್ನಿತ್ತು ಕಾರ್ಯ ಮುಕ್ತಾಯಗೊಳಿಸಬೇಕು. ಬಳಿಕ ಆ ಹಸ್ತವನ್ನು ಜ ತ್ರಿನ ಜೇಪ ಕೋಟೆಗಳಲ್ಲಿ ಯಾವ ಪ್ರಾಣಿಗೇ ಆಗಲಿ ನೀವು ಸ್ಪರ್ಶಿಸಿದೊ ನೆಯೇ ಅವು ಸೂಕ್ಷ್ಮದರ್ಶಿಯಂತೆ ನಿಮ್ಮನ್ನೇ ಹಿಂಬಾಲಿಸುವವು.

### ಇನ್ನೊಂದು ವಿಧ

ಕಪ್ಪೆಯಿ ಚರ್ಮದಲ್ಲಿ ಒಂದು ತುಂಡು ಉಕ್ಕನ್ನು ಕಟ್ಟಿ ಹಳದೀ ದಾ ದಿಂದ ಅದನ್ನು ಬಂಧಿಸಿ ತಾಯಿತದಂತೆ ಮಾಡಿ ಮೇಲೆ ಹೇಳಿದ ರೀತಿಯಲ್ಲಿ ವಿಧಿಪೂರ್ವಕವಾಗಿ ಹೋಮ ಹವನಾದಿಗಳನ್ನು ಮಾಡಿ ಅದನ್ನು ನಿಮ್ಮ ದೇಕ ಪಲ್ಲ ಧರಿಸಿದರೆ ಮನುಷ್ಯ ವರ್ಗ ಮಾತ್ರ ನಿಮ್ಮ ವಶಕ್ಕೆ ಬರುವುದು.

ಬಿಲ್ವಪತ್ರೆಯ ಮರದ ಬೇರನ್ನು ತಂದು ಅದನ್ನು ಗಂಧದಂತೆ ತೆಯಿದ ಅದಕ್ಕೆ ಕರೀ ಎಳ್ಳು ಕೆಂಪು ಕರ್ಪೂರದ ಮಿಶ್ರಣ ಮಾಡಿ ಆ ತಿಲಕವನ ಹಣೆಗೆ ಧರಿಸಿಕೊಂಡು ಯಾರ ಸಮ್ಮುಖಕ್ಕೆ ಹೋಗುವಿರೋ ಅವರು ನಿಮ ವಶಶಾಗುವದು ಖಂಡಿತ.

ಮುಳ್ಳುಮುತ್ತುಗದ ಕುಡಿಯೊಂದಿಗೆ ಔಡಲ ಗಿಡದ ಬೇರನ್ನು ಸೇರಿ ಅದನ್ನು ಚೆನ್ನಾಗಿ ಕುಟ್ಟಿ ರಸ ತೆಗೆಯಬೇಕು. ಅದಕ್ಕೆ ಎಕ್ಕೆಗಿಡದ ಹಾಲನ ಬೆರಸಿ ಇಚ್ಛಿತ ವ್ಯಕ್ತಿಯ ಸ್ನಾನದ ನೀರಿಗೆ ಅದನ್ನು ಸ್ವಲ್ಪಮಾತ್ರ ಬೆರಸಿದರು ಸಾಕು ಅವರು ನಿಮ್ಮ ದಾಸಾನುದಾಸರಾಗುಳಿವರು.

ಬಿಳೇ ಎಳ್ಳು, ಹುಣಸೇ ಉಪ್ಪು, ನೆಗ್ಗಿಲ ಮುಳ್ಳು ಇವು ಮೂರನ್ ಆಡಿನ ಹಾಲಿನೊಂದಿಗೆ ಅರೆದು ನೆರಳಲ್ಲೇ ಒಣಹಾಕಬೇಕು. ಅದು ಗುಳಿ ಮಾಡುವಷ್ಟರ ಮಟ್ಟಿಗೆ ಬಂದಾಗ ಅದರಿಂದ ಗುಳಿಗೆಗಳನ್ನು ಮಾಡಿ ಬಾಯ ಟ್ಟಿಕೊಂಡು ನೀವು ಯಾರೊಂದಿಗೆ ಮಾತಾಡುವಿರೋ ಅವರು ನಿಮ್ಮ ವ ರಾಗುವರೆಂಬುದನ್ನು ನಿಶ್ಚಿತವಾಗಿ ತಿಳಿಯಬೇಕು-

ದಾಳಿಂಬರೆ ಬೀಜ, ಸಾಸುವೆ, ಕರಿಉದ್ದು, ಸೈಂಧಲವಣ ಇವುಗಳ ಚೂರ್ಣವನ್ನು ಸಿದ್ಧಪಡಿಸಿ ಹಂದಿಯ ರಕ್ತದಲ್ಲಿ ಬೆರೆಸಬೇಕು. ಅದನ್ನು ತಿಲಕದಂತೆ ಹಣೆಗೆ ಹಚ್ಚಿಕೊಂಡಲ್ಲಿ ಸರ್ವಲೋಕವೂ ವಶವಾಗುವದು.

ಕರಿಯ ಹಸುವಿನ ತುಪ್ಪ, ಬಿಳಿಎಳ್ಳು, ಶ್ರೀಕರ ಕಸ್ತೂರಿ ಇವುಗಳ ಮಿಶ್ರಣದಿಂದ ತಯಾರಿಸಿದ ತಿಲಕವನ್ನು ಹಚ್ಚಿಕೊಂಡರೆ ಅದೊಂದು ಉತ್ತಮವಾದ ವಶೀಕರಣವಾಗುವದು.

ಜಾಲೀಗಿಡದ ಬೇರನ್ನು ಹಾಲಿನಲ್ಲಿ ತೆಯಿದು ಗೋಪೀಚಂದನ, ಗೋರೋಚನ ಬೆರಸಿ ಅದನ್ನು ಅಂಗೈ ಅಂಗಾಲುಗಳಿಗೆ ಲೇಪಿಸಿಕೊಂಡಲ್ಲಿ ಅದು ಉದುರಿ ಹೋಗುವವರೆಗೂ ಸರ್ವಲೋಕವೂ ನಿಮ್ಮ ಹಿಡಿತದಲ್ಲಿರುವುದೆಂಬುದಕ್ಕೆ ಯಾವ ಸಂದೇಹವೂ ಇಲ್ಲ.

ಕೇರು ಬೀಜವನ್ನು ಕಾಡಿಗೆ ಹಾಲಿನಲ್ಲಿ ಅರೆದು ಅದರ ತಿಲಕವನ್ನು ಹಣೆಗೆ ಹಚ್ಚಿಕೊಳ್ಳಬೇಕು. ಆಗ ನಿಮ್ಮ ದರ್ಶನ ಮಾತ್ರದಿಂದಲೇ ಸರ್ವವೂ ನಿಮ್ಮ ವಶಕ್ಕೆ ಬರುವುದೆಂಬುದಾಗಿ ತಿಳಿಯಬೇಕು.

ನೀಲವಂತಿಕೆ ಗಿಡದ ಚಿಗುರಿನೊಂದಿಗೆ ತುಳಸಿ ಬೀಜವನ್ನು ಬೆರಸಿ ಆಡಿನ ಹಾಲಿನಲ್ಲಿ ಅದರ ಗಂಧವನ್ನು ಸಿದ್ಧಪಡಿಸಬೇಕು. ಅದರ ತಿಲಕವನ್ನು ನೀವು ಹಚ್ಚಿಕೊಂಡಾಗ ನಿಮ್ಮನ್ನು ನೋಡಿದವರೆಲ್ಲಾ ನಿಮ್ಮ ವಶದಲ್ಲಿ ಬರುವರು.

ತಿನ್ನುವ ಎಲೆಯಲ್ಲಿ ಮಂತ್ರಿಸಿದ ದರ್ಭೆ ಕುಡಿಯನ್ನು ಸೇರಿಸಿ ತಿನ್ನಲು ಕೊಡಬೇಕು ಅದನ್ನು ತಿಂದವರು ನಿಮ್ಮ ವಶಕ್ಕೆ ತಪ್ಪದೇ ಬರುವುದರಲ್ಲಿ ಸಂದೇಹವೇ ಇಲ್ಲ.

### ಸ್ಥಾನಿಕ ವಶೀಕರಣ ಮಂತ್ರ

ಓಂ ನಮೋ ಪಂಚ ಮಹಾ ಭೂತೇ ಗ್ರಹೀ ಯಕ್ಷಿದರೀಚನಾ ||
ಸರ್ವಕಾಲೇ ಸರ್ವಭೂತೇ ಸರ್ವಶಾಂತಿತ್ರುದಾಯನಾ ||

ಈ ಮಂತ್ರವನ್ನು ನೂರೆಂಟು ಬಾರಿ ಜಪಿಸಿ ವಶೀಕರಣ ಪ್ರೋಕ್ಷಣಾ ಜಲವನ್ನು ಇಚ್ಛಿಸಿದ ಸ್ಥಳಕ್ಕೆ ಪ್ರೋಕ್ಷಿಸಿದಲ್ಲಿ ಎಷ್ಟೇ ತಕರಾರು ತೊಂದರೆಗಳಿದ್ದರೂ ಆ ಸ್ಥಳವು ನಿರ್ವಿವಾದದಿಂದ ನಿಮ್ಮ ವಶಕ್ಕೆ ಖಂಡಿತವಾಗಿಯೂ ಬರುವುದು.

## ಶತ್ರುವಶೀಕರಣ ಮಂತ್ರ

ಓಂ ನಮೋ ಭಗವತೇ ರುದ್ರಾಯ ಶತ್ರುಸ್ತಂಭಯ ಕಳಾತ್ರಯ ||

ಈ ಮಂತ್ರವನ್ನು ನೂರೊಂದುಬಾರಿ ಜಪಿಸಬೇಕು. ಜಪಕಾಲದಲ್ಲಿ ಮಂತ್ರದ ಕೊನೆಯಲ್ಲಿ ಶತ್ರುವಿನ ಹೆಸರಿನೊಂದಿಗೆ ಅಸ್ಯೈ-ಎಂದು ಮಾತ ಪೂರ್ತಿಗೊಳಿಸಬೇಕು. ಆಗ ಶತ್ರು ಎಂತಹ ಆಜನ್ಮವೈರಿಯಿದ್ದಾಗ್ಯೂ ನಿಮ ಆಜ್ಞಾನುವರ್ತಿಯಾಗಿ ಬರುವನು.

ಬಿಲ್ವ ಪತ್ರದ ಮೇಲೆ ಮೇಕೆಯ ರಕ್ತದಿಂದ ನಿಮ್ಮ ಶತ್ರುವಿನ ಹೆಸರನ್ನು ಬರೆಯಿರಿ ನಂತರ ಆದನ್ನು ಹರಿಯುವ ನೀರಿನಲ್ಲಿ ತೇಲಿಬಿಡಿ ಅದು ದೂರ್ರ ದೂರ ಹೋದಂತೆಲ್ಲಾ ನಿಮ್ಮ ಬಗೆಗಿದ್ದ ಅವನ (ಳ) ವೈರತ್ವವು ದೂರವಾಗು ತ್ತಾ ಹೋಗುವದು

ಮಂಗಳವಾರ ಅಮಾವಾಸ್ಯೆಯಿರುವಂಥ ಯೋಗವನ್ನು ಆರಿಸಿಕೊಂಡು ಆದಿನ ರಾತ್ರಿ ಕೊನೆಯ ಜಾವದಲ್ಲಿ ಸ್ಮಶಾನಕ್ಕೆ ಹೋಗಬೇಕು. ಅಲ್ಲಿ ಸುಟ್ಟು ಉಳದ ಕಟ್ಟಿಗೆ ತುಂಡೊಂದನ್ನು ತಂದು ಆ ದಿನದಿಂದ ಏಳು ದಿನ ರಾತ್ರಿ ಆದನ್ನು ವಶೀಕರಣ ಮಂತ್ರನಿಂದ ವಿಧಿಪೂರ್ವಕವಾಗಿ ಪೂಜಿಸಿ ಎಂಟನೆಯ ದಿನ ಅದನ್ನು ನಿಮ್ಮ ಶತ್ರುವಿನ ಮನೆಯ ಒಲೆಯಲ್ಲಿ ಸುಡುವಂತೆ ಏರ್ಪಾಡು ನಡೆಸಬೇಕು. ಆಗ ಆ ಕಟ್ಟಿಗೆ ಉರಿದು ಬೂದಿಯಾದಂತೆ ನಿಮ್ಮ ಬಗೆಗಿದ್ದ ನಿಮ್ಮ ಶತ್ರುವಿನ ವೈರತ್ವವೂ ಸುಟ್ಟು ಬೂದಿಯಾಗುವುದರಲ್ಲಿ ಸಂಶಯವೇ ಬೇಡ.

ಬಿಳೀ ಈರುಳ್ಳಿಯ ರಸವನ್ನು ಅಭಿಮಂತ್ರಿಸಿ ನಿಮ್ಮ ಶತ್ರು ಕುಡಿಯುವ ಪಾನೀಯದೊಂದಿಗೆ ಬೆರಸಿ ಕೊಟ್ಟರೂ ಫಲ ದೊರಕುವುದು ನಿಶ್ಚಿತ.

ಕಿರಿ ಶಂಖದಲ್ಲಿ ಕಪ್ಪೆಯ ಕಣ್ಣೊಂದನ್ನು ಕಿತ್ತು ಸೇರಿಸಿ ಆದನ್ನು ಹೊಸ ಕಪ್ಪು ಬಟ್ಟೆಯೊಂದರಲ್ಲಿ ಕಟ್ಟಿ ಅದನ್ನು ನಿಮ್ಮ ಶತ್ರುವಿನ ಮನೆಯ ಮಾಡಿನಲ್ಲಿ ದಿನವೂ ಮೂಡುವ ಸೂರ್ಯನ ರಶ್ಮಿಯು ಬೀಳುವ ಸ್ಥಳದಲ್ಲಿರಿಸಿ ಬರಬೇಕು ಅದು ಬಿಸಿಲಿನಿಂದ ಮರೆಯಾಗುವವರೆಗೂ ಶತ್ರುವಿಗೆ ನಿಮ್ಮ ಬಗೆಗಿದ್ದ ವೈರವು ಸ್ತಂಭನವಾಗುವುದು.

ಮಂಗಳವಾರದ ದಿನ ರಾತ್ರಿ ಜೋಡು ಗೂಬೆಯು ಕೂತುಹೂಂಕರಿಸು ತ್ತಿರುವ ಮರದ ತೊಗಟೆಯನ್ನು ಕತ್ತಿಯಿಂದ ಒಂದೇ ಹೊಡೆತಕ್ಕೆ ಕಿತ್ತು ತರ

ಬೇಕು. ಅದನ್ನು ಕೂಡಾ ಮೇಲೆ ಹೇಳಿದಂತೆ ಮಾಡಿನಲ್ಲಿಟ್ಟು ಬಂದರೆ ಅವ ನೆಂಥ ನಿಮ್ಮ ಆಜನ್ಮ ವೈರಿಯಾಗಿದ್ದರೂ ಮುಂದೆ ನಿಮ್ಮ ದಾಸಾನುದಾಸನಾಗಿ ಪರಿವರ್ತನೆ ಹೊಂದುವನು.

### ಪತಿ ವಶೀಕರಣ ಪ್ರಯೋಗ

ಸೋದೇ ಬೇರು, ಆರವಂತಿಕೆ ಗಿಡದ ಚಿಗುರು ಸೇವಂತಿಕೆ ಕುಸುಮ ಇವು ಮೂರನ್ನೂ ಜೇನುತುಪ್ಪದೊಂದಿಗೆ ಬೆರಸಿ ಅದನ್ನು ಪತಿಗೆ ತಿನ್ನಲು ಕೊಟ್ಟರೆ ಆ ಪತಿಯು ನಿಶ್ಚಿತವಾಗಿಯೂ ವಶವಾಗುವನು.

ಒಂದು ಔನ್ಸಿನಷ್ಟು ಬೆಲ್ಲದ ಪಾಕವನ್ನು ಮಾಡಿ ಅದರಲ್ಲಿ ಎರಡೇ ಲವಂಗವನ್ನು ನೆನೆಹಾಕಿ ಮೂರನೇ ದಿನ ಆ ಲವಂಗವನ್ನು ಬಾಳೇ ಹಣ್ಣಿನಲ್ಲಿ ಹೂತು ಅದರ ಮೂರನೇ ದಿನ ಆ ಬಾಳೆಹಣ್ಣನ್ನು ಪತಿಗೆ ತಿನ್ನಲು ಕೊಟ್ಟರೆ ಆ ಪತಿಯು ನಿಶ್ಚಿತವಾಗಿಯೂ ಅವಳ ವಶವಾಗುವುದರಲ್ಲಿ ಸಂದೇಹವಿಲ್ಲ,

### ರಾಜವಶೀಕರಣಪ್ರಯೋಗ

ದೇವದಾರು ಕಟ್ಟಿಗೆಯಿಂದ ಪ್ರತಿ ಸೋಮವಾರದಂದು ರಾತ್ರಿ ಹೋಮ ಮಾಡಿ ಮೇಕೆಯ ತುಪ್ಪವನ್ನು ಆಜ್ಯವನ್ನಾಗಿ ಉಪಯೋಗಿಸಿಕೊಂಡು ಕಣಗಲಿ ಹೂವಿನಿಂದ ಪೂರ್ಣಾಹುತಿ ಕೊಟ್ಟು ಹೋಮಾಂತ್ಯದಲ್ಲಿ ನೀವು ಯಾವ ರಾಜನನ್ನು ವಶಪಡಿಸಿಕೊಳ್ಳಬೇಕೆಂದಿರುವಿರೋ ಆ ರಾಜನ ಹೆಸರಿನೊಂದಿಗೆ "ಆಕರ್ಷಣ ಮಾಯ ಸ್ವಾಹಾ" ಎಂದು ವಶೀಕರಣ ಮಂತ್ರವನ್ನು ಉಚ್ಚರಿಸಬೇಕು. ಹೀಗೆ ಏಳು ವಾರಗಳ ವರೆಗೆ ನಡೆಸುತ್ತಾ ಬಂದು ಕೊನೆಯ ವಾರದಲ್ಲಿ ನೀವು ಹೋಮ ಭಸ್ಮವನ್ನು ಕೈಲಿ ಹಿಡಿದು ಇಚ್ಛಿತ ರಾಜನ ಸ್ಥಾನಕ್ಕೆ ಹೋದರೆ ಆ ರಾಜನು ನಿಮ್ಮ ಆಕರ್ಷಣೆಗೆ ಒಳಗಾಗುವುದು ಖಂಡಿತ.

ಬಿಳಿಯ ದರ್ಭೆಯ ಹೂವನ್ನು ಅಭಿಮಂತ್ರಿಸಿ ಅದನ್ನು ಯಾವ ರಾಜನಿಗೆ ತಾಂಬೂಲದೊಂದಿಗೆ ತಿನ್ನಲು ಕೊಡುವಿರೋ ಆ ರಾಜನು ಖಂಡಿತ ನಿಮ್ಮ ವಶವರ್ತಿಯಾಗುವನು.

ಗೋಪೀ ಚಂದನ ಹಾಗೂ ಪಚ್ಚ ಕರ್ಪೂರ ಮಿಶ್ರಣ ಮಾಡಿ ಅದನ್ನು ತಾವರೆ ಎಸಳಿನ ರಸದೊಂದಿಗೆ ಅರೆದು ಗಂಧವನ್ನು ತಯಾರಿಸಿ ಅದರ ತಿಲಕವನ್ನಿಟ್ಟು ರಾಜರೆದುರಿಗೆ ಹೋದರೆ ಅವನು ವಶವಾಗುವನು.

ಒಂಟಿಯ ಕೊಬ್ಬಿನೊಂದಿಗೆ ಆನೆಯ ಕಣ್ಣಿನ ಹಿಕ್ಕೆಯನ್ನು
ಅದನ್ನು ರಾಜನು ತನ್ನ ಮೈಗೆ ಲೇಪಿಸಿಕೊಳ್ಳುವ ಶ್ರೀಗಂಧಕ್ಕೆ ಮಿಶ್ರ
ದಲ್ಲಿ ರಾಜನು ಆ ಗಂಧವನ್ನು ತನ್ನ ಮೈಗೆ ಲೇಪಿಸಿಕೊಂಡ ಕೂಡಲೇ
ವಾಗಿ ನಿಮ್ಮ ವಶಕ್ಕೆ ಬರುವನು.

## ಸ್ವಾಮಿ ವಶೀಕರಣ ಮಂತ್ರ

ಓಂ ಹ್ರೀಂ ಹ್ರೂಂ ವಶ್ಯ ಮೇವಂ ಕುರುಃ

ಧನಿಷ್ಠಾ ನಕ್ಷತ್ರ ದಿನದಂದು ನದಿ ದಂಡೆಗೆ ಹೋಗಿ ಬಲ್ವವೃಕ್ಷ
ಕೂತು ಕವಡೆ ಮೂಲೆಯಿಂದ ಮೇಲಿನ ಮಂತ್ರದ ಜಪವನ್ನು ನ
ಎಂಟು ಬಾರಿ ಮಾಡಿದರೆ ಸ್ವಾಮಿಯು ನಿಶ್ಚಿತವಾಗಿಯೂ ವಶವಾ
ಇದಕ್ಕಾಗಿ ಕುಕ್ಕು ಟಾಸನವನ್ನು ಉಪಯೋಗಿಸಬೇಕು.

## ಯಕ್ಷಣಿ ಸಿದ್ಧಿ

ದೇವದೂತ, ಭೂತ, ಪಿಶಾಚಿ ಹಾಗೂ ಅದೃಶ್ಯ ಗಣಗಳು
ಪೈಕಿ ಯಕ್ಷಣೀ ಸಾಧನೆಯು ಅತ್ಯಂತ ಪವಿತ್ರವಾದುದೂ, ಹಾಗೂ
ಕಾರ್ಯವೂ ಆಗಿರುವುದು. ಎಷ್ಟೋ ಬಾರಿ ಮಾಡಲಾಗದ ಅಘಟಿ
ವಳಿಗಳನ್ನೆಲ್ಲಾ ಈ ಯಕ್ಷಣೀ ಕರ್ಮ ಸಾಧನೆಯಿಂದ ಲೀಲಾ
ಮಾಡಿ ತೋರಬಹುದಾಗಿದೆ. ಇದರ ಸಾಧನೆ ಕೂಡಾ ಸದಾಚಾರ
ಯಬೇಕಾಗಿರುವುದರಿಂದ ಸಾಧಕನು ಸಿದ್ಧಿಯ ವೇಳೆಯಲ್ಲಿ ಕೆಲವು ವ್ರ
ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸಬೇಕು.

ಶುಕ್ಲ ಪಕ್ಷದ ಪುಷ್ಯ ನಕ್ಷತ್ರ ದಿನದಂದು ಸಾಧಕನು ಹಗಲು
ಹಾರಿಯಾಗಿದ್ದು ಸಂಜೆಯ ಗೋಧೂಳೀಲಗ್ನದ ಸಮಯಕ್ಕೆ ಸರಿಯ
ಯಿಂದ ಪಶ್ಚಿಮದಿಕ್ಕಿಗಿರುವ ಬನ್ನಿಮರದಡಿಯಲ್ಲಿ ಕುಳಿತು ಏಕೋ
ಸ್ಸಿನಿಂದ ಯಕ್ಷಿಣೀದೇವಿಯ ಬೀಜಮಂತ್ರವನ್ನು ಐದುಸಾವಿರ ಬಾರಿ
ದೇವಿಯು ಪ್ರಸನ್ನಳಾಗಿ ಸಿದ್ಧಿ ನೀಡುವಳು ಆಬೀಜಮಂತ್ರವು ಇಂ

ಯಕ್ಷ ತಕ್ಷಮನೇಗಚ್ಛ ಇಚ್ಛಿತಾರ್ಥ ಪ್ರದಾಯಿನಿ!!
ದೀಕ್ಷೆ ದೇಹಿ ರೀಕ್ಷ ತ್ರಾಹಿ ಕರೋಕ್ಷ ಪೂಜಿತೆಸೂಕ್ಷ್ಮಿಣಿ!!

ಎಂಬುದಾಗಿ ಇರುವುದು.

ಪ್ರಾರಂಭದಿಂದ ಐದು ದಿನಗಳ ಪರ್ಯಂತರ ನಿಯಮಿತ ವೇಳೆಗೆ
ಈ ರೀತಿ ಸಾಧನೆ ಗೈದರೆ ಐದನೇ ದಿನ ರಾತ್ರಿ ಪ್ರಥಮ ಜಾವದಲ್ಲಿ
ಯು ಪ್ರತ್ಯಕ್ಷಳಾಗಿ ಶುಭ ಫಲಾಧಿಗಳನ್ನು ಕೊಡುವದಲ್ಲದೇ ಧನ ಕನ
ಶ್ವರ್ಯವನ್ನೂ ನೀಡುವಳ.

## ದೇವಸುಂದರಿ ಯಕ್ಷಿಣಿ ಗೃಹ

ಓಂ ಆಗಚ್ಛ ದೇವಸುಂದರಿ ಮಾವಶ್ಯಂ ಕುರು.

ಶುಕ್ರವಾರ ದಿನದಂದು ತ್ರಿವೇಣೀ ಸಂಗಮದಲ್ಲಿ ದೇವಸುಂದರಿ ಯಕ್ಷಿ
ಪೂಜೆ ಮಾಡಬೇಕು. ಪೂಜಾ ಕಾಲದಲ್ಲಿ ಮೇಲಿನ ಮಂತ್ರವನ್ನು
ರು ಐದುಬಾರಿ ಜಪಿಸಬೇಕು. ಪೂಜಾ ಮೂರ್ತಿಯನ್ನು ಹೆಣ್ಣಾಗಿ
ದಕ್ಕೆ ಆರು ಕೈಗಳನ್ನು ಇಡಬೇಕು. ಆ ಕೈಗಳಲ್ಲಿ ಕ್ರಮ ಪ್ರಕಾರ
ಕೆಳಗೆ ಕಾಣಿಸಿದ ವಸ್ತುಗಳನ್ನಿರಿಸಬೇಕು. ಬಲಭಾಗದ ಮೊದ
ಯಲ್ಲಿ ಕುಂಕುಮ-ಮತ್ತು ಅರಿಸಿಣವನ್ನಿಡಬೇಕು. ಎರಡನೇ ಕೈಯಲ್ಲಿ
ತುಂಡೊಂದನ್ನಿಡಬೇಕು. ಮೂರನೇ ಕೈಯಲ್ಲಿ ಚಿನ್ನದ ನಾಣ್ಯ
ಡಬೇಕು. ಎಡಭಾಗದ ಮೊದಲನೇ ಕೈಯಲ್ಲಿ ನಿಂಬೆಹಣ್ಣೊಂದಿಡ
ಎರಡನೇ ಕೈಯಲ್ಲಿ ಮಂದಾರ ಪುಷ್ಪವನ್ನಿಡಬೇಕು. ಮೂರನೇ
ತಾಮ್ರದ ಚೂರೊಂದನ್ನಿಡಬೇಕು. ಇದಾದ ಬಳಿಕ ವಿಧ್ಯುಕ್ತವಾಗಿ
ನೆರವೇರಿಸಿದರೆ ದೇವಸುಂದರಿಯು ಸಂತುಷ್ಟಳಾಗಿ ತನ್ನ ಆಯಾ ವರದ
ಲ್ಲಿನ ಪದಾರ್ಥಗಳಿಗುಣವಾಗಿ ಫಲ ನೀಡುವಳು. ಕುಂಕುಮ ಮತ್ತು
ವನ್ನಿಟ್ಟ ಹಸ್ತದಿಂದ ಸದಾ ಸುಗುಣ ಸೌಭಾಗ್ಯಗಳನ್ನೂ, ಕಬ್ಬಿಣದ
ಟ್ಟ ಹಸ್ತದಿಂದ ಧನಕನಕಾದಿಗಳನ್ನೂ, ನಿಂಬೇಹಣ್ಣನ್ನಿಟ್ಟ ಹಸ್ತದಿಂದ
ಆರೋಗ್ಯ ಭಾಗ್ಯಾಧಿಗಳನ್ನೂ ಮಂದಾರ ಪುಷ್ಪವನ್ನಿಟ್ಟ ಹಸ್ತದಿಂದ
ಶಾಂತಿಯನ್ನೂ ತಾಮ್ರದ ತುಂಡಿಟ್ಟ ಹಸ್ತದಿಂದ ಪರಪೀಡನೆ ಹಾಗೂ
ಪ್ರೇತಾದಿಗಳ ಚೇಷ್ಟೆಯಿಂದ ಸದಾ ನಿಮ್ಮನ್ನು ರಕ್ಷಿಸುವಳು.

## ರೂಪವತಿ ಯಕ್ಷಿಣೀ ಕರಣ

ಓಂ ಹ್ರೀಂ ರೂಪವತಿ ಯಕ್ಷಿಣೀ ಮೇ ವಶ್ಯಂ ಕುರು ಸ್ವಾಹಾ

ಧನಿಷ್ಠಾ ನಕ್ಷತ್ರದಿಂದ ಏಳು ದಿನಗಳವರೆಗೆ ಪ್ರತಿದಿನ ನೂರೆಂಟು ಬಾರಿ
ಮಂತ್ರವನ್ನು ಜಪಿಸುತ್ತಾ ರೂಪವತಿ ಯಕ್ಷಿಣಿಗೆ ಹಣೆಯ ರಕ್ತದಿಂದ

ಅರ್ಘ್ಯವನ್ನು ಕೊಡಬೇಕು. ಆಗ ಎಂಟನೆಯ ದಿನ ರಾತ್ರಿ ಅವಳು ನಿಮಗೆ ಕನಸಿನಲ್ಲಿ ದರ್ಶನವಿತ್ತು ಪುನಃ ಕಾಮನೆಯನ್ನು ಪೂರ್ತಿಗೊಳಿಸುವಳು.

## ಪ್ರಿಯಂವದಾ ಯಕ್ಷಿಣೀ ಕರಣ

ಓಂ ಆಗಚ್ಛ ಆಗಚ್ಛ ಪ್ರಿಯಂವದಾ ಭೋಗ ಭಾಗ್ಯಂ ಕೃಪಾಸದಾ॥

ಮೃತ್ತಿಕೆಯಲ್ಲಿ ಹೆಣ್ಣು ಗೊಂಬೆಯೊಂದನ್ನು ರಚಿಸಿ ಅದಕ್ಕೆ ಬೀಳೀ ಎಕ್ಕದ ಹಾಲಿನಿಂದ ಅಭಿಷೇಕ ಮಾಡಬೇಕು. ಅದರ ಎರಡೂ ಕೈಗಳಲ್ಲಿ ಪದ್ಮ ಪತ್ರೆಯನ್ನಿರಿಸಿ ತುಂಬೀ ಹೂವಿನಿಂದ ಅದನ್ನಲಂಕರಿಸಿ ಮೇಲೆ ಹೇಳಿದ ಮಂತ್ರ ವನ್ನು ದಿನಾಲೂ ಸಾವಿರದ ಒಂದು ಬಾರಿ ಜಪಿಸಬೇಕು. ಆಗ ಪ್ರಿಯಂವದಾ ಯಕ್ಷಿಣಿಯು ಪ್ರಸನ್ನಳಾಗಿ ನಿಮ್ಮ ಮನೆಯನ್ನು ಭೋಗ ಭಾಗ್ಯಗಳ ತೌರೂರಾ ಗಿಸುವಳು.

ಭುವನ ಮೋಹಿನಿ ಯಕ್ಷಣೀ ಕರಣ

ಅನ್ಮಥಾರಿಣೀ ವಿಶ್ವಹಾರಿಣಿ ವಿಶ್ವವಿಶ್ವತೋ

ಕರ್ಮಚಾರಿಸಿ ! ಭುವನ ಮೋಹಿನಿ ಮಹಾತ್ರಾಹಿಣೀ

ಲಕ್ಷ ಯಕ್ಷೋ ಸಾಂದ್ರದಾಯಿನಿ ॥

ಹುಣ್ಣಿಮೆಯ ದಿನ ಮೊದಲ ಜಾವದಲ್ಲಿ ಕರಿ ಕುಂಟಿಯ ಮರದ ಕೆಳಗೆ ಕುಳಿತು ಐದು ಸಾವಿರ ಬಾರಿ ಮೇಲಿನ ಮಂತ್ರವನ್ನು ಜಪಿಸಬೇಕು. ಆಗ ಭವನ ಮೋಹಿನಿಯು ನಿಮ್ಮ ಬಗ್ಗೆ ಆಕರ್ಷಿತಳಾಗುವಳು. ನಂತರ ಸ್ನಾನ ಮಾಡಿ ಬಂದು ಅದೇ ಜಾಗದಲ್ಲೇ ಕುಶಾಸನದಲ್ಲಿ ಪದ್ಮಾಸೀನರಾಗಿ ಕುಳಿತು ಹೇಮ ಧಾತುವಿನಲ್ಲಿ ಭುವನ ಮೋಹಿನಿ ಮೂರ್ತಿಯನ್ನು ರಚಿಸಿ ಕ್ಷೀರದ ಅಭಿ ಷೇಕವನ್ನು ಅದಕ್ಕೆ ಮಾಡಿ ಸಂಪಿಗೆ ಹೂವಿನಿಂದ ಅಲಂಕಾರ ಮಾಡಿ ನೇರಳೆ ಹಣ್ಣನ್ನು ನೈವೇದ್ಯ ಮಾಡಬೇಕು. ನಂತರ ಕರ್ಪೂರದ ಆರತಿಯನ್ನು ಬೆಳಗಿ ನಂತರ ಆ ಸುಟ್ಟ ಕರ್ಪೂರದ ಕಾಡಿಗೆಯನ್ನು ನೀವು ಬಹು ಜೋಪಾನವಾಗಿ ತೆಗೆದಿರಿಸಿಕೊಳ್ಳಬೇಕು. ಅದು ನಿಮ್ಮ ಬಳಿಯಲ್ಲಿರುವವರೆಗೂ ಭುವನ ಮೋಹಿನಿಯು ನಿಮ್ಮ ವಶವಾಗುವಳಲ್ಲದೇ ನಿಮ್ಮ ಪತ್ನಿಯೋಪಾದಿಯಲ್ಲಿ ನಿಮ್ಮೊಂಗೆಗೆ ಸಹಕರಿಸುವಳು. ಆದರೆ ಪೂಜೆಯಲ್ಲಿ ಸ್ವಲ್ಪ ಹೆಚ್ಚು-ಕಡಿಮೆ ಯಾದರೂ ಸಹ ಮೋಹಿನಿಯು ನಿಮಗೆ ಒಲಿಯುವುದರ ಬದಲು ನಿತ್ಯ ದರಿದ್ರ ರನ್ನಾಗಿ ಮಾಡಿ ಹೋಗುವಳು.

## ಸುಮಂಗಲೀ ಯಕ್ಷಣೀ ಕರಣ

ಓಂ ಸ್ಪಟಿಕ ವದಸಿ ಸರ್ವಸಾರಣಿ ಕಾಮರೂಪಿಣಿ ಸಿದ್ಧಿ ಕಾರಿಣ್ಯೈನಮಃ

ಹಳದೀ ವಸ್ತ್ರವನ್ನು ಧರಿಸಬೇಕು. ಹಳದಿ ಮಾಲೆಯನ್ನು ಹಾಕಿಕೊಳ್ಳಬೇಕು. ನಂತರ ಮೇಲಿನ ಮಂತ್ರವನ್ನು ದಿನವೂ ಒಂದು ಮುಹೂರ್ತಕಾಲದಂತೆ ಏಳು ದಿನಗಳವರೆಗೆ ಜಪಿಸುತ್ತಾ ಬರಬೇಕು. ಆಗ ಸುಮಂಗಲೀ ಯಕ್ಷಿಣಿಯು ನಿಮಗೆ ಪ್ರಸನ್ನಳಾಗುವಳು ಮತ್ತು ಎಲ್ಲ ಬಗೆಯ ಸುಖಭೋಗಗಳೂ ನಿಮ್ಮ ಕೈಗೂಡುವಂತೆ ಅನುಗ್ರಹಿಸುವಳು.

## ಮೋಹಿನಿ ಯಕ್ಷಣೀ ಕರಣ

ಓಂ ಹ್ರೀಂ ಮದನಮೋಹವಿದಾರಿಣೀ ಕಾಮರೂಪ ಸಂಜೀವಿನಿ ಅಂಗ ಸಂಗಮ ಮಹಾಂದೇಹಿ ಮೋಹಮಾಯೇ ನಮೋಸ್ತುತೆ.

ಶುಕ್ಲಪಕ್ಷದ ಹದಿನಾಲ್ಕು ದಿನವೂ ರಾತ್ರಿಯ ಕೊನೆಯ ಪ್ರಹರದಲ್ಲಿ ನೇರಳ ಗಿಡದಡಿಯಲ್ಲಿ ಕುಳಿತು ಮೇಲಿನ ಮಂತ್ರವನ್ನು ನೂರೈದುಬಾರಿ ಜಪಿಸಬೇಕು, ನಂತರ ಹುಣ್ಣಿಮೆಯ ದಿನ ರಾತ್ರಿ ವಿಳೆಯದೆಲೆಯ ಮೇಲೆ ಮೇಲಿನ ಮಂತ್ರವನ್ನು ಸುಣ್ಣದ ನೀರಿನಲ್ಲಿ ಬರೆದು ಆ ವೀಳೆಯದೆಲೆಯನ್ನು ತಾಂಬೂಲದೊಂದಿಗೆ ಬೆರೆಸಿ ತಿಂದರೆ ಆ ರಾತ್ರಿ ಮೋಹಿನಿಯು ಪ್ರತ್ಯಕ್ಷಳಾಗಿ ನಿಮ್ಮ ಇಷ್ಟ ಕಾಮನೆಯನ್ನು ಪೂರೈಸುವಳು.

## ಕರ್ಣಪಿಶಾಚೀ ಯಕ್ಷಣೀ ಕರಣ

ಓಂ ಕರ್ಣದ್ವಾರೇ ಘಟೀಷು ಕ್ಷೀರೆ ವನಿತವಿಕ್ರೇಸುಚರಾಯತೇ ಕ್ರೀಂ ವಟವಟಂಕುರು.

ಈ ಮಂತ್ರವನ್ನು ಐದುಸಾವಿರ ಬಾರಿ ಜಪಿಸಬೇಕು. ರಾತ್ರಿ ಮಲಗುವಾಗ ಒದ್ದೆ ಬಟ್ಟೆಯನ್ನುಟ್ಟುಕೊಂಡು ಹಾಸಿ; ಹೊದ್ದುಕೊಳ್ಳಲೂ ಒದ್ದೆಯಾದ್ದನ್ನೇ ಉಪಯೋಗಿಸಿ ಚಂದ್ರನ ಬೆಳಕು ಬೀಳುವ ಬಯಲಿನಲ್ಲೇ ಮಲಗಲು ಎರಡನೇ ಝಾಮದಲ್ಲಿ ಕರ್ಣಪಿಶಾಚಿಯು ವಶವಾಗಿ ಭವಿಷ್ಯ ವಾಕ್ಯವನು ನಿಮ್ಮ ಕಿವಿಯಲ್ಲಿ ಸುರುವುದು. ಇದು ಅತ್ಯಂತ ನಿಶ್ಚಿತವೂ ಖಾತ್ರಿಯಾದುದೂ ಎಂಬುದನ್ನು ಮನದಟ್ಟು ಮಾಡಿಕೊಳ್ಳಿ ಆದರೆ ಸ್ವಲ್ಪವೂ ಕ್ರಿಯಾ ಲೋಪವಾಗದಂತೆ ಎಚ್ಚರಿಕೆ ವಹಿಸುವುದು ಅವಶ್ಯಕ.

## ರತ್ನವತೀ ಯಕ್ಷಣೀ ಕರಣ

ಓಂ ರತ್ನಗರ್ಭೇ ಹ್ರೀಂ ಮಹಾಶುಭ್ರೇ ಹ್ರೀಂ ಶುಕ್ರದರ್ಭೆ ಮಾ ಶ್ಯಂ ವಶ್ಯಮೇವ ತಥಾ.

ಕವಡೆ ಮಣಿಯ ಮೂಲೆಯಿಂದ ಜಪ ಮಾಡುತ್ತಾ ಈ ಮಂತ್ರವನ್ನು ಮನೂರು ಬಾರಿ ಹೇಳಿ ಮಂತ್ರ ಸಿದ್ಧಿ ಮಾಡಿಕೊಳ್ಳಬೇಕು. ನಂತರ ಮಧ ತಿ ಗಿಡದ ಎಲೆಯಲ್ಲಿ ಜಯವಂತಿ ಗಿಡದ ಬೇರನ್ನು ಕಟ್ಟಿ ತಾಯತದಂತೆ ವನ್ನು ನೀವು ಬಲಗೈಗೆ ಧರಿಸಿದ್ದಾದರೆ ನಂತರ ನೀವು ಅಷ್ಟೈಶ್ವರ್ಯ ಸಂಪನ್ನ ಗಿ ರತ್ನೇಶ್ವರರೆಂದು ಹೆಸರುವಾಸಿಯಾಗುವಿರಿ.

## ಧನವತೀ ಯಕ್ಷಣೀ ಕರಣ

ಇದರ ಮಂತ್ರವು-ಓಂ ಶ್ರೀ ಧನವತೀ ಕುರು ಕುರುವಶ್ಯಂ॥ ಬುದಾಗಿ ಇರುವುದು.

ಮಂಗಳವಾರ ದಿನದಂದು ಹಸಿರುವಾಣಿ ಗಿಡದಡಿಯಲ್ಲಿ ಕುಳಿತು ಏಕಾಗ್ರ ತ್ರದಿಂದ ಈ ಮಂತ್ರವನ್ನು ಮೂರು ಸಾವಿರಬಾರಿ ಜಪಿಸಬೇಕು. ಆಗ ಧನ ತೀ ಯಕ್ಷಣಿಯು ಪ್ರಸನ್ನಳಾಗಿ ಸಕಲ ಸಂಪತ್ತನ್ನೂ ನೀಡುವಳೆಂಬುದಕ್ಕೆ ಶಯವೇ ಬೇಡ.

## ಬೀಜಾಕ್ಷರೀ ಯಕ್ಷಣೀ ಕರಣ

ಓಂ ಹ್ರೀಂ ಬೀಜಾಕ್ಷರೀ ಮಾವಶ್ಯಂ ಕುರು.

ಪ್ರತಿಪದೆಯ ದಿನದಿಂದ ಕ್ರಮವಾಗಿ ಏಕಾದಶಿಯವರೆಗೆ ನಿತ್ಯವೂ ಬಿಡದೇ ಪಿಗೆ ಮರದ ಮೇಲೆ ಹೋಗಿ ಕುಳಿತು ಮೇಲಿನ ಮಂತ್ರವನ್ನು ದಿನವೂ ರೆಂಟು ಬಾರಿ ಜಪಿಸುತ್ತಾ ಬಂದಲ್ಲಿ ಬೀಜಾಕ್ಷರೀ ಯಕ್ಷಣಿ ಪ್ರಸನ್ನಳಾಗಿ ಮ್ಮ ನಾಲಿಗೆಯ ಮೇಲೆ ಬೀಜಾಕ್ಷರಗಳನ್ನು ಬರೆಯುವಳು. ತದನಂತರ ೀವು ಹೇಳದಂತೆ ಎಲ್ಲವೂ ಆಗುತ್ತಾ ಬರುವದು.

## ಭಗವತೀ ಯಕ್ಷಣೀ ಕರಣ

ಆಷಾಢ ಶುದ್ಧ ನವಮಿಯಿಂದ ಈ ಸಾಧನೆಯನ್ನು ಪ್ರಾರಂಭಿಸಬೇಕು. ಂದ್ರಾಸ್ತಮಯ ಸಮಯಕ್ಕೆ ಸರಿಯಾಗಿ ಸಾಧಕನು ಸ್ಮಶಾನಕ್ಕೆ ಹೋಗಿ ತಾಭಸ್ಮದಿಂದ ವರ್ಣ ಕುಂಡಲಿಯೆನ್ನು ಬರೆದು ಕುಕ್ಕುಟಾಸನದ ಮೇಲೆ ಧನೆ ಪ್ರಾರಂಭಿಸಬೇಕು. ಜಂಬೂ ವೃಕ್ಷದ ಸಮಿಧೆಯಿಂದ ಹೋಮ

ನಿರ್ಮಾಣ ಮಾಡಿ ಹಾಲು ಮೊಸರು ಜೇನುತುಪ್ಪದ ಆಹುತಿ ಕೊಡಬೇ
ಆಹುತಿ ಕಾಲಕ್ಕೆ ಓಂ ಹ್ರೀಂ ಭಗವತೀ ಭವ್ಯರೂಪಿಣಿ ಚಂಡ ಚೂಡಾವ
ಯಕ್ಷಣೀ ಸ್ವಾಹಾ ॥ ಎಂಬುದಾಗಿ ಮಂತ್ರವನ್ನುಚ್ಚರಿಸಬೇಕು. ಈ
ಒಂದು ಸಾವಿರದ ಒಂದು ಬಾರಿ ಆಹುತಿ ಕೊಟ್ಟಬಳಿಕ ಎಳೇ ನೀರಿನಿ
ಪೂರ್ಣಾಹುತಿ ಕೊಟ್ಟು ಹೋಮ ಕಾರ್ಯವನ್ನು ಪೂರ್ತಿ ಮಾಡಬೇ
ನಂತರ ಆ ಚಿತಾ ಭಸ್ಮವನ್ನು ಮನೆಗೆ ತಂದು ಐದು ಜನ ಸುಮಂಗಲಿಂ
ಗಿತ್ತು ಅವರಿಗೆ ಭೋಜನ ಮಾಡಿಸಿ ಯಥಾ ಶಕ್ತಿ ಅವರಿಗೆ ಪೂಜೆ ಪುನ
ದಿಗಳನ್ನು ಮಾಡಿ ದಾನ ಧರ್ಮಗಳನ್ನು ನಡೆಸಬೇಕು.

ನಂತರ ರಾತ್ರಿಯ ಕೊನೆಯ ಪ್ರಹರಕ್ಕೆ ಸಾಧಕನು ಸ್ಮಶಾನಕ್ಕೆ ಹೋ
ಅದೇ ಜಾಗದಲ್ಲೇ ಕುಕ್ಕುಟಾಸೀನಾರೂಢನಾಗಿ ದೇವಿಯು ಪ್ರತ್ಯಕ್ಷಳಾ
ವರೆಗೂ ಮಂತ್ರ ಪಠಣ ಮಾಡಬೇಕು. ದೇವಿಯು ಶುಭ್ರ ವಸ್ತ್ರಧಾ
ಯಾಗಿ ಬಂದು ಭೂತ ಭವಿಷ್ಯಗಳ ಜ್ಞಾನ ನೀಡುವಳಲ್ಲದೇ ಸರ್ವಾಭಿ
ವನ್ನೂ ನೆರವೇರಿಸಿ ಕೊಡುವಳು.

# ಆಕರ್ಷಣ ಸಾಧನೆಯು

## ಆಕರ್ಷಣ ಬೀಜಮಂತ್ರ

ಓಂ ನಮೋ ಭಗವತೀ ರುದ್ರಾಯ—ಸ್ಯ ಆಕರ್ಷಣಂ ಕುರು ॥ ಎಂಬು ಹಾಗಿ ಇರುವುದು.

ಕೃಷ್ಣ ಪಕ್ಷದ ಹದಿನೈದು ದಿನಗಳಲ್ಲೂ ಪ್ರತಿದಿನ ರಾತ್ರಿಯ ಮೊದಲನೇ ಪ್ರಹರದಲ್ಲಿ ಒಂದು ಮೂಹೂರ್ತಕಾಲ ಈ ಮಂತ್ರವನ್ನು ಜಪಿಸಿದಲ್ಲಿ ಅಮಾವಾಸ್ಯೆಯ ದಿನ ಜಿವಾಂತ್ಯದಲ್ಲಿ ಮಂತ್ರ ಸಿದ್ಧಿಯು ಲಭಿಸುವುದು ಮುಂದೆ ಇದನ್ನು ಪ್ರಯೋಗ ತರುವ ಸಂದರ್ಭದಲ್ಲಿ ಯಾರ ಮೇಲೆ ಪ್ರಯೋಗ ಮಾಡಬೇಕಾಗುವುದೋ ಅವರ ಹೆಸರನ್ನು ಮಂತ್ರದಲ್ಲಿ ಬಿಟ್ಟ ಜಾಗಕ್ಕೆ ಸೇರಿಸಿಕೊಂಡು ಉಚ್ಚರಿಸಬೇಕು. ಆಗ ನಿಮಗೆ ಯಶಸ್ಸು ದೊರೆಯುವುದು.

## ಇನ್ನೊಂದು ಆಕರ್ಷಣ ಮಂತ್ರ

ಓಂ ಸಂ ಶ್ರೀಂ ಕ್ರೂಂ ಮಾಂ ಹಂ ಹಃ ॥

ಚಿತ್ತಾ ನಕ್ಷತ್ರ-ದ್ವಾದಶಿ-ಬುಧವಾರ ಇವು ಮೂರೂ ಒಟ್ಟಿಗೆ ಕಲೆತ ದಿನ ಪಂಚಲೋಹದ ತಾಯಿತ ಮಾಡಿ ಅದರೊಳಗೆ ಬೆಳ್ಳಿ ತಗಡಿನಲ್ಲಿ ನೀವು ಆಕರ್ಷಿಸಬೇಕಾದವರ ಹೆಸರನ್ನು ಬರೆದು ಹಾಕಿ ಆ ತಾಯಿತವನ್ನು ಧರಿಸಿದರೆ ಅವರು ನಿಮ್ಮ ಬಳಿಗೆ ಬರುವರೆಂಬುದಕ್ಕೆ ಯಾವ ಸಂಶಯವೂ ಬೇಡ.

## ಸರ್ವಾಕರ್ಷಣ ಮಂತ್ರ

ಓಂ ಹ್ರೀಂ ಹೂಂ ಫಟ್ ಸ್ವಾಹಾ.

ಏಳು ದಿನಗಳವರೆಗೆ ದಿನವೂ ನೂರೆಂಟು ಸಲ ಈ ಮಂತ್ರವನ್ನು ಜಪಿಸಬೇಕು. ನಂತರ ಬಳ್ಳಿಯಲ್ಲಿರುವ ವೀಳೆಯದೆಲೆಗಳಲ್ಲಿ ಚಿಗುರಾಗಿರುವ ಏಳು ಎಲೆಗಳನ್ನು ಕೊಯ್ದು ತರಬೇಕು. ಹಾಗೆ ತಂದ ಎಲೆಗಳಲ್ಲೂ ಕ್ರಮವಾಗಿ ಸಪ್ತ ಋಷಿಗಳಲ್ಲಿನ ಒಬ್ಬೊಬ್ಬರ ಹೆಸರನ್ನು ಆಕಳ ಹಾಲಿನಲ್ಲಿ ಬರೆಯಬೇಕು. ನಂತರ ಆ ಎಲೆಗಳನ್ನು ಸಾಂಬ್ರಾಣಿಯ ಹೊಗೆಗೆ ಹಿಡಿದು ನಿಮ್ಮಲ್ಲಿಟ್ಟುಕೊಂಡರೆ ನೀವು ಇಚ್ಛಿಸಿದವರೆಲ್ಲಾ ಬಹು ಸುಲಭ ರೀತಿಯಲ್ಲಿ ನಿಮ್ಮೆಡೆಗೇ ಆಕರ್ಷಿತರಾಗಿ ಬರುವರೆಂಬುದು ಅತಿ ಖಾತ್ರಿಯಾದ ವಿಷಯ.

## ಗೃಹತ್ಯಾಗಿಗಳಾದವರನ್ನು ಪುನಃ ಬರುವಂತೆ ಆಕರ್ಷಿಸುವ ಮಂತ್ರ

ಓಂ ಈಃ ಶ್ರೀಂ ಹ್ರೂಂ ಶ್ರೀಂ

ದೇವದಾರು ವೃಕ್ಷದ ಕೆಳಗೆ ಕ.ಶಾಸನ ಹಾಕಿ ಕುಳಿತುಕೊಳ್ಳಬೇಕು. ಹವಳದ ಮಣಿ ಪೋಣಿಸಿದ ಜಪಮಾಲೆಯಿಂದ ಈ ಮಂತ್ರವನ್ನು ನೂರೆಂಟು ಬಾರಿ ಜಪಿಸಿದಲ್ಲಿ ಗೃಹತ್ಯಾಗಿಗಳಾದ ವ್ಯಕ್ತಿಯು ಇತ್ತಕಡೆಗೇ ಆಕರ್ಷಿತರಾಗಿ ಮರಳಿ ಬರುವರು.

## ಸರಸ್ವತಿ ಆಕರ್ಷಣಮಂತ

ಓಂ ಸಂ ಸರಸ್ವತ್ಯೈನಮಃ

ಈ ಮಂತ್ರವನ್ನು ಚಿತ್ರ ಶುದ್ಧಿಯಿಂದ ದಿನವೂ ಸಾವಿರದೆಂಟು ಬಾರಿ ಜಪಿಸುತ್ತಾ ಹೋಗಬೇಕು. ಐದು ಶನಿವಾರಗಳು ಕೂಡಿ ಬಂದಾಗ ಮಂತ್ರ ಸಿದ್ಧಿಯಾಗಿ ವಿದ್ಯಾದೇವತೆ ಸರಸ್ವತಿಯು ನಿಮಗೊಲಿಯುವಳು ಇದು ನಿಶ್ಚಯ.

## ಸಿದ್ಧಿ ಮಂತ್ರ

ಓಂ ಪ್ರಸನ್ನ ಗಣಪತೆಯೆ ಸ್ವಾಹಾ

ಮುನ್ಸಂಜೆಯ ವೇಳೆಯಲ್ಲಿ ದಿನವೂ ಈ ಮಂತ್ತವನ್ನು ನೂರೈದು ಬಾರಿ ಜಪಿಸುತ್ತಾ ಹೋದಲ್ಲಿ ದಿವಸ ಹತ್ತುದೊಳಗಾಗಿ ಮಂತ್ರ ಸಿದ್ಧಿಯು ಲಭಿಸಿ ಸರ್ವಕಾರ್ಯ ಸಿದ್ಧಿಯಾಗಲು ಸಿದ್ಧಿನಾಯಕನು ಅನುಗ್ರಹಿಸುವನು.

## ಪುರುಷರನ್ನು ಆಕರ್ಷಿಸುವ ಮಂತ್ರ

ಓಂ ನಮೋ ಅಶ್ವಿನೀ ಕುಮಾರಾಯ........ಸ್ಯ ಆಕರ್ಷಣಂ ಕುರ

ನೀವು ಯಾರನ್ನು ಆಕರ್ಷಿಸಬೇಕಾಗಿದೆಯೋ ಮಂತ್ರದಲ್ಲಿ ಬಿಟ್ಟ ಸ್ಥಳಕ್ಕೆ ಅವರ ಹೆಸರನ್ನು ಸೇರಿಸಿಕೊಂಡು ಒಂದು ಲಕ್ಷ ಬಾರಿ ಈ ಮಂತ್ರವನ್ನು ಜಪಿಸಬೇಕು. ಆಗ ಆ ಪುರುಷನು ನಿಶ್ಚಯವಾಗಿಯೂ ನಿಮ್ಮೆಡೆಗೆ ಆಕರ್ಷಿತನಾಗಿ ಬರುವನು.

## ಸ್ತ್ರೀ ಆಕರ್ಷಣ ಮಂತ್ರ

ಓಂ ಮಂಗಳಾ ಆಕರ್ಷಣಂ ಕುರು.

ಈ ಮಂತ್ರವನ್ನು ರಾತ್ರಿಯ ಕಡೇ ಪ್ರಹರದಲ್ಲಿ ಕೇದಿಗೇ ವೃಕ್ಷದಡಿಯಲ್ಲಿ ಕುಳಿತು ಸಾವಿರದ ಇಪ್ಪತ್ತೊಂದು ಬಾರಿ ಜಪಿಸಿದಲ್ಲಿ ಮಂತ್ರ ಸಿದ್ಧಿಯಾಗು

ವುದು: ನಂತರ ನೀವು ಯಾವ ಸ್ತ್ರೀಯನ್ನು ಜಯಿಸಬೇಕೆಂಬ ಆಸೆಯಿಂದ ಈ ಮಂತ್ರವನ್ನು ಜಪಿಸುತ್ತಿರುವಿರೋ ಆ ಸ್ತ್ರೀಯು ಬಹು ಬೇಗನೇ ಆಕರ್ಷಿತಳಾಗಿ ನಿಮ್ಮ ಕಡೆಗೆ ಬರುವಳೆಂಬುದರಲ್ಲಿ ಯಾವ ಸಂದೇಹವೂ ಬೇಡ.

## ತಂತ್ರಗಳು

ಅನುರಾಧ ನಕ್ಷತ್ರನ ದಿನದಂದು ಬಿಳೀ ಮತ್ತಿಗಿಡದ ಕಟ್ಟಿಗೆಯನ್ನು ತಂದು ಆಕಳ ಹಾಲಿನಲ್ಲಿ ತೇದು ಗಂಧವನ್ನು ತಯಾರಿಸಬೇಕು. ನಂತರ ನೀವು ಯಾವ ಸ್ತ್ರೀ, ಪುರುಷ, ಪಶು, ಪಕ್ಷಿಗಳನ್ನು ಆಕರ್ಷಿಸಬೇಕೆಂದು ಮಾಡಿಕೊಂಡಿರುವಿರೋ ಅವುಗಳಗೆ ಆ ಗಂಧವನ್ನು ಅವರಿಗೆ ತಿಳಿಯದಂತೆ ಲೇಪಿಸಿದರೆ ಸಾಕು ಕ್ಷಣಾರ್ಧದಲ್ಲಿ ಅವರು ತಮ್ಮಿಷ್ಟಕ್ಕೇ ತಾವೇ ನಿಮ್ಮೆಡೆಗೆ ಆಕರ್ಷಿತರಾಗಿ ಬರುವುದರಲ್ಲಿ ಯಾವ ಸಂದೇಹವೂ ಇಲ್ಲ

### ಮತ್ತೊಂದು ತಂತ್ರ

ದೀಪ ರಾಗ ಪುಷ್ಪದ ರಸವನ್ನು ಕಾಂಚನ ಪತ್ರಿಗೆ ಲೇಪಿಸಿ ಅರಿಸಿನ ತುಂಡಿನಿಂದ ನೀವು ಯಾರನ್ನು ಆಕರ್ಷಿಸಬೇಕಾಗಿದೆಯೋ ಅವರ ಹೆಸರನ್ನು ಅದರಲ್ಲಿ ಬರಿದು ಗೋಮೂತ್ರದಲ್ಲಿ ಆ ಪತ್ರಿಯನ್ನು ನೆನೆ ಹಾಕಿದರೆ ಅವರು ಖಂಡಿತವಾಗಿಯೂ ನಿಮ್ಮ ಕಡೆಗೇ ಆಕರ್ಷಿತರಾಗಿ ಬರುವರೆಂಬುದನ್ನು ತಿಳಿಯಬೇಕು.

### ಸ್ತ್ರೀ ಆಕರ್ಷಣ ತಂತ್ರ

ರೋಹಿಣಿ ನಕ್ಷತ್ರವು ಶುಕ್ರವಾರವೇ ಬರುವಂತಹ ದಿನ ನೋಡಿ ಆ ದಿನ ಬೆಳಿಗ್ಗೆ ಯಾರೊಂದಿಗೂ ಮಾತನಾಡದೇ ಹೋಗಿ ಜಾಬಾಲಿ ಗಿಡದ ತೊಗಟೆಯನ್ನು ತಂದು ಅದರ ಚೂರ್ಣವನ್ನು ನೀವು ಯಾವ ಸ್ತ್ರೀಯನ್ನು ಆಕರ್ಷಿಸಬೇಕೆಂದಿರುವಿರೋ ಆ ಸ್ತ್ರೀಯು ತಿನ್ನುವ ತಾಂಬೂಲದೊಂದಿಗೆ ಬೆರೆಸಿ ಕೊಟ್ಟರೆ ಆಕೆ ನಿಶ್ಚಿತವಾಗಿಯೂ ನಿಮ್ಮ ಕಡೆಗೇ ಆಕರ್ಷಿತಳಾಗಿ ಬರುವಳು. ಇದಕ್ಕೆ ಸಂಶಯವೇ ಬೇಡ.

### ಮತ್ತೊಂದು ತಂತ್ರ

ಹವಳ ಮಣಿಯನ್ನು ತಂದು ಆಕಳ ಹಾಲಿನಲ್ಲಿ ನೆನೆಹಾಕಬೇಕು ಏಳು ದಿನಗಳ ನಂತರ ಅದನ್ನು ತೆಗೆದು ಚೆನ್ನಾಗಿ ತೆಯಿದು ಗಂಧವನ್ನು ತಯಾರಿಸ

ಬೇಕು. ಆ ಗಂಧಕ್ಕೆ ಅರೆದಾಳವನ್ನು ಬೆರೆಸಿ ಕೆಂಪು ನೇರಳೆ ಎಲೆಯ ರಸದಲ್ಲಿ ಅದನ್ನು ಚೆನ್ನಾಗಿ ಕುದಿಸಬೇಕು ನಂತರ ಅದನ್ನು ಮೂರು ದಿನಗಳವರೆಗೆ ಅದನ್ನು ಒದ್ದೆ ಅರಿವೆಯಲ್ಲಿ ಕಟ್ಟಿ ಸೂರ್ಯ ರಶ್ಮಿಯು ಬೀಳದ ಜಾಗದಲ್ಲಿ ಬಂಧಿಸಿಡಬೇಕು. ನಾಲ್ಕೈದು ದಿನ ಅದನ್ನು ತೆಗೆದು ಮೇಕೆಯ ಹಾಲಿನಲ್ಲಿ ಬೆರೆಸಿ ನೀವು ಬಯಸಿದ ಸ್ತ್ರೀಯ ಮೇಲೆ ಅದನ್ನು ಪ್ರೋಕ್ಷಿಸಿದರೆ ಆಕೆ ಆಗ ಖಂಡಿತವಾಗಿಯೂ ಆಕರ್ಷಿತಳಾಗಿ ನಿಮ್ಮೊಡನೆ ಬರುವಳು. ಇದು ಅತ್ಯಂತ ಮಹತ್ತರದ್ದಾಗಿರುವುದರಿಂದ ಫಲದಾಯಕವಾಗಿರುವುದರಿಂದ ಸಿದ್ಧಿದಾಯಕವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

### ಇನ್ನೊಂದು ತಂತ್ರ

ನೀವು ಯಾವ ಸ್ತ್ರೀಯನ್ನು ಆಕರ್ಷಿಸಿಕೊಳ್ಳಬೇಕೆಂದಿರುವಿರೋ ಆಕೆಯ ಹೆಸರನ್ನು ಕಮಲ ಪತ್ರದ ಮೇಲೆ ಬರೆಯಬೇಕು. ನಂತರ ಅದನ್ನು ಹಸುವಿನ ತುಪ್ಪದಲ್ಲಿ ಮುಳುಗಿಸಿ ಉರಿಯುವ ಬೆಂಕಿಗೆ ಆ ಪತ್ರೆಯನ್ನು ಹಾಕಿದರೆ ಆ ಸ್ತ್ರೀಯು ಬಹು ಸುಲಭವಾಗಿ ನಿಮ್ಮ ಬಳಿಗೆ ಆಕರ್ಷಿತಳಾಗಿ ಖಂಡಿತವಾಗಿಯೂ ಬರುವಳು.

### ಸ್ನೇಹಿತರನ್ನು ಆಕರ್ಷಿಸುವ ತಂತ್ರ

ಮೈದಾಳ ಮತ್ತು ಕೇಸರಿಯನ್ನು ಮಿಶ್ರಣ ಮಾಡಿ ಸಮೀಪತ್ರೆಗೆ ಲೇಪಿಸಬೇಕು. ನಂತರ ಅದರ ಮೇಲೆ ನಿಮ್ಮ ಕೈಯ ಕಿರು ಬೆರಳಿನ ರಕ್ತದಿಂದ ನಿಮ್ಮ ಸ್ನೇಹಿತನ ಹೆಸರನ್ನು ಬರೆಯಬೇಕು. ಆಗ ನಿಮ್ಮ ಮಿತ್ರನು ಎಷ್ಟೇ ದೂರವಿದ್ದರೂ ಎಲ್ಲಿಯೇ ಇರಲಿ ನಿಮ್ಮ ಬಳಿಗೇ ಬರುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

# ಮೋಹನ ಕರ್ಮ ಸಾಧನೆಯು

ಮೋಹನ ಕರ್ಮದಲ್ಲಿ ಅತೀವ ದೈವಾಂಶವಿದೆ ಇದರ ಸಾಧಕರು ಸತ್ವರಾಯಣರೂ, ದೈವ ಚಿಂತ ನಾಗ್ರೇಸರರೂ, ಶಾಂತ ಸ್ವಭಾವಿಗಳೂ ಆಗಿ ಬೇಕು. ಈ ಕರ್ಮ ಸಾಧನೆಯಿಂದ ಇತರರನ್ನು ಬಹು ಸುಲಭವಾಗಿ ನಿಮ ಬಗ್ಗೆ ಮೋಹಗೊಳ್ಳುವಂತೆ ಮಾಡಬಹುದು. ಈ ಕರ್ಮದಿಂದ ಪ್ರೇಮವು ವರ್ಧಿ ಸುವುದೆಂಬುದನ್ನು ಎಲ್ಲರೂ ಚೆನ್ನಾಗಿ ಅರಿತಿರಬೇಕು. ಇದು ತೀವ್ರವಾಗಿ ಫಲ ಕೊಡುವಂತಹದ್ದಾದ್ದರಿಂದ ಲಕ್ಷಪೂರ್ವಕ ಈ ಸಾಧನೆಯ ಬೀಜಮಂತ್ರವನ್ನು ಪಠಿಸಿ ಸಿದ್ಧಿ ಪಡೆಯಬೇಕು. ಇದರ ಸಿದ್ಧಿ ಮಂತ್ರವು ಈ ರೀತಿ ಇರುವುದು.

ಅಹಂ ಸರ್ವ ಜಗಂ ಮನಮೋಹನಂ ಕುರು ಕುರುಸ್ವಾಹಾ ಎಂಬುದಾಗಿ ಇರುವುದು ಒಂದು ಲಕ್ಷ ಸಲ ಈ ಮಂತ್ರವನ್ನು ಜಪಿಸಿ ಸಿದ್ಧಿ ಪಡೆದ ನಂತರವೇ ಪ್ರಯೋಗವನ್ನಾರಂಭಿಸಬೇಕು.

ಮಂತ್ರಗಳು––

## ಸರ್ವ ಮೋಹನ ಯಂತ್ರ

ಓಂ ಹ್ರೀಂ ಟ್ರಂ ಟ್ರಂ ಟ್ರಂ ಫಟ್‌ಸ್ವಾಹಾ

ಶ್ರಾವಣ ಶುದ್ಧ ಚತುರ್ಥಿಯ ದಿನದಂದು ಗೂಬೆಯ ರೆಕ್ಕೆಯನ್ನು ಕರ್ಪೂರದಲ್ಲಿ ತೇದು ಗಂಧವನ್ನು ತಯಾರಿಸಿ ಅದನ್ನು ಮೇಲೆ ಹೇಳಿರುವ ಮಂತ್ರದಿಂದ ಅಭಿಮಂತ್ರಿಸಿ ಆ ತಿಲಕವನ್ನು ನೀವು ಧರಿಸಬೇಕು ಆಗ ನಿಮ್ಮನ್ನು ನೋಡಿದವರೆಲ್ಲರೂ ನಿಮ್ಮ ಬಗ್ಗೆ ಮೋಹಿತರಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

## ಶತ್ರುಮೋಹಕ ಮಂತ್ರ

ಓಂ ಪಿಂಜ ಮುಖಂ ರುದ್ರಸ್ಯ–ಆದಿರುದ್ರಾಯ ನಮೋ ನಮಃ ಕ್ಲೀಂ ಕಾರಂ ಸರ್ವ ಮನ ಮೋಹನಂ ಕೃತ್ವಾ ಪಂ ಪಂ.

ಬುಧವಾರ ದಿನದಂದು ಶತ್ರುವಿನ ಉಚ್ಚಿಷ್ಟವನ್ನು ಕದ್ದು ತಂದು ಕೆಂಪು ವಸ್ತ್ರದಲ್ಲಿ ಅದನ್ನು ಕಟ್ಟಿ ತುಲಾ ಲಗ್ನ ಕಾಲದಲ್ಲಿ ಬೇವಿನ ಕಟ್ಟಿಗೆ ಹೋಗೆಯಲ್ಲಿ ಅದನ್ನಿಟ್ಟು ಮೇಲೆ ಹೇಳಿದ ಮಂತ್ರವನ್ನು ನೂರೆಂಟು ಬಾರಿ ಕವಡೆ ಜಪಮಾಲೆಯೊಂದಿಗೆ ಜಪಮಾಡಿ ಜೇನುತುಪ್ಪದ ಅರ್ಘ್ಯವನ್ನು ಕೊಡಬೇಕು. ನಂತರ

ಆ ಗಂಟನ್ನು ಭಾವಿಗೆ ಎಸೆದುಬಿಡಬೇಕು. ಆಗ . ನಿಮ್ಮ ಶತ್ರುವು ನಿಮ್ಮ ಮೇಲಿನ ವೈರತ್ವವನ್ನು ತೊರೆಯುವನಲ್ಲದೇ ಕಾಲ ಕ್ರಮೇಣ ನಿಮ್ಮ ಸ್ನೇಹಕ್ಕಾಗಿ ಅವನು ಹಾತೊರೆಯುವುದಕ್ಕೆ ಯಾವ ಅನುಮಾನವೂ ಇಲ್ಲ.

**ರಾಜಮೋಹ ಮಂತ್ರ**

ಓಂ ನಮೋ ಅಲಂಬಿಕಾ ಸುರನು ಜೇಷ್ಠಾ—ಯ ಮೋಹನಂ ಪಶ್ಯತೇ ||

ಸ್ವಸ್ತಿಕಾಸನದಲ್ಲಿ ಊರ್ಧ್ವ ಮುಖರಾಗಿ ಕುಳಿತು ಸಾವಿರದೆಂಟು ಬಾರಿ ಜಪಿಸಬೇಕು. ಮಂತ್ರದಲ್ಲಿ ಬಿಟ್ಟ ಜಾಗಕ್ಕೆ ನೀವು ಇಚ್ಛಿಸಿದ ರಾಜನ ಹೆಸರನ್ನು ಸೇರಿಸಿಕೊಳ್ಳಬೇಕು. ಆಗ ರಾಜನು ನಿಮ್ಮ ಬಗ್ಗೆ ಮೋಹಿತನಾಗಿ ಸಂಪೂರ್ಣ ಕೃಪೆ ದೋರುವನು.

**ಪತಿ ಮೋಹನ ಮಂತ್ರ**

ಓಂ ಭಂ ಭವಾನಿ ಶಂ ಶರ್ವಾಣಿ ಶ್ರೀ ಮಹೇಶ್ವರಿ ಮಂತ್ರ ಛಂದೋಪ ಛಂದಃ

ಹೇಮಂತ ಋತುವಿನ ಶುಕ್ಲಪಕ್ಷದ ಹದಿನೈದು ದಿನಗಳೂ ಸ್ತ್ರೀಯು ಗೋಧೂಳೀ ಸಮಯದಲ್ಲಿ ಮೇಲಿನ ಮಂತ್ರವನ್ನು ಒಂದು ಮಹೂರ್ತ ಕಾಲ ಜಪಿಸಬೇಕು. ಹುಣ್ಣಿಮೆಯ ದಿನ ಮಂತ್ರ ಸಿದ್ಧಿಯು ದೊರೆತು ಆಕೆಗೆ ಪತಿ ಸುಖವು ದೊರೆಯುವುದು ಅತಿ ಖಾತ್ರಿ ಎಂದು ತಿಳಿಯಿರಿ.

**ಇನ್ನೊಂದು ಮಂತ್ರ**

ಶಿಂಷಿಣಿ ಪರಿಚ್ಛೇದಾಂ ಶಕ್ತಿರೂಪಿಣಿ ಮಹಾಲಯ ಸಂಧ್ಯೋವಿಂಶ ತಾನೇನ್ ಪಶ್ಯವಶ್ಯಂ ವಿನೂತನಂ.

ಸದಾಕಾಲವು ಪತಿಯು ತನ್ನ ವಶದಲ್ಲೇ ಇರಬೇಕೆಂದು ಬಯಸುತ್ತ ಸ್ತ್ರೀಯು ಪ್ರತಿ ಮಂಗಳವಾರ ದಿನದಂದು ಸೂರ್ಯೋದಯಕ್ಕೆ ಮೊದಲೇ ಎದ್ದು ತಣ್ಣೀರು ಸ್ನಾನ ಮಾಡಿ ತುಲಸೀ ಕಟ್ಟೆಯ ಮುಂದೆ ಕೂತು ಮೇಲಿನ ಮಂತ್ರವು ನೂರೈದು ಬಾರಿ ಜಪಿಸಬೇಕು. ಇದೇ ರೀತಿ ಏಳು ಮಂಗಳವಾರದವರೆಗೆ ತಪ್ಪದೇ ಮಾಡುತ್ತಾ ಬಂದಲ್ಲಿ ಅವಳ ಪತಿಯು ಅವಳ ಮೋಹಿತನಾಗಿ ಅವಳ ವಶಾನುವರ್ತಿಯಾಗುವನು ಇದು ಅತ್ಯಂತ ಖಾತ್ರಿಯಾದುದು.

## ಸ್ತ್ರೀ ಮೋಹನ ಮಂತ್ರ

ಓಂ ನಮೋ ರಕ್ತಾಂಬರಿ ವಿಭೂಷಿತಾಂ ಮುಕ್ತ ಮೋಹಂ ಸಂಜೀವಿದಿ.

ಬೆಳಗಿನ ಝಾವದಲ್ಲಿ ವಟ ವೃಕ್ಷದಡಿಯಲ್ಲಿ ಕುಳಿತು ಈ ಮಂತ್ರವನ್ನು ಒಂದು ಸಾವಿರ ಸಲ ಜಪಿಸಬೇಕು. ನಂತರ ಮನೆಗೆ ಬಂದು ಸ್ನಾನ ತೀರಿಸಿ ದನಂತರ ಕುಲದೇವತೆಗೆ ಸಾತ್ವಿಕಾ ಹಾರದ ನೈವೇದ್ಯ ಮಾಡಿದರೆ ಇಚ್ಛಿತ ಸ್ತ್ರೀಯು ನಿಮ್ಮ ಬಗ್ಗೆ ಮೋಹಿತಳಾಗಿ ಬರುವುದರಲ್ಲಿ ಸಂದೇಹವೇ ಇಲ್ಲ.

## ಕೌಟುಂಬಿಕ ಮೋಹನ ಮಂತ್ರ

ಓಂ ಅಹೇನ ಬಂಧು ಕಳಾತ್ರಯ ಸಂಗ ಮಾಂ ಮೋಹನಂ ಕುರು-

ಶಮೀ ವೃಕ್ಷದಡಿಯಲ್ಲಿ ಕುಶಾಸನದಲ್ಲಿ ಕುಳಿತುಕೊಳ್ಳಬೇಕು. ಪ್ರೋಕ್ಷಣಾ ಜಲದಿಂದ ನೆಲವನ್ನು ಶುದ್ಧೀಕರಿಸಿ ನಿಮ್ಮ ಜನ್ಮಕುಂಡಲಿಯ ಪ್ರಥಮ ಪಾದವನ್ನು ಬರೆಯಬೇಕು. ಅದರಲ್ಲಿ ಕುಲದೈವವನ್ನು ವಿಧಿಪೂರ್ವಕ ವಾಗಿ ಆಹ್ವಾನಿಸಿ ಪ್ರತಿಷ್ಠಿಸಬೇಕು. ಅವನ್ನು ಪೂಜಿಸಬೇಕು. ನೈವೇದ್ಯ ಕ್ಕಾಗಿ ಬಿಳೇ ಎಳ್ಳು ಹಾಗೂ ಹಸುವಿನ ತುಪ್ಪ ಉಪಯೋಗಿಸಬೇಕು ಪೂಜಾ ಕಾಲದಲ್ಲಿ ಮೇಲಿನ ಮಂತ್ರವನ್ನು ನೂರೆಂಟು ಬಾರಿ ಜಪಿಸಬೇಕು. ಈ ರೀತಿ ವಿಳುದಿನಗಳವರೆಗೆ ಅವ್ಯಾಹತವಾಗಿ ಜಪತಪಾದಿಗಳನ್ನು ಮಾಡುತ್ತಾ ಅಂದರೆ ನಿಮ್ಮ ಸಹಕುಟುಂಬ ಸಹಪರಿವಾರವೆಲ್ಲವೂ ನಿಮ್ಮ ಬಗೆಗೆ ಮೋಹ ಪ್ರೇಮ ಭಾವನೆ ತಳಿದು ನಿಮ್ಮ ಆಜ್ಞೆಯನ್ನು ಪಾಲಿಸ ತೊಡಗುವುದು ನಿಶ್ಚಿತ.

# ಪ್ರಯೋಗಗಳು

## ವಿಶ್ವಮೋಹನ ಪ್ರಯೋಗ

ಗುರುವಾರದ ದಿವಸ ಆಕಳದ ಹಾಲಿನಲ್ಲಿ ಹುಣಸೀ ಬೀಜಗಳನ್ನು ಹಾಕಿ ಗಂಧವನ್ನು ತಯಾರಿಸಬೇಕು. ಆ ಗಂಧವನ್ನು ಅಭಿಮಂತ್ರಿಸಿ ಅದರ ತಿಲಕ ವನ್ನು ಹಣೆಗೆ ಹಚ್ಚಿಕೊಳ್ಳಬೇಕು. ಅದರಿಂದ ಸರ್ವ ಜಗತ್ತು ನಿಮ್ಮನ್ನು ಮೋಹಿಸುವದು.

ನಿಂಬೆಹಣ್ಣಿನ ರಸದಲ್ಲಿ ತೆಂಗಿನ ಬೇರನ್ನು ಅರೆದು ಅದಕ್ಕೆ ಗಂಧಕವನ್ನು ಮಿಶ್ರಣಮಾಡಿ ಅದನ್ನು ಅಭಿಮಂತ್ರಿಸಿ, ಆ ತಿಲಕವನ್ನು ಧರಿಸಿಕೊಳ್ಳಬೇಕು ಅದರಿಂದ ದರ್ಶನಮಾತ್ರದಲ್ಲಿ ಸರ್ವರೂ ಮೋಹಿತರಾಗುವದರಲ್ಲಿ ಯಾವ ಸಂದೇಹವೂ ಇಲ್ಲ.

ಮೈಲು ತುತ್ಯ ಹಾಗೂ ಗಂಧಕ ಇವೆರಡನ್ನೂ ನಾಯಿಯ ಹಾಲಿನೊಂದಿಗೆ ಬೆರಸಿ ಅದರ ತಿಲಕವನ್ನು ತಯಾರಿಸಬೇಕು ನಂತರ ಅದನು ಹಣೆಗೆ ಧರಿಸಿಕೊಂಡರೆ ದರ್ಶನ ಮಾತ್ರದಿಂದಲೇ ಸರ್ವರೂ ಮೋಹಿಸುವರು ಕೆಂಬೂದಿ ಮತ್ತು ಅಗ್ರಕಾಷ್ಟ ಇವುಗಳನ್ನು ಸಮತೂಕದಲ್ಲಿ ತೆಯಿದು ಮತ್ತಿ ಎಲೆಯ ರಸದಲ್ಲಿ ಮಿಶ್ರಣಮಾಡಿ ಆ ಗಂಧವನ್ನು ತಿಲಕದಂತೆ ಧರಿಸಿದರೆ ಸರ್ವರೂ ನಿಮ್ಮ ವಶಕ್ಕೆ ಬರುವವರಲ್ಲಿ ಯಾವ ಸಂದೇಹವೂ ಇಲ್ಲ.

ತೆಂಗಿನಕಾಯಿಯ ಚಿಪ್ಪನ್ನು ಚೆನ್ನಾಗಿ ಕುಟ್ಟಿ ಚೂರ್ಣ ಮಾಡಬೇಕು ಅದಕ್ಕೆ ನಾಲ್ಕೈದು ತುಳಸೀ ಬೀಜವನ್ನು ಬೆರಿಸಿ ಅದನ್ನೊಂದು ತಾಮ್ರದ ತಗಡಿನಲ್ಲಿ ಕಟ್ಟಿ ತಾಯಿತದಂತೆ ನಿಮ್ಮ ದೇಹದ ಎಡಭಾಗದಲ್ಲಿ ಬಂಧಿಸಿಟ್ಟು ಕೊಳ್ಳಬೇಕು ಆಗ ಸರ್ವಸ್ವವೂ ನಿಮಗೆ ಮೋಹಿಸುವದರಲ್ಲಿ ಆಶ್ಚರ್ಯ ಇಲ್ಲ.

ಪಂಚಾಂಗ ಮತ್ತು ಕರಿ ಎಳ್ಳನು ಸುಟ್ಟು ಕಾಡಿಗೆಯನ್ನು ರಚಿಸಬೇಕು ನಂತರ ಅದನ್ನು ತುಪ್ಪದಲ್ಲಿ ಕಲಸಿ ಕಾಡಿಗೆಯಂತೆ ಕಣ್ಣು ರೆಪ್ಪೆಗೆ ಲೇಪಿಸಿ ಕೊಂಡರೆ ನಿಮ್ಮ ದೃಷ್ಟಿಗೆ ಬಿದ್ದವರೆಲ್ಲರೂ ನಿಮ್ಮ ಮೇಲೆ ಮೋಹಿತರಾಗಿ ಬರುವರು.

ಸುಗಂಧ ಹಾಗು ಗೋಪಿಚಂದವನ್ನು ಮಿಶ್ರಣ ಮಾಡಿ ನಿಮ್ಮ ಅಂಗೈಗೆ ಲೇಪಿಸಿಕೊಳ್ಳಬೇಕು ನಂತರ ನೀವು ಕೈಯಿಂದ ಸ್ಪರ್ಶಿಸಿದವರೆಲ್ಲರೂ ನಿಮ್ಮ ಮೇಲೆ ಮೋಹ ತಾಳುವದರಲ್ಲಿ ಯಾವ ಸಂಶಯವೂ ಇಲ್ಲ.

ನವಿಲುಗರಿಯನ್ನು ಸುಟ್ಟು ಬೂದಿ ಮಾಡಬೇಕು. ನಂತರ ಅದಕ್ಕೆ ಶಕ್ತಿ ಚೂರ್ಣವನ್ನು ಮಿಶ್ರಣ ಮಾಡಿ ತಾಡಪತ್ರಿಯ ರಸದಲ್ಲಿ ದಿನವೂ ಸ್ವಲ್ಪ ಸ್ವಲ್ಪ ಸೇವಿಸುವದರಿಂದ ಕೆಲವೇ ದಿವಸಗಳೊಳಗಾಗಿ ನಿಮ್ಮಲ್ಲಿ ವಿಶ್ವಮೋಹನ ಶಕ್ತಿಯು ಪ್ರಾಪ್ತವಾಗುವದರಲ್ಲಿ ಯಾವ ಸಂಶಯವೂ ಇಲ್ಲವೆಂದು ತಿಳಿಯಿರಿ.

## ಶತ್ರುಮೋಹನ ಪ್ರಯೋಗ

ಬಾಳೆಯ ಎಲೆಯಮೇಲೆ ಅರಸಿನ ತುಂಡಿನಿಂದ ನಿಮ್ಮ ಶತ್ರುವಿನ ಹೆಸರನ್ನು ಬರೆಯಿಸಿ ನಂತರ ಅದನ್ನು ಗೋ ಮೂತ್ರದಲ್ಲಿ ಕೊಳೆಹಾಕಿ ತಯಾರಾದ ಮಿಶ್ರಣವನ್ನು ನಿಮಗಾಗದವರ ಮೇಲೆ ಅವರಿಗೆ ಗೊತ್ತಾಗದಂತೆ ಎರಚಿದರೆ ಆಗ ಆ ಶತ್ರುವು ನಿಮ್ಮಮೇಲೆ ಮೋಹಿತನಾಗುವದಲ್ಲದೇ ನಿಮ್ಮ ಸ್ನೇಹಕ್ಕಾಗಿ ಅತ್ಯಾತುರವುಳ್ಳವನಾಗುವನು.

## ಸ್ತ್ರೀ ಮೋಹನ ಪ್ರಯೋಗ

ಹಸಿರುವಾಣಿ ಎಲೆಯ ರಸದೊಂದಿಗೆ ಆಕಳ ಹಾಲನ್ನು ಬೆರೆಸಿ ನೀವು ಇಚ್ಛಿಸಿದ ಸ್ತ್ರೀಯಮೇಲೆ ಆಕೆಗೆ ಅರಿಯದಂತೆ ಅದನ್ನು ಪ್ರೋಕ್ಷಿಸಿದರ ಆಗ ಆಕೆ ಖಂಡಿತವಾಗಿಯೂ ನಿಮ್ಮಮೇಲೆ ಮೋಹಗೊಳ್ಳುವಳು.

ಪರಮಾಸಿ ಮತ್ತು ಜೇನುತುಪ್ಪವನ್ನು ಬೆರೆಸಿ ಯಾವ ಸ್ತ್ರೀಯನ್ನು ಮೋಹಿತಗೊಳಿಸಬೇಕೆಂದಿರುವಿರೋ ಆ ಸ್ತ್ರೀಗೆ ತಾಂಬೂಲದಲ್ಲಿ ಅದನ್ನು ಸೇರಿಸಿ ಕೊಟ್ಟರೆ ಆಕೆ ನಿಮ್ಮಮೇಲೆ ಮೋಹಿತಳಾಗಿ ನಿಮ್ಮ ಬಳಿಗೇ ಬರುವಳು.

## ಪತಿಮೋಹನ ಪ್ರಯೋಗ

ಆಕಳ ಹಾಲಿಗೆ ಕಿನ್ನೀರು ಮತ್ತು ಕೇಸರಿಯನ್ನು ಬೆರೆಸಿ ರಾತ್ರಿ ಮಲಗುವ ಮುನ್ನ ಅದನ್ನು ಪತಿಗೆ ಕುಡಿಯಲು ಕೊಟ್ಟು ಆತನ ಸಮಾಗಮ ಮಾಡಿದರೆ ಆ ಪತಿಯು ಆ ಸ್ತ್ರೀಯ ಬಗ್ಗೆ ಮೋಹಗೊಂಡು ಆವಳ ದಾಸನಾಗುವನು.

ಒಣ ಶುಂಠಿ ಮತ್ತು ಕರಿಮೆಣಸು ಇವುಗಳನ್ನು ಚೆನ್ನಾಗಿ ಕುಟ್ಟಿ ಚೂರ್ಣ ಸಿದ್ಧಪಡಿಸಬೇಕು ಅದನ್ನು ಬೆಲ್ಲದಲ್ಲಿ ಬೆರೆಸಿ ಸಣ್ಣ ಸಣ್ಣ ಗುಳಿಗೆಯನ್ನು ಮಾಡಬೇಕು ಅದನ್ನು ರಾತ್ರಿ ಮಲಗುವಾಗ ಪತಿಯ ತಾಂಬೂಲದೊಂದಿಗೆ ಸೇರಿಸಿ ತಿನ್ನಲು ಕೊಟ್ಟರೆ ಆ ಪತಿಯು ಆಜನ್ಮಪರ್ಯಂತರ ಅವಳ ಮೋಹದಲ್ಲುಳಿದು ಪರಸ್ತ್ರೀಯನ್ನು ಕಣ್ಣೆತ್ತಿ ಕೂಡ ನೋಡಲಾರ.

## ರಾಜಮೋಹನ ಪ್ರಯೋಗ

ಕೋಳಿಪುಕ್ಕ ಮತ್ತು ನಾಗರ ಹಾವಿನ ಪೊರೆ ಇವೆರಡನ್ನೂ ಕುಟ್ಟಿ ಬೂದಿ ಮಾಡಿ ಆ ಭಸ್ಮವನ್ನು ಹಣೆಗೆ ಧರಿಸಿ ರಾಜ—ಇಲ್ಲವೇ ಅವನ ಅನುಯಾಯಿಗಳಾದ ಸರಕಾರೀ ಅಧಿಕಾರಿಗಳ ಎದುರು ಹೋದರೆ ಅವರು ನಿಮ್ಮಮೇಲೆ ಮೋಹಿತರಾಗಿ ನಿಮ್ಮಿಷ್ಟದಂತೆ ನಡೆದುಕೊಳ್ಳುವದಕ್ಕೆ ಸಿದ್ಧರಾಗುವರು.

## ಸ್ತಂಭನ ಕರ್ಮಸಾಧನೆ

ವಸ್ತುವಾಗಲೀ ಇಲ್ಲವೇ ಜೀವಕೋಟಿಗಳೊಳಗಿನ ಯಾವ ಪ್ರಾಣಿಯೇ ಆಗಲಿ ಪ್ರಯೋಗ ಪ್ರಭಾವದಿಂದ ನಿಶ್ಚೇಷ್ಟಿತಾವಸ್ಥೆಗಿಳಿಯುವಂತೆ ಮಾಡುವದೇ ಸ್ತಂಭನ ಕರ್ಮವು. ಈ ಕರ್ಮ ಸಾಧನಾ ಕಾಲಕ್ಕೆ ಸಾಧಕನು ಜಿತೇಂದ್ರಿಯನಾಗಿಯೂ ಸಚ್ಚಾರಿತ್ರ್ಯವುಳ್ಳವನಾಗಿಯೂ, ಮಿತಭಾಷಿಯೂ ಆಗಿರಬೇಕು. ದಿಲ್ಲದೆ ಕೇವಲ ವ್ಯವಹಾರಿಕ ಮನುಷ್ಯನಂತಿದ್ದಲ್ಲಿ ಬುದ್ಧಿ ಸ್ಥಿಮಿತಕ್ಕೆ ಬಾರದೆ

ಸಾಧನಾ ಫಲವು ಕೈಗೆ ದೊರಕದೆ ನಿರುತ್ಸಾಹಿಸಬೇಕಾಗಬೇಕಾದೀತು. ಆದಕಾರಣ ಕರ್ಮಾಚಾರದಲ್ಲಿ ಅತ್ಯಂತ ಜಾಗರೂಕರಾಗಿ ವಿಧಿಪೂರ್ವಕ ಸಾಧನೆಯಲ್ಲಿ ತೊಡಗಿದರೆ ಕರ್ಮಫಲವು ತಾನೇ ತಾನಾಗಿ ದೊರಕುವದು.

# ಮಂತ್ರಗಳು

## ಶತ್ರುಸ್ತಂಭನ ಮಂತ್ರ

ಓಂ ವಾಗ್ವಿರೂಪಾಯ ವಿಶ್ವಂಭರಾಯ ಸುಕೇಷು
ಸನ್ನಿವಿಷ್ಟಾಂ.................ಸ್ಯ ಬಂಧದಂ ಕುರು

ಸಾವಿರದೈದುಬಾರಿ ಈ ಮಂತ್ರವನ್ನು ಜಪಿಸಿ ಸಿದ್ಧಿಮಾಡಿಕೊಳ್ಳಬೇಕು ನಂತರ ಈ ಮಂತ್ರವನ್ನು ಪ್ರಯೋಗ ಕಾಲದಲ್ಲಿ ಮಂತ್ರದಲ್ಲಿ ಬಿಟ್ಟಿರುವ ಜಾಗ ದಲ್ಲಿ ನಿಮ್ಮ ಶತ್ರುವಿನ ಹೆಸರನ್ನು ಸೇರಿಸಿಕೊಂಡು ನೂರೈದುಬಾರಿ ಜಪಿಸಬೇಕು ಆಗ ನಿಮ್ಮ ಶತ್ರುವು ಗರಬಡಿದವರಂತೆ ನಿಂತಲ್ಲಿಯೇ ಸ್ತಂಭನ ಹೊಂದುವರು ಇದು ಎಂದಿಗೂ ಹುಸಿಯಾಗದ ಪ್ರಯೋಗ.

## ಜಲಸ್ತಂಭನ ಮಂತ್ರ

ಓಂ ನಮೋ ಶೀರ್ಷರೂಪಾಜಾಹ್ನವೀಂ ಸ್ತಂಭಯಂ ಘಟ

ಮೂಲ ಮಂತ್ರವನ್ನು ಮೂವತ್ತೇಳುಬಾರಿ ಜಪಿಸಿದನಂತರ ಈ ಮಂತ್ರ ವನ್ನೂ ಮುನ್ನೂರುಬಾರಿ ಜಪಿಸಬೇಕು. ಆಗ ಅದೆಷ್ಟೇ ರಭಸದಿಂದ ನುಗ್ಗುತ್ತಿ ರುವ ನೀರಾದ್ದರೂ ಸರಿಯೇ, ಬುಟ್ಟಿಯಲ್ಲಿ ಹಿಡಿದಿಟ್ಟ ಹಾವಿನಂತೆ ಸ್ತಂಭನ ಹೊಂದುವದು

ಇನ್ನೊಂದು ಮಂತ್ರ—

ಅಗ್ರತೇ ಮಹೋದಧಿ ಜಾಹ್ನವೀಂ ಸಮಾಗ್ರಬಲಂ ಸ್ತಂಭನಂ ಕುರು

ಬಿಳಿ)ಎಳ್ಳು ಹಾಗು ಚೆಂದೂರಗಳನ್ನು ಮಿಶ್ರಣ ಮಾಡಿ ಮೇಲಿನ ಮಂತ್ರದಿಂದ ನೂರೆಂಟುಬಾರಿ ಅಭಿಮಂತ್ರಿಸಿ ಅದನ್ನು ನೀರಿಗೆ ಸ್ಪರ್ಶಿಸಿದರೆ ಜಲವು ಸ್ಥಿರವಾಗುವದರಲ್ಲಿ ಯಾವ ಸಂದೇಹವೂ ಇಲ್ಲ

## ಗರ್ಭಸ್ತಂಭನ ಮಂತ್ರ

ಪ್ರಲಗ್ನೇ ಪರಿತ್ರಾಣಾಂ ಪ್ರಸೂಣಾಂ ಮಹಿಸನ್ನಿಧಿಂ
ಗರ್ಭಸ್ತಂಭನಂ ಪಸ್ಯಂತಾಂ ಪಕ್ಷೇಪುನರೋಗಚ್ಛತಾಂ

ಮೊದಲು ಈ ಮಂತ್ರವನ್ನು ಸಾವಿರದೆಂಟುಬಾರಿ ಜಪಿಸಿ ಮಂತ್ರಸಿದ್ಧಿ

ಮಾಡಿಕೊಳ್ಳಬೇಕು. ತದನಂತರ ಪ್ರಯೋಗ ಮಾಡುವ ಕಾಲದಲ್ಲಿ ಎ
ತ್ತೆಂಟುಬಾರಿ ಜಪಿಸಿ ಜಪಾಂತ್ಯದಲ್ಲಿ ಮಂಗಳಾದೇವಿಗೆ ಗರ್ಭಿಣಿಯ ಹೆಸರಿ
ಅರ್ಘ್ಯೋದಕ ಕೊಟ್ಟಲ್ಲಿ ಗರ್ಭಸ್ತಂಭನವಾಗುವದು.

### ವೀರ್ಯಸ್ತಂಭನ ಮಂತ್ರ

ವಕ್ರಭೂಷಿತಾಂ ಮನೋಕಾಮಿತಾಂ ಚಕ್ರದೂಷಣ
ಸಮಾಗಮಂ ವಶ್ಯರಂಬಾ ವೀರ್ಯಸ್ತಂಭನಂ ವಶ್ಯೋಪಶ್ಯರೋರುತಿಃ

ಒಂದು ಲೋಟದಲ್ಲಿ ನೀರನ್ನು ತೆಗೆದುಕೊಂಡು ಈ ಮಂತ್ರದಿಂದ ಇ
ತ್ತೆಂಟುಬಾರಿ ಅದನ್ನು ಅಭಿಮಂತ್ರಿಸಬೇಕು. ನಂತರ ಆ ನೀರನ್ನು ಕುಡಿ
ಮೌನವ್ರತ ಧಾರಣಮಾಡಿ ರತಿಕ್ರೀಡೆಯಲ್ಲಿ ತೊಡಗಬೇಕು. ಕ್ರೀಡಾ ಕಾ
ನೆಯು ನಿಮಗೆ ಯಾವಾಗ ಸಾಕೆನಿಸುವದೋ ಆಗ ಮೌನ ಮುರಿದು ಪ್ರೇ
ಸಿಯೊಂದಿಗೆ ಮಾತನಾಡಬೇಕು. ಅಂದರೆ ಅಲ್ಲಿಯವರೆಗೂ ವೀರ್ಯಸ್ತಂಭ
ಹೊಂದಿ ರತಿಕ್ರೀಡೆಯಲ್ಲಿ ನಿಮಗೆ ಬಹಳೇ ಆನಂದವುಂಟಾಗುವದು.

### ನಿದ್ರಾಸ್ತಂಭನ ಮಂತ್ರ

ಓಂ ನಮೋ ಶಾಂತರುದ್ರಾಯ ನಿದ್ರಾಸ್ತಂಭನಂಕುರು

ತೆಂಗಿನಕಾಯಿಯೊಂದನ್ನು ಮರದಿಂದಲೇ ಕಿತ್ತು ತಂದು ಅದನ್ನು ಭ
ಮಿಗೆ ಮುಟ್ಟಿಸದೇ ಸುಲಿದು ಅದರೊಳಗಿನ ನೀರನ್ನು ಮಣ್ಣಿನ ಪಾತ್ರೆಯೊ
ದಕ್ಕೆ ಸುರಿದು ಅದನ್ನು ಮೇಲಿನ ಮಂತ್ರದಿಂದ ಏಳುಬಾರಿ ಅಭಿಮಂತ್ರಿಸಿ ಸೇ
ವಿಸಿದರೆ ನಿದ್ರಾಸ್ತಂಭನವುಂಟಾಗುವದು ಮತ್ತು ನಿದ್ರೆ ಬೇಕೆನಿಸಿದಾಗ ಅದ
ನೀರನ್ನೇ ಸ್ವಲ್ಪ ತೆಗೆದುಕೊಂಡು ಸ್ತಂಭನಂ ವಿಸರ್ಜನಂ ಕುರು. ಎಂಬುದಾ
ಐದುಬಾರಿ ಉಚ್ಚರಿಸಿ ಆ ನೀರನ್ನು ಕುಡಿದರೆ ಒಡನೇ ನೀವು ನಿದ್ರಾಪರವಶರಾ
ಗುವಿರಿ ಇದು ಅತ್ಯಂತ ಖಾತ್ರಿ ಎಂದು ತಿಳಿಯಿರಿ.

### ಅಗ್ನಿಸ್ತಂಭನಮಂತ್ರ

ಓಂ ನಮೋ ಅಘೋರೇಶ್ವರ ಅಗ್ನಿರೂಪಾಯ ಸ್ತಂಭನಂಫಟ್

ಈ ಮಂತ್ರವನ್ನು ಐದು ಸಾವಿರಬಾರಿ ಜಪಿಸಿ ಸಿದ್ಧಿ ಪಡೆಯಬೇಕ
ನಂತರ ಪ್ರಯೋಗಕಾಲದಲ್ಲಿ ಟಗರಿನ ರಕ್ತವನ್ನು ತಂದು ಈ ಮಂತ್ರದಿಂ
ಅದನ್ನು ಅಭಿಮಂತ್ರಿಸಿ ಅಗ್ನಿಯಮೇಲೆ ಪ್ರೋಕ್ಷಿಸಿದರೆ ಅದೆಂತಹ ಭೀಕ
ಜ್ವಾಲೆಯಾದರೂ ಒಡನೆಯೇ ಆರಿ ತಣ್ಣಗಾಗುವದು. ಈ ಪ್ರಯೋಗದಲ್ಲಿ
ಯಾವ ತರದ ಸಂದೇಹವೂ ಇಲ್ಲ.

# ದೃಷ್ಟಿ ಸ್ತಂಭನ ಮಂತ್ರ

ಓಂ ನಮೋ ಇಂದೇಂದು ಲಾಂಕೃತಾಂ ದೃಷ್ಟಿ ಸ್ತಂಭನಂ ಸುಮಾಕೃತಾಂ

ಬುಧವಾರ ದಿನದಂದು ಸಂಪೂರ್ಣವಾಗಿ ಮೌನವ್ರತ ಧಾರಣೆಮಾಡಿ ...ವಾರದಿನದಂದು ನಸುಕಿನಲ್ಲಿಯೇ ಎದ್ದು ತಣ್ಣೀರು ಸ್ನಾನಮಾಡಿ ಒದ್ದೆ ...ಯನ್ನು ಧರಿಸಿ ಪದ್ಮಾಸನದಲ್ಲಿ ಪೂರ್ವಾಭಿಮುಖನಾಗಿ ಕುಳಿತು ಮೇಲಿನ ...ಂತ್ರವನ್ನು ಐನೂರು ಐವತ್ತೈದು ಬಾರಿ ಜಪಿಸಬೇಕು. ಆಗ ಮಂತ್ರಸಿದ್ಧಿ ...ರೆಯುವದು. ನಂತರ ಇದನ್ನು ನೀವು ಯಾರಮೇಲೆ ಪ್ರಯೋಗಿಸಬೇ...ಂದಿರುವಿರೋ ಅವರೆದುರು ನಿಂತು ಐದು ಬಾರಿ ಈ ಮಂತ್ರದೊಂದಿಗೆ ಅವರ ...ಸರನ್ನುಚ್ಚರಿಸಿದರೆ ಅವರು ಸಂಪೂರ್ಣವಾಗಿ ಅಂಧರಾಗುವರು ಅಲ್ಲದೆ ಇದರಲ್ಲಿ ...ಂದು ವಿಶೇಷ ಎಚ್ಚರಿಕೆ ಇರುವದು. ಅದೇನಂದರೆ ಪ್ರಯೋಗಕಾಲದಲ್ಲಿ ...ತಪ್ಪಿಯಾದರೂ ಸರಿಯೇ ಮಂತ್ರದೊಂದಿಗೆ ಅವರ ಹೆಸರು ಉಚ್ಚರಿಸಲು ...ರೆತರೆ ಆಗ ನಿಮ್ಮ ದೃಷ್ಟಿಗೆ ದೋಷ ತಗಲಿ ನೀವು ಅಂಧರಾಗುವಿರಿ. ಆದ್ದ...ಂದ ಈ ಪ್ರಯೋಗದಲ್ಲಿ ಅತಿಯಾಗಿ ಎಚ್ಚರಿಕೆ ವಹಿಸುವದು ದಹಿತ.

## ಸ್ತಂಭನಾ ಪ್ರಯೋಗಗಳು

### ಮನುಷ್ಯಸ್ತಂಭನ ಪ್ರಯೋಗ

ಮೇಕೆಯ ಮೂಳೆಯನ್ನು ತಂದು ನುಣ್ಣಗೆ ಪುಡಿ ಮಾಡಬೇಕು ಅದ...ನ್ನೊಂದು ಕವಡೆಗೆ ತುಂಬಿ ಹಳದಿ ವಸ್ತ್ರದಿಂದ ಅದನ್ನು ಕಟ್ಟಬೇಕು. ನಂತರ ಅದನ್ನು ಸ್ತಂಭನ ಮಂತ್ರದಿಂದ ಅಭಿಮಂತ್ರಿಸಿ ಭೂಮಿಗೆ ತಾಗಿಸದೇ ಯಾರ ಕಣ್ಣಿಗೂ ಬೀಳದ ಸ್ಥಳದಲ್ಲಿ ಬಚ್ಚಿಡಬೇಕು. ಹಾಗೆ ಬಚ್ಚಿಟ್ಟ ಕವಡೆಯು ಎಲ್ಲಿಯವರೆಗೂ ನೆಲಕ್ಕೆ ತಗಲುವುದಿಲ್ಲವೋ ಎಲ್ಲಿಯ ವರೆಗೂ ಅದು ಯಾರ ಕಣ್ಣಿಗೂ ಬೀಳುವದಿಲ್ಲವೋ ಅಲ್ಲಿಯವರೆಗೂ ಅದರಲ್ಲಿ ಕಾರ್ಯಶಕ್ತಿಯು ಇದ್ದು ನೀವು ಯಾರನ್ನು ಸ್ತಂಭಿಸಬೇಕಾಗಿದೆಯೋ ಅವರಿಗೆ ತಿಳಿಯದಂತೆ ಸ್ಪರ್ಶಿಸಬೇಕು. ಆಗ ಅವರು ಸ್ತಂಭನ ಹೊಂದುವರು. ನಂತರ ನೀವು ಅವರನ್ನು ಸ್ಪರ್ಶಿಸುವವರೆಗೂ ಅವರು ಅದೇ ಅವಸ್ಥೆಯಲ್ಲಿರುವರು.

## ಬುದ್ಧಿಸ್ತಂಭನ ಪ್ರಯೋಗ

ಹೆಣ್ಣುಮೊಲದ ಕೂದಲನ್ನು ತಂದು ಸುಟ್ಟು ಆ ಬೂದಿಯನ್ನು ಸ್ತಂಭನ ಮಂತ್ರದಿಂದ ಅಭಿಮಂತ್ರಿಸಿ ನೀವು ಯಾರಮೇಲೆ ಆ ಹುಡಿಯನ್ನು ಚಲ್ಲುವಿರೊ ಅವರ ಬುದ್ಧಿ ಸ್ತಂಭನವಾಗುವದು.

## ಇನ್ನೊಂದು ಪ್ರಯೋಗ

ಜಿಂಕೆಯ ಕೊಂಬನ್ನು ತೆಯಿದು ಗಂಧವನ್ನು ತಯಾರಿಸಿ ಅದಕ್ಕೆ ಪಚ್ಚೆ ಕರ್ಪುರವನ್ನು ಮಿಶ್ರಣಮಾಡಿ ಆ ತಿಲಕವನ್ನು ನೀವು ಹಣೆಗೆ ಧರಿಸಿಕೊಳ್ಳಬೇಕು ಆಗ ಆ ತಿಲಕವನ್ನು ನೋಡಿದವರೆಲ್ಲರೂ ಬುದ್ಧಿಮಾಂಧ್ಯಹೊಂದಿ ಮಂಕಾಗುವದು ನಿಶ್ಚಿತ.

## ಶತ್ರುಸ್ತಂಭನ ಪ್ರಯೋಗ

ಬಿದಿರು ಹೂವು ಮತ್ತು ಕಲ್ಲುನಾರನ್ನು ತಿಂದು ಮಿಶ್ರಣಮಾಡಿ ನಿಂಬೀ ಹಣ್ಣಿನ ರಸದೊಂದಿಗೆ ಬೆರೆಸಿ ಅದನ್ನು ಬಿದರಿನ ಕೊಳವೆಯಲ್ಲಿ ತುಂಬಿ ನಿಮ್ಮ ಶತ್ರುವು ಮಲಗಿರುವ ವೇಳೆ ನೋಡಿ ಅವನ ಕೋಣೆಯಲ್ಲಿ ಅದನ್ನಿಟ್ಟುಬಂದರೆ ಪುನಃ ನೀವು ಆ ಕೊಳವೆಯನ್ನು ತರುವವರೆಗೂ ನಿಮ್ಮ ಶತ್ರುವು ಮೇಲೇಳುವುದೇ ಇಲ್ಲ

## ಪಶುಸ್ತಂಭನ ಪ್ರಯೋಗ

ಹಲಸಿನ ಹಣ್ಣಿನ ಬೀಜವನ್ನು ತಂದು ಸ್ತಂಭನ ಮಂತ್ರದಿಂಹ ಅದನ್ನು ಅಭಿಮಂತ್ರಿಸಿ ಪ್ರಾಣಿಗಳ ಕತ್ತಿಗೆ ಕಟ್ಟಿದರೆ ಅವು ಇದ್ದಲ್ಲಿಯೇ ಸ್ತಂಭನಗೊಳ್ಳುವವು.

## ಪುರುಷಸ್ತಂಭನಪ್ರಯೋಗ

ಪ್ರಯೋಗಪುರುಷನ ಎಡಗಾಲ ಧೂಳಿಯನ್ನು ತಂದು ಅದರಲ್ಲಿ ನಿಮ್ಮ ಎಡಗೈ ಬೆರಳಿನ ಉಗುರನ್ನಿಡಬೇಕು ನಂತರ ಅದನ್ನು ಮಾವಿನ ಓಟಿಯೊಳಗೆ ತುಂಬಿ ನೂರೇಳುಬಾರಿ ಸ್ತಂಭನ ಮಂತ್ರದಿಂದ ಅಭಿಮಂತ್ರಿಸಬೇಕು ಆಗ ಒಡನೆಯೇ ಆ ಪುರುಷನು ಪುಂ[illegible] [illegible]ದನ್ನು ಕೇಳಿದ ಹಾವಿನಂತೆ ನಿಮ್ಮೆದುರಿಗೆ ಓಡಿ ಬಂದು ಸ್ತಂಭಿತನಾ[illegible]

## ಗರ್ಭಸ್ತಂ[illegible] ಪ್ರಯೋಗ

ಸಂಭೋಗ ಕಾ[illegible]ವು ಮುಗಿದ[illegible]ಕ ಹೆಣ್ಣು ಮಾತನಾಡದೆ ಹೋಗಿ

ಜೇನುತುಪ್ಪದಲ್ಲಿ ಕರವೀರ ಬೀಜವನ್ನು ಅರೆದು ಸ್ತಂಭನ ಮಂತ್ರದಿಂದ ಅದನ್ನು ಘೂರುಬಾರಿ ಅಭಿಮಂತ್ರಿಸಿ ಸೇವಿಸಬೇಕು. ಆಗ ಗರ್ಭ ಪತನ ವಾಗದೇ ಸ್ಥಿರವಾಗುವದು. ಇದು ಅತ್ಯಂತ ಖಾತ್ರಿ ಪ್ರಯೋಗ

ಇನ್ನೊಂದು ಪ್ರಯೋಗ

ಮಂಗಳವಾರದಿನಹಂದು ಅಕ್ಕತಂಗಿಯರ ಬೇರನ್ನು ತಂದು ಹಸುವಿನ ತುಪ್ಪದಲ್ಲಿ ತೇದು ಸ್ತಂಭನ ಮಂತ್ರದಿಂದ ಅದನ್ನು ಐದುಬಾರಿ ಅಭಿಮಂತ್ರಿಸಿ ಸೇವಿಸಿದರೂ ಗರ್ಭಪಾತವಾಗುವದಿಲ್ಲ.

## ಭೂತನಾಥನ ಕರ್ಮ

ಭೂತಸಾಧನೆಗೆ ಮೊದಲು ಅದರ ಅಧಿಪತಿಯಾದ ಅಘೋರೇಶ್ವರನನು ಪೂಜಿಸಿ ಪ್ರಸನ್ನೀಕರಿಸಿಕೊಳ್ಳಬೇಕು. ಸಾಧನಾ ಕಾಲದಲ್ಲಿ ವ್ರತ ನೇಮಗಳನ್ನು ಕಟ್ಟುನಿಟ್ಟಾಗಿ ಆಚರಿಸಬೇಕು. ರಾಜಸ ತಾಮಸಾಹಾರಗಳನ್ನು ತ್ಯಜಿಸಿ ದಿನ ದಲ್ಲಿ ಅರ್ಧದಿನಮಾತ್ರ ಸಾತ್ವಿಕಾಹಾರ ಸೇವನೆಯಲ್ಲಿರಬೇಕು. ಸ್ತ್ರೀ ಸಂಪರ್ಕ ಮಾಡಕೂಡದು. ಪ್ರತಿದಿನ ಸಂಜೆ ಸೂರ್ಯಾಸ್ತ ಸಮಯದಲ್ಲಿ ಮಿಂದು ಮಡಿಯನುಟ್ಟು ಕೆಂಡಕ್ಕೆ ಮುಖಹಿಡಿದು ಚಂಡಭೈರವನ ಸ್ತೋತ್ರ ಮಾಡ ಬೇಕು. ಆ ಮಂತ್ರವು ಹೀಗಿದೆ.

ಓಂ ನಮೋ ಕಾಲಕಲ್ಯಾಯ ಕಲ್ಪಾಂತ ಕಸೂದ್ವಿಷಾ
ಚಂಡಭೈರವಂ ಚಿತುರ್ದ್ವಿಷಾಂ ಚಂಡಪ್ರಚಂಡ ಮುಪಾಸ್ಮಹೆ

ಪ್ರತಿದಿನವೂ ನೂರುಬಾರಿ ಈ ಮಂತ್ರವನ್ನು ಘಟ್ಟಿಯಾಗಿ ಪಠಿಸುತ್ತ ಜಪಾಂತ್ಯದಲ್ಲಿ ಆ ಕೆಂಡಕ್ಕೆ ಕೆಂಪುಕಣಗಲ ಹೂವನ್ನು ಆಹುತಿ ಕೊಡಬೇಕು ಈ ರೀತಿ ಹನ್ನೊಂದುದಿನ ಮಾಡಲು ಚಂಡಭೈರವನು ಪ್ರಸನ್ನನಾಗುವನು.

ಮುಂದೆ ಹನ್ನೆರಡನೇ ದಿನದಿಂದ ಸ್ಮಶಾನದಲ್ಲಿ ಸಾಧನೆಗೆ ತೊಡಗಬೇಕು

ಪ್ರತಿದಿನವೂ ರಾತ್ರಿ ಎರಡನೇ ಝಾವದಲ್ಲಿ ಸ್ಮಶಾನಕ್ಕೆಹೋಗಿ ಮೃತ್ತಿಕೆ ಯಲ್ಲಿ ಅಘೋರೇಶ್ವರನ ಪ್ರತಿಮೆಯನ್ನು ಮಾಡಿ ದಕ್ಷಿಣಾಭಿಮುಖವಾಗಿ ಸಮಾಧಿಯೊಂದರಮೇಲೆ ಅದನ್ನು ಪ್ರತಿಷ್ಠಿಸಿ ಕಪ್ಪು ಅರಿವೆ ತುಂಡೊಂದನು ಅದಕ್ಕೆ ಮುಚ್ಚಿ ಕಣಗಲ ಹೂವಿನಿಂದ ಅದನ್ನು ಅಲಂಕರಿಸಿ ಪೂಜಿಸಬೇಕು ಪೂಜಾಕಾಲದಲ್ಲಿ ಹೇಳುವ ಮಂತ್ರ ಈ ರೀತಿ ಇರುವದು.

ಓಂ ನಮೋ ಪಾನರುದ್ರಾಯ ಅಘೋರೇಶ ಕ್ರೋಧೇಶ್ವರ !
ತುಷ್ಯದೂಷೇಣಾಪರಿತ್ಯಕ್ತಾಂ ಭೂತಸಾಧನಾಂ ಸಿದ್ಧ ಕುರು ॥

ಈ ಮಂತ್ರವನ್ನು ಪಠಿಸಿ ಪೂಜೆ ನೆರವೇರಿಸಬೇಕು. ಪೂಜಾಂತ್ಯಕಾಲದಲ್ಲಿ ನಿಮ್ಮ ಹಣೆಯ ರಕ್ತವನ್ನು ಸ್ವಲ್ಪ ತೆಗೆದು ಆಹುತಿ ಕೊಡಬೇಕು.

ಇದೇ ರೀತಿ ಅವ್ಯಾಹತವಾಗಿ ಹದಿನೈದು ದಿನಗಳ ಪರ್ಯಂತರ ಸಾಧಿಸ ಬೇಕು. ಹದಿನಾರನೇ ದಿನ ಮುಕ್ತಾಯಪೂಜೆ. ಆ ದಿನ ಮಾತ್ರ ದಿನವಿಡೀ ನಿರಾಹಾರಿಯಾಗಿದ್ದು ರಾತ್ರಿ ಪೂಜೆ ಮಾಡಿ ಚಿಗರಿ ರಕ್ತವನ್ನು ಆಹುತಿ ಕೊಡ ಬೇಕು. ಆಗ ಅಘೋರೇಶ್ವರನು ಪ್ರಸನ್ನನಾಗಿ ಮೂರ್ತಿ ಇಟ್ಟಿದ್ದ ಜಾಗದಲ್ಲಿ ಭೂತವೊಂದು ಪ್ರತ್ಯಕ್ಷವಾಗುವದು. ಆಗ ಅಘೋರೇಶ್ವರ ಮಂತ್ರವನ್ನು ಪಠಿ ಸುತ್ತ ಅದರ ಜತೆಗೆ ಕೈಹಾಕಿ ಒಂದೇ ಬಾರಿಗೆ ಹಿಡಿ ಕೂದಲನ್ನು ಕಿತ್ತು ಹಿಂತಿರುಗಿ ನೋಡದೇ ಮನೆಗೆ ಓಡಿಬಂದು ಆ ಕೂದಲನ್ನು ತಾಮ್ರದ ತಗಡಿ ನಲ್ಲಿ ಬಂಧಿಸಿ ದೇಹದಲ್ಲಿ ಧರಿಸಿಕೊಂಡರೆ ಸಾಧನೆ ಸಂಪೂರ್ಣಗೊಳ್ಳುವುದು.

# ಮಂತ್ರಗಳು

## ಭೂತ ಆಕರ್ಷಣ ಮಂತ್ರ

ಓಂ ಹ್ರೀಂ ಶ್ರೀಂ ಭೂತ ನಾಥಾಯ ಅಕರ್ಷಣಂ ಕರು.

ಅಮವಾಸ್ಯೆದಿನದಂದು ರಾತ್ರಿ ಸ್ಮಶಾನಕ್ಕೆ ಹೋಗಿ ಕುಕ್ಕುಟಾ ಸೀನರಾಗಿ ಮೇಲಿನ ಮಂತ್ರವನ್ನು ಲಕ್ಷದ ಇಪ್ಪತ್ತೈದು ಸಾರಿ ಜಪಿಸಬೇಕು. ಆಗ ಮಂತ್ರ ಸಿದ್ಧಿಯಾಗಿ ಭೂತವು ನಿಮ್ಮ ವಶವರ್ತಿಯಾಗುವುದರಲ್ಲಿ ಯಾವ ಸಂ ದೇಹವೂ ಇಲ್ಲ.

## ಪ್ರೇತ ಅಕರ್ಷಣಾ ಮಂತ್ರ

ಓಂ ಪಿನಾ ಕಿನಿ ಪ್ರೇತ ಭೂತಾನಂ ಪಂಚಭ್ಯಂ ಆಕರ್ಷಣಂ ಕರು.

ಈ ಮಂಡ್ರವನ್ನು ಮೊದಲು ಸಾವಿರದೈನೂರುಬಾರಿ ಜಪಿಸಿ ಸಿದ್ಧಿಮಾಡಿ ಕೊಳ್ಳಬೇಕು. ನಂತರ ಪ್ರಯೋಗ ಕಾಲದಲ್ಲಿ ಮದುವೆಯಾಗದ ಕನ್ಯೆಯ ತಲೆಯ ಮೇಲೆ ಬೇವಿನ ಗಿಡದ ಚಿಗುರಿನಿಂದ ಈ ಮಂತ್ರವನ್ನು ಪಠಿಸುತ್ತಾ ಮೂರು ಬಾರಿ ಹೊಡೆದಲ್ಲಿ ಆಗ ಪ್ರೇತವು ಆಕೆಯ ಮೈಮೇಲೆ ಬಂದು ಮಾತ ನಾಡತೊಡಗುವುದು. ಇದರಲ್ಲಿ ಸ್ವಲ್ಪವಾದರೂ ಸಂದೇಹವೇ ಇಲ್ಲ.

## ಇನ್ನೊಂದು ಮಂತ್ರ

ಉತ್ಕಲಾ ಕಲಾ ನಾಭೇನಾ ಪ್ರಸೂತ್ವಲಂ ಶುಭ್ರಕಂ ಚಿದಾಂ. ಪ್ರೇತ ರೂಪಾಂಗೃಹಾತಿಷ್ಮಂ ವಶ್ಯತೋ ಸುದೀರ್ಘಃ

ಅಮಾವಾಸ್ಯೆ ದಿನದಂದು ರಾತ್ರಿ ಸ್ಮಶಾನಕ್ಕೆ ಹೋಗಿ ವಟ ವೃಕ್ಷದ ಕಾಟ್ಟ ಹೋಮ ಮಾಡಬೇಕು. ಅದಕ್ಕೆ ಕಣಗಲ ಹಾಗೂ ಮಂದಾರ ಪುಷ್ಪಗಳ ಆಹುತಿಯನ್ನು ಮೇಲಿನ ಮಂತ್ರದೊಂದಿಗೆ ನೂರೆಂಟು ಬಾರಿ ಹಾಕಬೇಕು. ಕೊನೆಗೆ ನಿಮ್ಮ ದೇಹದ ರಕ್ತವನ್ನು ಸ್ವಲ್ಪ ತೆಗೆದು ಪೂರ್ಣಾಹುತಿ ಕೊಡಬೇಕು ಆಗ ಪ್ರೇತವು ವಾತನಾಡತೊಡಗಿ ನಿಮ್ಮ ಆಜ್ಞಾನುವರ್ತಿಯಾಗಿ ಹಿಂಬಾಲಿಸ ವುದು ಇದು ಅತ್ಯಂತ ಖಾತ್ರಿಯಾದುದು.

## ಭೂತ ನಿವಾರಣಾ ಮಂತ್ರ

ಓಂ ನಮೋ ಆದಿರೂಪಾಯ ಭೂತ ಪಥನಾಂ ವಿಮೋಚನಾ ವಿಂಧ್ಯ ದೂಪಾಂ ಸಮಂತಸ್ವೇ ಹೂಂ ಫಟ್.

ಈ ಮಂತ್ರವನ್ನು ಏಳು ಸಾವಿರ ಬಾರಿ ಜಪಿಸಿ ಮೊದಲು ಸಿದ್ಧಿ ಪಡೆಯ ಬೇಕು. ನಂತರ ಪ್ರಯೋಗ ಕಾಲದಲ್ಲಿ ಭೂತ ಬಾಧೆಯಿಂದ ಪೀಡಿತರಾದವರ ತಲೆಯ ಮೇಲೆ ಈಚಲಗರಿಯಿಂದ ಏಳು ಬಾರಿ ಹೊಡೆಯುತ್ತಾ ಈ ಮಂತ್ರ ವನ್ನು ಪಠಿಸಬೇಕು. ಆಗ ಭೂತ ನಿವಾರಣೆಯಾಗುವುದರಲ್ಲಿ ಸಂದೇಹವೂ ಇಲ್ಲ.

## ಇನ್ನೊಂದು ಮಂತ್ರ

ವಿಶ್ವದಷ್ಟೇ ವಿನಾಶಾಯ ವಿಶ್ವತಾಂಬರ ಕನೂಷಿತಾ ವಿಕಟ ತಾಂಡವ ವಿನೂತಾನಂ ವಿಮೋಚನಾ ಸನ್ನಿವಿಷ್ಯಾ.

ಈ ಮಂತ್ರವನ್ನು ಐನೂರು ಬಾರಿ ಜಪಿಸಿ ಮೊದಲು ಜಪಿಸಿ ಸಿದ್ಧಿ ಪಡೆ ಯಬೇಕು. ನಂತರ ಯಾರಿಗೆ ಭೂತಬಾಧೆ ಉಂಟಾಗಿರುವುದೋ ಅವರಿಗೆ ಈ ಮಂತ್ರವನ್ನು ಜಪಿಸುತ್ತಾ ನವಿಲುಗರಿಯಿಂದ ಮುಡಿಯಿಂದ ಅಡಿಯವರೆಗೂ ಐದು ಬಾರಿ ನಿವಾಳಿಸಬೇಕು. ಒಡನೆಯೇ ಭೂತ ಬಾಧೆಯು ನಿವಾರಣೆ ಯಾಗಿ ವ್ಯಕ್ತಿಯು ಮೊದಲಿನಂತೆ ಆಗುವನು (ಳು).

## ಪ್ರಯೋಗಗಳು

ಬಾಣಂತಿಯ ಹಲ್ಲನ್ನು ತಂದು ಕುಟ್ಟಿ ಪುಡಿಮಾಡಿ ವಂಗ ಭಸ್ಮದೊಳಗೆ ಬೆರಸಬೇಕು. ಅದನ್ನು ನೆಲಕ್ಕೆ ಸೋಂಕಿಸದೇ ಓಂ ನಮೋ ಭೂತ್‌ನಾಥಾಯಾಯಃ ಕೃತ್ವಾ ಕರ್ತನರಿ ಕುರು. ಎಂಬ ಮಂತ್ರದಿಂದ ಅಭಿಮಂತ್ರಿಸ ಬೇಕು. ನಂತರ ಅದನ್ನು ಭೂತಬಾಧೆಯಿರುವವರ ತಲೆಯ ಮೇಲೆ ಚೆಲ್ಲಬೇಕು. ಅಗ ಮೈ ಮೇಲಿರುವ ಭೂತವು ತಾನಾಗಿಯೇ ಹೋಗವುದು

### ಶಾಕಿನಿ ನಿವಾರಣಾ ಪ್ರಯೋಗ

ಓಂ ನಮೋ ಮಹಾ ಕಾಳೀ ಮಹಾಯೋಗಿನಿ ಅಷ್ಟಭಜಂ ಮಹಾಂ ದೇವೀ ಮಹಾಂತ್ರಸ್ಯೆ ಮುಕ್ತಿದ್ವಾರಾ ಮಹೋದಧಿಃ

ಯಾರ ಮೇಲೆ ಶಾಕಿನಿ (ಡಾಕಿನಿ) ಬಂದಿರುವುದೋ ಅವರನ್ನು ಒಂದು ಮಣೆಯ ಮೇಲೆ ಕೂರಿಸಿ ಈ ಮಂತ್ರವನ್ನು ಒಂದು ಸಾವಿರ ಬಾರಿ ಜಪಿಸಿ ಕುಂಕುಮವನ್ನು ಅಭಿಮಂತ್ರಿಸಬೇಕು. ನಂತರ ಉಕ್ಕಿನ ಸಣ್ಣ ಚೂರಿನಿಂದ ಪ್ರಯೋಗಿಯ ಹಣೆಯ ಮೇಲೆ ಸಣ್ಣ ಗಾಯಮಾಡಿ ಕುಂಕುಮವನ್ನು ಅದರಲ್ಲಿ ತುಂಬಬೇಕು. ಆಗ ಹಿಡಿದಿರುವ ಶಾಕಿನಿ-ಯಾ-ಡಾಕಿನಿ ಬಿಟ್ಟೋಡುವುದು.

### ಇನ್ನೊಂದು ಪ್ರಯೋಗ

ಸಪ್ತಾಂಗ ಚೂರ್ಣ ಹಾಗೂ ಚಂದ್ರಶಿಲೆಯನ್ನು ರಜಸ್ವಲೆಯಾಗದ ಕನ್ಯೆಯ ಮೂತ್ರದಲ್ಲಿ ಬೆರಸಬೇಕ. ನಂತರ ಅದನ್ನು ಮೇಲಿನ ಮಂತ್ರದಿಂದ ಅಭಿಮಂತ್ರಿಸಿ ಪ್ರಯೋಗಿಯಮೇಲೆ ಪ್ರೋಕ್ಷಿಸಿದರೆ ಕೂಡಲೇ ಅವರು ಪೂರ್ವಸ್ಥಿತಿಗಿಳಿಯುವರು. ಇದು ಅತ್ಯಂತ ಖಾತ್ರಿಯಾದುದು.

## ವಿದ್ವೇಷಣಾ ಸಾಧನೆ

ವಿದ್ವೇಷಣಾ ಕರ್ಮದ ಅಧಿದೇವತೆ ಚಂಡಿ ಎಂಡು ಹಿಂದೆಯೇ ಹೇಳಲಾಗಿದೆಯಷ್ಟೇ. ಸಾಧಕನು ಈ ಕರ್ಮಾಚಾರದಲ್ಲಿ ತೊಡಗುವಮುನ್ನ ಅಧಿದೇವನನ್ನು ಪ್ರಸನ್ನೀಕರಿಸಿಕೊಳ್ಳುವದು ಅವಶ್ಯವಾಗಿರುವದು.

ಸಾಧಕನು ಮಂಗಳವಾರದಿನ ಶುಚಿರ್ಭೂತನಾಗಿ ಅಕ್ಕಿಯ ಹಿಟ್ಟಿನಲ್ಲಿ ಚಂಡಿಕಾದೇವಿಯ ಮೂರ್ತಿಯೊಂದನ್ನು ಮಾಡಿ ಸೇವಂತಿ ಹೂವುಗಳಿಂದಲಂಕರಿಸಬೇಕು ಮತ್ತು ಕುಂಕುಮಾರ್ಚನೆ ಮಾಡಿ ಈ ಕೆಳಗಿನ ಮಂತ್ರದಿಂದ ರುದ್ರಾಕ್ಷಿಮಾಲೆಯೊಂದಿಗೆ ಜಪ ಮಾಡಬೇಕು.

ಓಂ ನಮೋ ಚಂಡಿಕಾ ಪ್ರಚಂಡ ಯೋಗಾಂ, ಇಷ್ಟಪೂರ್ಣಿಮಾಂ ತೇಜಃ ಪುಂಜಃ

ಎಂಬುದಾಗಿ ಹತ್ತು ಸಾವಿರ ಬಾರಿ ಜಪ ಮಾಡಿ ನವಧಾನ್ಯದ ನೈವೇದ್ಯ ಮಾಡಬೇಕು. ಆಗ ಚಂಡಿಯು ಪ್ರಸನ್ನಳಾಗಿ ಮೇಲಿನ ಬೀಜ ಮಂತ್ರಕ್ಕೆ ಸಿದ್ಧಿ ನೀಡುವಳು.

ವಿದ್ವೇಷಣಾ ಕರ್ಮವೆಂದರೆ ಸುಲಭವಾಗಿ ವೈರವನ್ನುಂಟು ಮಾಡುವುದು ಎಂಬರ್ಥ. ಈ ಪ್ರಯೋಗದಿಂದ ಸಾಧಕನು ಇಬ್ಬರು ಮಿತ್ರರ ನಡುವೆ ವಿರೋಧವನ್ನು ತಂದೊಡ್ಡಿ ತನ್ನ ಕಾರ್ಯವನ್ನು ನೆರವೇರಿಸಿಕೊಳ್ಳಬಹುದು. ಆದರೆ ಇದರ ಪರಿಣಾಮ ಕ್ರೂರವಾದ ಕಾರಣ ಮುಂದಾಗುವುದನ್ನು ಲಕ್ಷ್ಯದಲ್ಲಿಟ್ಟು ಕೊಂಡು ಕಾರ್ಯ ಪ್ರವೃತ್ತರಾಗಬೇಕು. ತೀರ ಸಾಮಾನ್ಯವಾದ ಕಾರ್ಯಗಳಿಗೆಂದಿಗೂ ಇದರ ಪ್ರಯೋಗ ಮಾಡಲೇ ಬಾರದು.

## ಮಂತ್ರಗಳು

ವಿದ್ವೇಷಣಾಂ ವಿಯೋಗಭಂದಃ॥ ಶತ್ರುರೂಪಶ್ಯ ಪಶ್ಚಿಮಂಕುರು॥

ಪ್ರಯೋಗ ಕಾಲದಲ್ಲಿ ಮೇಲಿನ ಮಂತ್ರದೊಂದಿಗೆ ಬಿಟ್ಟಿರುವ ಜಾಗದಲ್ಲಿ ವ್ಯಕ್ತಿಯ ಹೆಸರನ್ನು ಸೇರಿಸಿಕೊಂಡು ಐವತ್ತೊಂದು ಬಾರಿ ಮಂತ್ರ ಜಪಿಸಬೇಕು. ನಂತರ ಬಿಳಿ ಎಳ್ಳನ್ನು ಮೂರು ಬಾರಿ ಅಭಿಮಂತ್ರಿಸಿ ಅಗ್ನಿಗೆ ಹಾಕಬೇಕು. ಆಗ ನೀವು ಉಪಯೋಗಿಸಿಕೊಂಡ ಹೆಸರಿನ ವ್ಯಕ್ತಿಗಳಲ್ಲಿ ವಿರೋಧ ಉಂಟಾಗಿ ಕಾರ್ಯ ಸುಲಭವಾಗಿ ಕೈಗೂಡುವುದು.

### ಮಿತ್ರ ವಿದ್ವೇಷಣ ಮಂತ್ರ

ಓಂ ನಮೊ ಮಿತ್ರ ವಿಂದ್ಯಾಂ ಮಹತ್ಸಂದ್ಯಾಂ ವೈರ ವಿತ್ವಂ ಅಚಲಾಚಲಹಃ ಪೂತಣಿಕೆ ಬೇರನ್ನು ತಂದು ನಾಯಿಯ ಹಾಲಿನಲ್ಲಿ ಅದನ್ನು ತೊಳೆದು ಮೇಲಿನ ಮಂತ್ರದಿಂದ ಅವನ್ನು ಮಂತ್ರಿಸಬೇಕು. ನಂತರ ಅದನ್ನು ಹಲ್ಲಿನಿಂದ ಕಡಿದು ಎರಡು ತುಂಡುಮಾಡಿ ನೀವು ಯಾರ ಯಾರಲ್ಲಿ ದ್ವೇಷವನ್ನುಂಟು ಮಾಡಬೇಕೆಂದು ಬಗೆದಿರುವಿರೋ ಅವರ ಮನೆಯಿಲ್ಲಿ ಒಂದೊಂದು ತುಂಡನ್ನು ಬಚ್ಚಿಟ್ಟು ಬರಬೇಕು. ಆಗ ಅವರವರಲ್ಲಿ ವೈಮನಸ್ಸುಂಟಾಗಿ ದ್ವೇಷ ಪಾರಂಭವಾಗುವುದು ಖಂಡಿತ.

# ಪ್ರಯೋಗಗಳು

ನೀವು ಯಾ ಮೇಲೆ ಪ್ರಯೋಗ ಕೈಗೊಳ್ಳ ಬೇಕೆಂದಿರವಿರೋ ಅವರನ್ನೊಮ್ಮೆ ನಿಮ್ಮ ಮನೆಗೆ ಊಟಕ್ಕೆ ಕರೆಯಿರಿ. ನಂತರ ಅವರಿಬ್ಬರೂ ಊಟಕ್ಕೆ ಕುಳಿತಾಗ ವಿದ್ವೇಷಣಾಬೀಜ ಮಂತ್ರದಿಂದ ತುಪ್ಪವನ್ನು ಅಭಿಮಂತ್ರಿಸಿ ಬಡಿಸಿ ಅಂದರೆ ಭೋಜನಕಾಲದಲ್ಲಿ ಅವರ ಎಲೆಗೆ ಉಪ್ಪು ಬಡಿಸ ಬಾರದು. ಆಗ ಊಟವಾಗುವುದರೊಳಗಾಗಿಯೇ ಅವರವರಲ್ಲಿ ಭಿನ್ನಾಭಿಪ್ರಾಯಗಳು ಮೂಡಿ ವಿರೋಧ ಉತ್ಪನವಾಗುವದು. ಆಗ ಮಧ್ಯಸ್ಥಗಾರರಂತೆ ತೀರ್ಪುಕೊಡುತ್ತಾ ನಿಮ್ಮ ಕಾರ್ಯವನ್ನು ಸಾಧಿಸಿಕೊಳ್ಳ ಕೊಳ್ಳಬಹುದು.

### ತಂದೆ ಮಗನಲ್ಲಿ ವಿರೋಧವನ್ನುಂಟು ಮಾಡುವ ಪ್ರಯೋಗ

ತಂದೆಯ ತಲೆ ಕೂದಲನ್ನೂ ಮಗನ ಕಾಲು ಉಗುರನ್ನು ಸಂಪಾದಿಸಬೇಕು. ನಂತರ ಅದನ್ನು ತಾಮ್ರದ ತಗಡಿನಲ್ಲಿ ಬಂಧಿಸಿ ಗುಗ್ಗಳದ ಹೊಗೆ ಕೊಟ್ಟು ವಿದ್ವೇಷಣೆ ಮಂತ್ರದಿಂದ ಅಭಿಮಂತ್ರಿಸಬೇಕು. ನಂತರ ಅದನ್ನು ತೆಗೆದುಕೊಂಡು ಹೋಗಿ ಅವರ ಮನೆಯ ವಠಾರದಲ್ಲಿ ಹೂಳಿಟ್ಟು ಬರಬೇಕು. ಆಗ ತಂದೆ ಮಕ್ಕಳಲ್ಲಿ ವಿರೋಧ ಉತ್ಪನ್ನವಾಗದೇ ಇರುವದೇ ಇಲ್ಲ-

### ಪತಿಪತ್ನಿಯರಲ್ಲಿ ವಿರೋದವನ್ನುಂಟು ಮಾಡುವ ಪ್ರಯೋಗ

ಹುಸ್ನಾರು ಎಲೆಯ ಮೇಲೆ ಆಕಳ ಹಾಲಿನಿಂವ ಪತಿ-ಪತ್ನಿಯರ ಹೆಸರನ್ನು ಬರೆಯಬೇಕು, ಬಳಿಕ ಅಥರಾಂಗ ಹಾಗೂ ಅರಿಷಿಣ ಅದರಲ್ಲಿಟ್ಟು ಕೆಂಪು ವಸ್ತ್ರದಿಂದ ಅದನ್ನೊಂದು ಗಂಟು ಕಟ್ಟಬೇಕು. ಅದನ್ನು ಐವತ್ತೆಂಟುಬಾರಿ ಅಭಿಮಂತ್ರಿಸಿ ಆ ಪತಿ-ಪತ್ನಿಯರಿರುವ ಮನೆಯಲ್ಲಿ ಇಟ್ಟು ಬಂದರೆ ಅವರಿಬ್ಬರಲ್ಲಿ ಶಾಶ್ವತ ವೈರ ಪ್ರಾಪ್ತವಾಗುವುದು ಇದು ನಿಶ್ಚಯ.

### ಇನ್ನೊಂದು ಪ್ರಯೋಗ

ಈರ್ವರ ಕಾಲು ಧೂಳಿಯನ್ನು ತಂದು ಔಡಲ ಎಲೆಯಲ್ಲಿ ಕಟ್ಟಿ ಅದನ್ನು ಅಭಿಮಂತ್ರಿಸಿ ಅವರು ಉಪಯೋಗಿಸುವ ನೀರಿನ ಭಾವಿಗೆ ಚೆಲ್ಲಿ ಕೊಟ್ಟರೂ ಕಾರ್ಯ ಕೈಗೂಡುವದು,

# ಆಜನ್ಮ ವಿರೋಧ ಪ್ರಯೋಗ

ಯಾರು ಯಾರಿಗೆ ನೀವು ವಿರೋಧವನ್ನು ತಂದೊಡ್ಡ ಬೇಕೆಂದು ಸಂಕಲ್ಪಿಸಿರುವಿರೋ ಅವರ ಮೈಮೇಲಿನ ಅರಿವೆ ಚೂರನ್ನು ಸಂಪಾದಿಸಬೇಕು. ಅವರೆಡರಲ್ಲೂ ಒಂದೊಂದು ಔಡಲ ಬೀಜವನ್ನು ಅಭಿಮಂತ್ರಿಸಿ ಕಟ್ಟಿ ನೀರಿನಲ್ಲಿ ಕೊಳೆ ಹಾಕಬೇಕು. ಆಗ ಅವರಲ್ಲಿ ಪರಸ್ಪರ ವಿರೋಧ ಉಂಟಾಗಿ ಆ ಜನರು ವೈರಿಗಳಾಗುವರು. ಇದು ಅತ್ಯಂತ ಖಾತ್ರಿಯಾದ ಪ್ರಯೋಗ.

# ಉಚ್ಚಾಟನ ಕರ್ಮ ಸಾಧನೆ

ವಿದ್ವೇಷಣಾ ಹಾಗು ಉಚ್ಚಾಟನಾ ಇವೆರಡು ಕರ್ಮಗಳ ಗುರಿಯು ಹೋಲಿಕೆಗೆ ಒಂದೇ ಆಗಿ ಕಂಡು ಬಂದರೂ ಸಾಧನೆಯಲ್ಲಿ ಅನುಸರಿಸಬೇಕಾದ ಮಾರ್ಗ ಬೇರೆ ಬೇರೆಯಾಗಿರುವುದು. ಪ್ರಯೋಜನ ಮತ್ತು ಪ್ರಯೋಗಗಳು ಬೇರೆ ಬೇರೆಯಾಗಿರುವುವು. ದರೋಡೆ, ಕಳ್ಳತನ ಅಪಹಾರ ಇವೇ ಮೊದಲಾದ ಹೋಟು ಕೃತ್ಯಗಳು ಜರುಗಿದಲ್ಲಿ ಅವುಗಳ ನಿರ್ಮೂಲನಕ್ಕೆ ಈ ಉಚ್ಚಾಟನಾ ಕರ್ಮವು ಬಹಳೇ ಸಹಾಯಕವಾಗುವುದು.

ಓಂ ನಮೋ ಪಶುವ ಪ್ರೋತ್ಸಾಯ ಲೋಮಹಂಶ ಶೀರ್ಘಾವದಂತಿ||
ಯಹಸ್ಯ ಜೆಂಡಿಕೆನೇನ ಪಶುಮ ಪಶ್ಯತೇ ರುದ್ರೋಜಲಪತಿ||
ಎಂಬುದಾಗಿ ಈ ಕರ್ಮದ ಬೀಜ ಮಂತ್ರವಿರುವದು.

ಅಮವಾಸ್ಯೆಯ ದಿನದಂದು ಮುಕ್ತದ್ವಾರದಲ್ಲಿ ಕುಳಿತು ಹವಳದ ಮಣಿಯ ಜಪಮಾಲೆಯಿಂದ ಉತ್ತರಾಭಿಮುಖವಾಗಿ ಮೇಲಿನ ಮಂತ್ರವನ್ನು ಐದು ಸಾವಿರ ಬಾರಿ ಜಪಿಸಿದಲ್ಲಿ ಮಂತ್ರಸಿದ್ಧಿ ದೊರೆಯುವುದು. ಮುಂದೆ ಪ್ರಯೋಗ ಕಾಲದಲ್ಲಿ ಮೂವತ್ತೆಂಟು ಬಾರಿ ಜಪಿಸಿ ಕೃತ ಕಾರ್‍ಯರಾಗಬಹುದು.

### ಶತ್ರು ಉಚ್ಚಾಟನಾ ಮಂತ್ರ

ಓಂ ಸಹಸ್ರರೋಪೇ ಮಹಾದೇವಿ ಶತ್ರುರೂಪಾ ವರ್ಜನಂ ||
ಯಸ್ಮಾ ತಸ್ಯ........ಣಾಂ ಉಚ್ಚಾಟನಂ ಕರು||

ಪ್ರತಿಪದೆಯ ದಿನದಂದು ಭೋಗಿ ವೃಕ್ಷದಡಿಯಲ್ಲಿ ಚಿಗರಿ ಚರ್ಮದ ಮೇಲೆ ಕುಳಿತು ಈ ಮಂತ್ರವನ್ನು ಸಾವಿರ ಬಾರಿ ಜಪಿಸಬೇಕು. ನಂತರ ಅದೇ ವೃಕ್ಷದ ಕಡ್ಡಿಯೊಂದನ್ನು ಮುರಿದುಕೊಂಡು ಮಂತ್ರವನ್ನು ಮೂವತ್ತೆಂಟು ಬಾರಿ ಜಪಿಸಿ ಮಂತ್ರದಲ್ಲಿ ಬಿಟ್ಟ ಜಾಗಕ್ಕೆ ನಿಮ್ಮ ಶತ್ರುವಿನ ಹೆಸರನ್ನು ಸೇರಿಸಿಕೊಂಡು ಅಭಿಮಂತ್ರಿಸಬೇಕು. ನಂತರ ಆ ಕಡ್ಡಿಯನ್ನು ಒಂದೇ ಬಾರಿಗೆ ಮುರಿದು ಅದನ್ನು ನೆಲಕ್ಕೆ ತಾಗಿಸದೇ ಹರಿಯುವ ನೀರಿನಲ್ಲಿ ಒಗೆಯಬೇಕು. ಆಗ ನಿಮ್ಮ ಶತ್ರುವು ಉಚ್ಚಾಟನೆ ಹೊಂದಿ ಕಾರ್ಯವಾಗುವುದೆಂದು ತಿಳಿಯಿರಿ.

### ಇನ್ನೊಂದು ಮಂತ್ರ

ಓಂ ನಮೋ ಯಮುನೇ ಚೈವಪಾತ್ರೇನಾಂ ಸಂದಿಗ್ಧ ವರಿವೇಷ್ಠಿತಾಂ || ಅಹಿಂ ಭಸ್ಮಂ ಸಾಂದ್ರನಾಂ........ಸ್ಯ ಉಚ್ಚಾಟನಂ ||

ಒಂದೂವರಿ ಮುಹೂರ್ತಕಾಲ ಕುತ್ತಿಗೆ ಮಟ್ಟದ ನೀರಿನಲ್ಲಿ ನಿಂತು ಮೇಲಿನ ಮಂತ್ರೋಚ್ಚಾರಣೆಯೊಂದಿಗೆ ನಿಮ್ಮ ಶತ್ರುವಿನ ಹೆಸರನ್ನು ತೆಗೆದು ಕೊಂಡು ಚಂಡಿಕಾ ದೇವಿಗೆ ಅರ್ಘ್ಯ ಕೊಡಬೇಕು. ಆಗ ನಿಮ್ಮ ಶತ್ರುವು ಖಂಡಿತವಾಗಿಯೂ ಉಚ್ಚಾಟನೆ ಹೊಂದಿ ನೀವು ಬಯಿಸಿದಂತೆ ಆಗುವುದು. ಇದು ಖಂಡಿತ.

## ಮತ್ತೊಂದು ಮಂತ್ರ

ಓಂ ನಮೋ ತಪರಿಮಿಥ್ಯಾಂ ಗೃಹಂ ದ್ವತಾಂ. ವಿಶ್ವತಾಂಬರಿ ಉಚ್ಚಾಟನಂ ||

ಈ ಮಂತ್ರವನ್ನು ಮೂರು ಸಾವಿರ ಬಾರಿ ಜಪಿಸಿದರೆ ಸಿದ್ಧಿ ದೊರೆಯುವುದು ನಂತರ ಅಮಾವಾಸ್ಯೆ ದಿನ ಸ್ಮಶಾನಕ್ಕೆ ಹೋಗಿ ಉತ್ತರಾಭಿಮುಖನಾಗಿ ಕುಳಿತು ನೂರೆಂಟು ಬಾರಿ ಮಂತ್ರವನ್ನು ಜಪಿಸಿ ನಿಮ್ಮ ಶತ್ರುವಿನ ನಾಮೋಚ್ಚಾಟನೆಗೊಂಡು ಅಲೆಯತೊಡಗುವುದು ನಿಶ್ಚಿತ.

# ಪ್ರಯೋಗಗಳು

ಮುಳ್ಳುಹಂದಿಯ ಮುಳ್ಳನ್ನೂ, ಕುದುರೆ ಬಾಲದ ಕೂದಲನ್ನೂ ತಂದು ಉಚ್ಚಾಟನಾ ಕರ್ಮದ ಬೀಜ ಮಂತ್ರದಿಂದ ಅದನ್ನು ನೂರೆಂಟು ಬಾರಿ ಅಭಿಮಂತ್ರಿಸಿ ಅದನ್ನು ಕರಿ ಬಟ್ಟೆಯಲ್ಲಿ ಸುತ್ತಿ ಸೋಮವಾರ ದಿನದಂದು ನೀವು ಯಾರ ಮನೆಯಲ್ಲಿ ಇರಿಸಿ ಬರುವಿರೋ ಆ ಮನೆಯಲ್ಲಿ ಮುಂದೆ ದಿನೇ ದಿನೇ ವೈರವು ಹೆಚ್ಚುತ್ತಾ ಹೋಗಿ ಆ ಮನೆತನವೇ ಉಚ್ಚಾಟನ ಹೊಂದುವದರಲ್ಲಿ ಸಂಶಯವೇ ಇಲ್ಲಾ.

ಆನೆಯ ಲದ್ದಿಯನ್ನು ಮತ್ತು ಚಿತಾಭಸ್ಮ ಇವೆರಡನ್ನು ಕೂಡಿಸಿ ಅದನ್ನು ಅಭಿಮಂತ್ರಿಸಬೇಕು ನಂತರ ಅದನ್ನು ತೆಂಗಿನಕಾಯಿಯ ಚಿಪ್ಪಿನಲ್ಲಿಟ್ಟು ಕಪ್ಪು ಬಟ್ಟೆಯಿಂದ ಸುತ್ತಬೇಕು. ಅದನ್ನು ನೀವು ಯಾರ ಮನೆಯಲ್ಲಿ ಇಟ್ಟು ಬರುವಿರೋ ಆ ಮನೆಯಲ್ಲಿ ತೀವ್ರವೇ ಗೃಹ ಕಲಹಪ್ರಾಪ್ತವಾಗಿ ಸರ್ವರೂ ಉಚ್ಛಾಟನ ಹೊಂದುವರು.

ಬೇವಿನ ಬೀಜ ಹಾಗು ಅಕ್ಕಿಕಾಳನ್ನು ಚೆನ್ನಾಗಿ ಹುರಿದು ಪುಡಿ ಮಾಡಬೇಕು. ನಂತರ ಆ ಚೂರ್ಣವನ್ನು ಅಭಿಮಂತ್ರಿಸಬೇಕು. ಅದನ್ನು ಇಪ್ಪತೊಂದು

ದಿನಗಳವರೆಗೂ ಸೂರ್ಯ ರಶ್ಮಿಯು ಬೀಳದ ಸ್ಥಳದಲ್ಲಿ ನೆಲಕ್ಕೆ ತಾಗಿಸದದೇ ಇಡಬೇಕು ನಂತರ ಅದನ್ನು ನಿವು ಯಾರ ಮೇಲೆ ಎರಚುವಿರೋ ಅವರು ಉಚ್ಚಾಟನೆ ಹೊಂದುವದು ಖಂಡಿತ.

## ಮಾರಣ ಕರ್ಮ ಸಾಧನೆಯು

ಕೆಳಗೆ ಸೂಚಿಸುವಂತೆ ಈ ಕರ್ಮವು ಬಹು ಘೋರ ತರವಾದದ್ದು. ಪ್ರಾಣ ಹರಣವು ಮಾರಣ ಕರ್ಮದಿಂದ ಬಹು ಸುಲಭ ಸಾಧ್ಯವಾದುದು ಆದರೆ ಇದನ್ನು ಪ್ರಯೋಗಿಸುವಾಗ ಬಹಳೇ ವಿವೇಚನೆ ಅತ್ಯವಶ್ಯಕ ಸ್ವತಃ ಪ್ರಾಣಾಪಾಯ ಸಿಲುಕಿದಾಗ, ಇಲ್ಲವೇ ದುರ್ಜನರಿಂದ ಪೀಡೆಗೊಳಗಾದಾಗ ಮಾತ್ರವೇ ಈ ಕರ್ಮವನ್ನು ಅನುಷ್ಠಾನಕ್ಕೆ ತರಬೇಕು.

ಮಾರಣ ಕರ್ಮದ ಅಧಿದೇವತೆ ಭೈರವಿಯೆಂದು ಹಿಂದೆಯೇ ಉಲ್ಲೇಖಿಸಲಾಗಿದೆಯಷ್ಟೆ? ಆ ಕಾಲ ಭೈರವಿಯನ್ನು ಸಂತುಷ್ಟಿಗೊಳಿಸಿ ಸ್ವಾಧೀನಕ್ಕೆ ತೆಗೆದುಕೊಳ್ಳುವುದೆಂದರೆ ಅದೊಂದು ಮಹಾ ತಪಸ್ಸೇ ಸರಿ. ಸಾಧಕನು ಈ ಕಾರ್ಯದಲ್ಲಿ ಎಷ್ಟೆಷ್ಟು ಎಚ್ಚರಿಕೆ, ಆಸ್ಥೆ ವಹಿಸಿದರೂ ಅಷ್ಟಷ್ಟು ಕ್ಷೇಮ. ಎಚ್ಚರಿಕೆ ತಪ್ಪಿ ಎಲ್ಲಿಯಾದರೂ ಸ್ವಲ್ಪ ಮಟ್ಟಿಗೆ ಕರ್ಮ ಲೋಪವಾದರೂ ಸಾಕು ಪ್ರಾಣಕ್ಕೇ ಅಪಾಯ. ಇದನ್ನು ಮಾತ್ರ ಸಾಧಕನು ಚೆನ್ನಾಗಿ ಲಕ್ಷ್ಯ ಕೊಟ್ಟು ಗಮನಿಸಿರಬೇಕು.

ಓಂ ಅಘೋರೇಶ್ವರೀ ಕಮೀ ತ್ರಾಕಾ
ಸತ್ರ ರುದ್ರೋ ವಿನಾಶಿನಿಃ
ಭಸ್ಮವಂಥ್ಯೆ ಮಹಾಭೈರವಿ
ಚಿತ್ರ ಶುಷ್ಕ ಸಮಾಗಮಂ|| ಎಂಬುದಾಗಿ ಈ ಕರ್ಮದ ಬೀಜ ಮಂತ್ರವಿರುವುದು.

ಶನಿವಾರವೇ ಅಮಾವಾಸ್ಯೆ ಬರುವಂತಹ ದಿನವನ್ನು ಹುಡುಕಿಕೊಂಡು ಸಾಧಕನು ಸ್ಮಶಾನಕ್ಕೆ ಹೋಗಬೇಕು. ಹರಿಯುವ ಜಲದಲ್ಲಿ ಸ್ನಾನ ಮಾಡಿ ಬಂದು ನಗ್ನಾವಸ್ಥೆಯಲ್ಲಿ ಉತ್ತರಾಭಿ ಮುಖವಾಗಿ ಮಕರಾಸನ ಹಾಕಿಕೊಂಡು ಮೇಲಿನ ಬೀಜ ಮಂತ್ರವನ್ನು ಸಾವಿರದೈದು ಬಾರಿ ಜಪಿಸಬೇಕು. ನಂತರ ಪಶ್ಚಿಮಾಭಿ ಮುಖವಾಗಿ ಕುಳಿತು [illegible] ಕಟ್ಟಿಗೆಯಿಂದ ಹೋಮ

ರಚಿಸಬೇಕು. ಮೃತ್ತಿಕೆ ಹಾಗೂ ಕೆಂಪು ಅಕ್ಕಿಯ ಅನ್ನವನ್ನು ಹೋಮಕ್ಕೆ ಅರ್ಪಿಸುತ್ತಾ ಪುನಃ ಅದೇ ಮಂತ್ರ ನೂರೆಂಟು ಬಾರಿ ಜಪಿಸಬೇಕು. ನಂತರ ಕೆಂಪು ಕಣಗಲ ಹೂವಿನ ಆಹುತಿಯೊಂದಿಗೆ ದೇಹದ ಎಡಭಾಗದಿಂದ ಸ್ವಲ್ಪ ರಕ್ತ ತೆಗೆದು ಪೂರ್ಣಾಹುತಿ ಕೊಡಬೇಕು. ನಂತರ ಆ ಯಜ್ಞಾಹುತಿಯ ಶೇಷವನ್ನು ಕೆಂಪು ಬಟ್ಟೆಯಲ್ಲಿ ಕಟ್ಟಿಕೊಂಡು ನಂತರ ಎಲ್ಲಿಯೂ ಅದನ್ನು ನೆಲಕ್ಕೆ ಮುಟ್ಟಿಸದೇ ರುದ್ರಮಂತ್ರವನ್ನು ಪಠಿಸುತ್ತಾ ಮನೆಗೆ ತರಬೇಕು. ಹಾಗೆ ಬರುವಾಗ ಮಾತ್ರ ಎಲ್ಲಿಯೂ ಹಿಂತಿರುಗಿ ನೋಡಬಾರದು ಏಕೆಂದರೆ ಕೈಲಿರುವ ಯಜ್ಞಾಹುತಿಯ ಶೇಷವನ್ನನುಸರಿಸಿಕೊಂಡು ಯಜ್ಞದೇವತೆ (ಕರ್ಮದೇವತೆ) ಮಹಾ ಕಾಲಭೈರವಿಯು ಹಿಂದೆಯೇ ಬರುವುದರಿಂದ ಸಾಧಕನು ಹಿಂತಿರುಗಿ ನೋಡಿದರೆ ದೇವಿ ಕುಪಿತಳಾಗಿ ಅವನನ್ನಲ್ಲಿಯೇ ಮೆಟ್ಟಿ ತುಳಿಯುವಳು. ಆದಕಾರಣ ಸಾಧಕನು ರುದ್ರಮಂತ್ರದ ಕವಚದಲ್ಲಿ ರಕ್ಷಣೆ ಹೊಂದಿಕೊಂಡು ಬಂದು ಕೈಯಲ್ಲಿರುವ ಗಂಟನ್ನು ಮನೆಯ ಮಾಡಿನ ಮಧ್ಯಕ್ಕೆ ತೂಗು ಹಾಕಬೇಕು. ಆಗ ಕರ್ಮ ದೇವತೆಯು ಸದಾಕಾಲದಲ್ಲಿಯೂ ಸಾಧಕನ ವಶವಾಗಿಯೇ ಉಳಿಯುವಳು.

# ಮಂತ್ರಗಳು

## ಮಾರಣ ಸಿದ್ಧಿ ಮಂತ್ರ

ಓಂ ನಮೋ ಸಂಹಾರ ಶೂಲಾಯ ಶತ್ರುವರ್ಗೋಭಿಷಣಂಕುರು.

ವಿಧಿಪೂರ್ವಕವಾಗಿ ಈ ಮಂತ್ರವನ್ನು ಐದುಸಾವಿರ ಬಾರಿ ಜಪಿಸಿದಲ್ಲಿ ಸಿದ್ಧಿ ದೊರೆಯುವುದು. ಯಾವುದಾದರೂ ಪ್ರಯೋಗ ಕಾಲದಲ್ಲಿ ಅಭಿಮಂತ್ರಿಸುವಾಗ ನೂರೈದು ಬಾರಿ ಜಪಿಸಿದಲ್ಲಿ ಕಾರ್ಯ ಸಿದ್ಧಿಯಾಗುವುದು.

## ಶತ್ರು ಮಾರಣ ಮಂತ್ರ

ಓಂ ನಮೋ ಶಕ್ತಿರೂಪೇ ಸಂಹಾರಿಣೀ
ಶತ್ರು ಭಸ್ಮೀ ಭಸ್ಮತಾಂ ಕುರು.

ಯಾವ ವ್ಯಕ್ತಿಯ ಮೇಲೆ ನೀವು ಮಾರಣ ಪ್ರಯೋಗ ಮಾಡಬೇಕಾಗಿದೆಯೋ ಆ ವ್ಯಕ್ತಿಯ ಹೆಸರನ್ನು ವಿಳ್ಯದೆಲೆಯ ಮೇಲೆ ನಿಮ್ಮ ಬಲಗೈ ಕಿರುಬೆರಳಿನ ರಕ್ತದಿಂದ ಬರೆಯಬೇಕು. ನಂತರ ಮೇಲಿನ ಮಂತ್ರವನ್ನು ನೂರ

ಹನ್ನೊಂದು ಬಾರಿ ಪಠಿಸಿ ಆ ಎಲೆಯನ್ನು ಬೆಂಕಿಗೆ ಹಾಕಬೇಕು. ಆಗ ನಿಮ್ಮ ಶತ್ರುವು ನಾಶವಾಗಿ ಜಯ ಸಿದ್ಧಿಯಾಗುವುದು.

## ಪ್ರಯೋಗಗಳು

### ಶತ್ರು ಮಾರಣ ಮಂತ್ರ

ಚಿತಾ ಭಸ್ಮ ಹಾಗೂ ನಿಮ್ಮ ಶತ್ರುವಿನ ಬಲಗಾಲಿನ ಧೂಳಿ ಇನೆರಡನೂ ತಂದು ಒಂದುಗೂಡಿಸಿ ಮಾರಣ ಪ್ರಯೋಗ ಮಂತ್ರದಿಂದ ಐವತ್ತೆಂಟು ಬಾರ್ಿ ಅಭಿಮಂತ್ರಿಸಿ ರವಿವಾರದಂದ. ಯಾರ ತಲೆಯ ಮೇಲೆ ಅದನ್ನು ಹಾಕುವಿರೋ ಅವರು ಖಂಡಿತವಾಗಿಯೂ ಮರಣವನ್ನಪ್ಪುವರು.

ರವಿವಾರ ದಿನದಂದು ಆರಿದ್ರಾ ನಕ್ಷತ್ರ ಬರುವ ಸಮಯ ಸಾಧಿಸಿ ಆದಿನ ಮಧ್ಯರಾತ್ರಿಯಲ್ಲಿ ಸ್ಮಶಾನಕ್ಕೆ ಹೋಗಿ ಚಿತಾಗ್ನಿಯಲ್ಲಿ ಸುಟ್ಟುರಿದು ಹೋದ ಮಸಿಕೆಂಡವನಾಯ್ದು ತಂದು ಮಾರಣ ಮಂತ್ರದಿಂದ ಅದನ್ನು ಅಭಿಮಂತ್ರಿಸಿ ನೀವು ಯಾವ ಶತ್ರುವಿನ ಮನೆಯಂಗಳದ ಈಶಾನ್ಯ ಮೂಲೆಗೆ ಅದನ್ನು ಹೂತಿಟ್ಟು ಬರಬೇಕು. ಆಗ ಆ ಶತ್ರು ಮೃತ್ಯುವಶನಾಗುವುದು ಖಂಡಿತ.

ಕಲ್ಲುನಾರು ಮತ್ತು ತೆಂಗಿನಬೇರು ಇನೆರಡನ್ನೂ ತಂದು ಕೋಣನ ಮೂತ್ರದಲ್ಲಿ ತೆಯಿದು ಗಂಧವನ್ನು ತಯಾರಿಸಿ ಅದನ್ನು ನೀವು ಯಾರ ಹಣೆಗೆ ಅವರಿಗರಿವಿಲ್ಲದಂತೆಯೇ ಹಚ್ಚುವಿರೋ ಅವರು ನಿಶ್ಚಯವಾಗಿಯೂ ಸಾವನ್ನಪ್ಪುವರು.

ಉತ್ತರಾ ನಕ್ಷತ್ರದಿನದಂದು ಒಂದು ಹಿಡಿ ಬೇವಿನ ಸೊಪ್ಪನ್ನು ತಂದು ಒಂದು ಗಡಿಗೆಯೊಳಗೆ ಹಾಕಿ ನೀರು ತುಂಬಬೇಕು. ನಂತರ ಅದನ್ನು ಅಭಿಮಂತ್ರಿಸಿ ಸ್ಮಶಾನದಲ್ಲಿ ಇಟ್ಟು ಬರಬೇಕು. ಗಡಿಗೆಯೊಳಗಿನ ಸೊಪ್ಪು ಕೊಳೆದಂತೆಲ್ಲಾ ನಿಮ್ಮ ಶತ್ರುವೂ ಕೂಡಾ ನಾನಾವಿಧ ರೋಗರುಜಿನಾದಿಗಳಿಗೆ ಒಳಪಟ್ಟು ಕೊಳೆಯಲಾರಂಭಿಸಿ ಕೊನೆಗೆ ಮೃತ್ಯುವಶನಾಗುವನು. ಇದು ಅಂತ್ಯಂತ ಖಾತ್ರಿ ಎಂದು ತಿಳಿಯಿರಿ.

### ಅಶ್ವಮಾರಣ ಪ್ರಯೋಗ

ತಾವರೆ ದಂಟನ್ನು ತಂದು ಚೆನ್ನಾಗಿ ಜಜ್ಜಿ ರಸ ತೆಗೆಯಬೇಕು. ನಂತರ ಅದಕ್ಕೆ ಲಿಂಬೆಹಣ್ಣಿನ ರಸವನ್ನು ಕೂಡಿಸಿ ಅದನ್ನು ಅಭಿಮಂತ್ರಿಸಿ ಕುದುರೆಗಳ ಮೇಲೆ ಪ್ರೋಕ್ಷಿಸಿದರೆ ಅವು ಕೂಡಲೇ ಸಾಯುವವು.

# ಇಂದ್ರಜಾಲ ಮಹೇಂದ್ರಜಾಲ ವಿದ್ಯೆಯು

ರಾತ್ರಿ ಮನೆಯಲ್ಲಿ ಹಾವು ಕಾಣುವಂತೆ ಮಾಡುವದೂ ಮಂಗಳವಾರ ದಿವಸ ಹತ್ತಿಯ ಬೀಜವನ್ನು ತಂದು ಆ ಬೀಜವನ್ನು ಸತ್ತು ಬಿದ್ದ ಸರ್ಪಿನ ಬಾಯಿಯಲ್ಲಿ ಹಾಕಿ ಮರುದಿವಸ ಆ ಬೀಜವನ್ನು ಅದರ ಬಾಯಿಂದ ಹೊರಗೆ ತೆಗೆದು ಮತ್ತೊಂದು ದಿವಸ ಆ ಬೀಜವನ್ನು ಭೂಮಿಯುಲ್ಲಿ ಒಂದು ಮಡಿಯನ್ನು ಮಾಡಿ ನೀರು ಹಾಕಿ ಚೆನ್ನಾಗಿ ಆ ಭೂಮಿಯನ್ನು ತೋಯಿಸಿ ಅದರಲ್ಲಿ ಸದರಿ ಸರ್ಪಿನ ಬಾಯೊಳಗಿಂದ ತೆಗೆದುಕೊಂಡ ಆ ಹತ್ತಿಯ ಬೀಜವನ್ನು ಆ ತಯಾರಿಸಿದ ಮಡಿಯಲ್ಲಿ ಊರಬೇಕು. ದಿನಾಲೂ ಅದಕ್ಕೆ ತಕ್ಕಷ್ಟು ನೀರನ್ನು ಹಾಕುತ್ತಿರಬೇಕು. ಅವು ಮೊಳೆತು ಸಸಿಯಾಗಿ ದೊಡ್ಡಗಿಡವಾದ ಮೇಲೆ ಅದರೊಳಗೆ ತಯಾರಾದ ಹತ್ತಿಯನ್ನು ತಕ್ಕೊಂಡು ಬತ್ತಿಯನ್ನು ಮಾಡಿ ರಾತ್ರಿ ಸಮಯದಲ್ಲಿ ಒಂದು ಪಣತಿಯನ್ನು ತಕ್ಕೊಂಡು ಅದರಲ್ಲಿ ಎಣ್ಣಿಯನ್ನು ಹಾಕಿ ಅದರಲ್ಲಿ ಸದರಿ ಬತ್ತಿಯನ್ನು ಹಾಕಿ ದೀಪವನ್ನು ಹಚ್ಚಬೇಕು. ಈ ರೀತಿಯಿಂದ ದೀಪವನ್ನು ಹಚ್ಚುವದರಿಂದ ಆ ದೀಪದ ಬೆಳಕು ಎಲ್ಲಿಯ ವರೆಗೆ ಬೀಳುವದೋ ಅಲ್ಲಿಯ ತನಕ ಕೇವಲ ಸರ್ಪಗಳೇ ಕಾಣಿಸಿಕೊಳ್ಳುತ್ತವೆ. ಆ ಹಚ್ಚಿದ ದೀಪವನ್ನು ಶಾಂತಿ ಮಾಡಿದಲ್ಲಿ ಸರ್ಪಾಗಿ ಕಾಣುವದು ತಕ್ಷಣವಾಗಿ ನಿಂತು ಬಿಡುತ್ತದೆ.

## ಲಿಂಬಿ ಹಣ್ಣನ್ನು ಓಡಾಡಿಸುವದು

ಒಂದು ಲಿಂಬಿ ಹಣ್ಣನ್ನು ತೆಗೆದುಕೊಂಡು ಬಂದು ಅದಕ್ಕೆ ತೂತು ಮಾಡಿ ಅದರಲ್ಲಿ ಪಾರಜವನ್ನು ತುಂಬಿ ಬಾಯಿ ಬಂದು ಮಾಡಬೇಕು. ಆ ಲಿಂಬಿ ಹಣ್ಣನ್ನು ಬೆಂಕಿಯ ಮೇಲೆ ಇರಿಸಲು ಸ್ವಲ್ಪ ಬಿಸಿಯಾದ ಕೂಡಲೇ ಓಡಾಡಲಾರಂಭಿಸುವದು.

## ಮನೆಯಲ್ಲಿ ಚೇಳು ಕಾಣುವಂತೆ ಮಾಡುವದು

ಹತ್ತಿಯ ಬೀಜವನ್ನು ರವಿವಾರ ದಿವಸ ತಂದು ಸತ್ತ ಚೇಳಿನ ಬಾಯಲ್ಲಿ ಆ ಬೀಜಗಳನ್ನು ಹಾಕಿ ಮರುದಿವಸ ಪುನಃ ಆ ಬೀಜಗಳನ್ನು ತೆಗೆದು ಆ ಬೀಜಗಳನ್ನು ಭೂಮಿಯಲ್ಲಿ ಒಂದು ಮಡಿಯನ್ನು ಮಾಡಿ ಅದಕ್ಕೆ ನೀರು ಹಾಕಿ ಚೆನ್ನಾಗಿ ತೋಯಿಸಿ ಅದರಲ್ಲಿ ಸದರಿ ಆ ಹತ್ತಿಯ ಬೀಜಗಳನ್ನು ಊರಬೇಕು. ಅದಕ್ಕೆ ದಿನಾಲೂ ನೀರನ್ನು ಹಾಕಬೇಕು. ಅದರಿಂದ ಬಂದ ಹತ್ತಿಯಿಂದ ಬತ್ತಿಯನ್ನು ಮಾಡಿ ಎಣ್ಣೆಯಿಂದ ತುಂಬಿದ ಪಣತೆಯಲ್ಲಿ ಆ ಬತ್ತಿಗಳನ್ನು ಹಾಕಿ ರಾತ್ರಿ ದೀಪವನ್ನು ಹಚ್ಚಲು ಆ ಬೆಳಕು ಎಲ್ಲಿಯ ವರೆಗೆ ಬೀಳುವದೋ ಅಲ್ಲಿಯವರೆಗೆ ಮನೆಯಲ್ಲಿ ಎಲ್ಲಿ ನೋಡಿದಲ್ಲಿ ಚೇಳುಗಳೇ ಕಾಣಿಸಿಕೊಳ್ಳುತ್ತವೆ. ಇದನ್ನು ನೋಡಿದವರೆಲ್ಲರಿಗೂ ಭಯವಾಗುತ್ತದೆ. ಮುಂದೆ ಆ ದೀಪವನ್ನು ಶಾಂತಗೊಳಿಸಿದಲ್ಲಿ ಎಲ್ಲವೂ ಮೊದಲಿನಂತೆ ಕಾಣುವದು.

## ಕೋಳಿ ತತ್ತಿಯನ್ನು ಮೇಲಕ್ಕೆ ಹಾರಿಸುವದು

ಒಂದು ಕೋಳಿ ತತ್ತಿಯನ್ನು ತಂದು ಅದರೊಳಗಿನ ಎಲ್ಲ ಹೊಲಸನ್ನು ತೆಗೆದು ಅದರಲ್ಲಿಯ ಹೊಲಸನ್ನು ತೆಗೆಯುವಾಗ ಸೂಜಿಯಿಂದ ಬಹಳ ಚಿಕ್ಕದಾದ ತೂತುಮಾಡಿ ಅದರೊಳಗಿನ ಹೊಲಸು ತೆಗೆಯಬೇಕು. ಆ ಮೇಲೆ ಆ ತತ್ತಿಯನ್ನು ಚೆನ್ನಾಗಿ ಬಿಸಿಲಿನಲ್ಲಿ ಒಣಗಿಸಿ ಅದರಲ್ಲಿ ಮೊದಲಿದ್ದ ಆ ಸಣ್ಣ ತೂತಿನೊಳಗಿಂದ ಪಾರಜವನ್ನು ಆ ತತ್ತಿಯಲ್ಲಿ ಒಳಗೆ ಹಾಕಬೇಕು. ನಂತರ ಸೂಕ್ಷ್ಮ ರೀತಿಯಿಂದ ಆ ತೂತನ್ನು ಚನ್ನಾಗಿ ತತ್ತಿಯ ಬಣ್ಣದಂಥ ಹಾಳಿಯಿಂದ ಭದ್ರವಾಗಿ ಅಂಟಿಸಿ ಮುಚ್ಚಬೇಕು. ಮುಂದೆ ಆ ತತ್ತಿ ತನ್ನಷ್ಟಕ್ಕೆ ತಾನೇ ಕೈ ಬಿಟ್ಟೊಡನೆಯೇ ಮೇಲಕ್ಕೆ ಹಾರುವದು.

## ಮತ್ತೊಂದು ಪ್ರಕಾರ

ಒಂದು ಕೋಳಿಯ ತತ್ತಿಯನ್ನು ತಕ್ಕೊಂಡು ಅದರೊಳಗಿನ ಎಲ್ಲ ಹೊಲಸನ್ನು ತೆಗೆದು ಸ್ವಚ್ಛ ಮಾಡಬೇಕಾದರೆ ಮೇಲೆ ಹೇಳಿದ ಪ್ರಕಾರ

ಸೂಜಿಯಿಂದ ಒಂದು ಸಣ್ಣ ತೂತಿನಿಂದ ತೆಗೆದು ಅದನ್ನು ಬಿಸಿಲಿನಲ್ಲಿ ಒಣಗಿಸಿ ಅದರೊಳಗೆ ಒಂದು ಗುಂಗಿ ಹುಳವನ್ನು ಹಾಕಿ ಬಾಯಿ ಬಂದು ಮಾಡಬೇಕು. ಅದೇ ಬಣ್ಣದ ಕಾಗದವನ್ನು ಹಚ್ಚಿ ಗುರ್ತು ಸಿಗದಂತೆ ಮಾಡಬೇಕು. ಆ ಗುಂಗಿ ಹುಳದಿಂದ ತುಂಬಿದ ಆ ಕೋಳಿ ತತ್ತಿಯನ್ನು ಸ್ವಲ್ಪ ಅಳಗಾಡಿಸಿ ಮೇಲಕ್ಕೆ ಒಗೆಯಲು ಅದು ಹಾರಾಡುವದು.

## ಬಾಯಿಯಲ್ಲಿ ಬೆಂಕಿಯನ್ನಿಟ್ಟುಕೊಳ್ಳುವದು

ನವಸಾಗರವನ್ನು ಬಾಯಲ್ಲಿ ಹಾಕಿಕೊಂಡು ಚನ್ನಾಗಿ ನುರಿಸಿ ನುಂಗದೇ ಹಾಗೆ ಇಟ್ಟುಕೊಂಡಿರಬೇಕು. ಆ ಮೇಲೆ ಬೆಂಕಿಯನ್ನು ಸಹಜವಾಗಿ ಬಾಯಲ್ಲಿ ಹಾಕಿಕೊಂಡರೆ ಬಾಯಿಯು ಸುಡುವದಿಲ್ಲ. ಇದೇ ರೀತಿಯಾಗಿ ಉರಿಯುವ ಬೆಂಕಿಯನ್ನು ಸಹ ಬಾಯಿಂದ ಹಿಡಿಯಲು ಬರುವದು.

## ಭೂತ ವಶೀಕರಣ ಮಂತ್ರ

ಓಂ ಶ್ರೀ ವಹಂ ವಹಂ ಭೂ ಭೂತೇಶ್ವರಿ ಮಮ ವಶ್ಯ ಕುರು ಕುರು ಸ್ವಹಾ ಈ ಪ್ರಕಾರವಾಗಿ ಪ್ರತಿದಿನ ೧೦೮ ಸಲ ತಪ್ಪದೇ ಮನಸ್ಸಿನಿಂದ ಪಠಿಸಬೇಕು. ಈ ರೀತಿಯಾಗಿ ಮೂರು ದಿವಸಗಳ ವರೆಗೆ ಪಠಿಸಿದಲ್ಲಿ ಭೂತವು ಪ್ರತ್ಯಕ್ಷವಾಗಿ ನೀವು ಬೇಡಿದ ವರವನ್ನು ಅದು ದಯಪಾಲಿಸಿ ಕೊಡುತ್ತದೆ. ಆದರೆ ಅದು ಪ್ರತ್ಯಕ್ಷವಾಗುವಾಗುವಾಗ ಭಯವಾಗುವದು ಸಹಜ. ಆಗ ನೀವು ನಿಶ್ಚಯಕ್ಕೂ ತಿಲಮಾತ್ರ ಅಧೈರ್ಯಪಡಬಾರದು. ನೀವು ಧೈರ್ಯವಾಗಿದ್ದು ನಿಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬಹುದು.

ಈ ಮೇಲಿನ ಮಂತ್ರವನ್ನು ಮಧ್ಯರಾತ್ರಿ ಸ್ನಾನವನ್ನು ತೀರಿಸಿಕೊಂಡು ಆಲದ ಮರದ ಕೆಳಗೆ ಕುಳಿತು ಏಕಚಿತ್ತದಿಂದ ಬಿಟ್ಟೂ ಬಿಡದೇ ಪಠಿಸಬೇಕು. ನೀವು ಈ ಮಂತ್ರವನ್ನು ಪಠಿಸುವ ಸಮಯದಲ್ಲಿ ನಿಮ್ಮ ಹತ್ತರ ಬೇರೆ ಯಾರೂ ಇರಕೂಡದು. ನಿಮಗೆ ಧೈರ್ಯವನ್ನು ಕೊಡುವದಕ್ಕಾಗಿ ನಿಮ್ಮ

ಪೈಕಿ ಯಾರನ್ನಾದರೂ ಒಬ್ಬರನ್ನು ಅಲ್ಲಿ ಮರಿಗೆ ದೂರದಲ್ಲಿ ನಿಲ್ಲಿಸಿಕೊಂಡರೆ ನಿಮ್ಮ ಕಾರ್ಯವು ಸಾಧಿಸಲಾರದು.

## ಅರಿವೆಯು ಸುಡದಂತೆ ಮಾಡುವದು

ಒಂದು ಪಾತ್ರೆಯಲ್ಲಿ ಸ್ಪಿರಿಟನ್ನು ಹಾಕಿ ಅದರಲ್ಲಿ ಒಂದು ತುಕಡಿ ಅರಿವೆಯನ್ನು ತಕ್ಕೊಂಡು ಆ ಪಾತ್ರೆಯೊಳಗೆ ಹಾಕಿದ ಸ್ಪಿರಿಟಿನಲ್ಲಿ ಅದನ್ನು ಸಂಪೂರ್ಣ ನೆನೆಯಿಸಿ ಎಲ್ಲವೂ ತೊಯಿದ ನಂತರ ತಾವೂ ಜಾದೂ ಜೂಜಾಟವನ್ನು ಆಡುವ ಕಾಲದಲ್ಲಿ ಅರಿವೆಯನ್ನು ಎಲ್ಲರಿಗೂ ತೋರಿಸಿ ಅದಕ್ಕೆ ಉರಿಯನ್ನು ಹಚ್ಚಿದರೆ ಅದು ಉರಿಯತೊಡಗುವದು. ಅರಿವೆಯು ಸುಡುವದಿಲ್ಲ. ಆಗಿಂದಾಗಲೇ ಆ ಹಚ್ಚಿದ ಸ್ಪಿರಿಟು ಎಲ್ಲವೂ ಸುಡುವದರೊಳಗಾಗಿ ಆ ಉರಿಯನ್ನು ಲಕ್ಷಗೊಟ್ಟು ಆರಿಸಬೇಕು.

## ಮತ್ತೊಂದು ಪ್ರಕಾರ

ದೇಶಿ ಕರ್ಪುರವನ್ನು ತಕ್ಕೊಂಡು ಅದನ್ನು ಚನ್ನಾಗಿ ಸಣ್ಣಾಗುವಂತೆ ಅರೆದು ಪುಡಿಯನ್ನು ತಯಾರ ಮಾಡಬೇಕು. ಅದು ತೀವ್ರ ಸಣ್ಣಾಗುವದಿಲ್ಲ. ಜಿನುಗಾಗಿ ಮಾಡಿಡಬೇಕು. ಆ ಮೇಲೆ ಒಂದು ಪಾತ್ರೆಯನ್ನು ತಕ್ಕೊಂಡು ಅದರಲ್ಲಿ ತಕ್ಕಷ್ಟು ಶೆರೆಯನ್ನು ಹಾಕಿ ಅದರಲ್ಲಿ ಆ ಸದರಿ ಕರ್ಪುರದ ಪುಡಿಯನ್ನು ಹಾಕಿ ಚನ್ನಾಗಿ ಸಮರಸವಾಗುವಂತೆ ಒಂದು ಕಟ್ಟಿಗೆಯಿಂದ ಕೂಡಿಸಬೇಕು. ಆ ಮಿಶ್ರಣದಿಂದ ತಯಾರಾದ ಶೆರೆಯಲ್ಲಿ ಒಂದು ಅರಿವೆಯ ತುಕಡಿಯನ್ನು ತಕ್ಕೊಂಡು ಅದರಲ್ಲಿ ಎದ್ದಿ ಚನ್ನಾಗಿ ತೋಯಿಸಿ ಇಟ್ಟುಕೊಳ್ಳಬೇಕು. ತಾವು ಜೂಜಾಟವನ್ನು ಆಡುವ ಕಾಲಕ್ಕೆ ಆ ಶೆರೆಯಿಂದ ತೋಯಿಸಿಟ್ಟಿರುವ ಅರಿವೆಯನ್ನು ಎಲ್ಲರಿಗೂ ತೋರಿಸಿ ನೆಲದ ಮೇಲೆ ಹಾಸಿ ಅದಕ್ಕೆ ಉರಿಯನ್ನು ಹಚ್ಚಲು ಉರಿಯುವದು. ಅದಕ್ಕೆ ಹಚ್ಚಿರುವ ಕರ್ಪುರದ ಬೆವರು ತೀರುವದರೊಳಗಾಗಿ ಆ ಉರಿಯನ್ನು ಆರಿಸಬೇಕು. ಮರೆಯಬಾರದು.

## ಟೆಂಗಿನಕಾಯಿ ತಾನೇ ಒಡೆಯುವಂತೆ ಮಾಡುವದು

ಕರಡೆಯ ತಲೆಯ ಬುರಡಿಯನ್ನು ತಂದು ಅದನ್ನು ಸಾಣಿಯ ಕಲ್ಲಿನ ಮೇಲೆ ಗಂಧವನ್ನು ತೇಯಿದು ಇಟ್ಟುಕೊಂಡು ಆ ಗಂಧವನ್ನು ಟೆಂಗಿನಕಾಯಿಗಳಿಗೆ ಲೇಪಿಸಿದರೆ ಆ ಟೆಂಗಿನಕಾಯಿಗಳು ತಮ್ಮಷ್ಟಕ್ಕೆ ತಾವೇ ಕೆಲ ಹೊತ್ತಿನಲ್ಲಿ ಪಟ್ - ಪಟ್ - ಒಡೆದು ಸಿಡಿದು ಬಿಡುವವು.

## ಗೋಡೆಗೆ ಉರಿ ಹಚ್ಚುವದು

ಶರಾಬನ್ನು ಚಿಮಣಿ ಎಣ್ಣೆಯನ್ನು ಕೂಡಿಸಿ ಮಿಶ್ರ ಮಾಡಿ ಆ ಎಣ್ಣೆಯನ್ನು ಮನೆಯ ಹೊರಗಿನ ಗೋಡೆಗೆ ಚನ್ನಾಗಿ ಉಗ್ಗಿ ಜಾದೂ ತೋರಿಸುವ ಕಾಲಕ್ಕೆ ದೀವಿಗೆಯ ಕಡ್ಡಿಯನ್ನು ಕೆರೆದು ಆ ಗೋಡೆಗೆ ಹಿಡಿದರೆ ಉರಿ ಹತ್ತಿ ಉರಿಯಲಾರಂಭಿಸುವದು. ಇದು ಆಶ್ಚರ್ಯ.

## ಕಾಗದವನ್ನು ಸುಡದಂತೆ ಮಾಡುವದು

ಪಟಕದ ನೀರಿನಲ್ಲಿ ಒಂದು ಹಾಳಿಯನ್ನು ತಕ್ಕೊಂಡು ಆ ಹಾಳಿಯನ್ನು ಆ ಪಟಕದ ನೀರಿನಲ್ಲಿ ಎದ್ದಿ ಒಣಗಿಸಬೇಕು. ಹೀಗೆ ಎರಡು ಮೂರು ಸಾರೆ ಎದ್ದಿ ಎದ್ದಿ ಒಣಗಿಸಬೇಕು. ಚನ್ನಾಗಿ ಒಣಗಿದ ಮೇಲೆ ಆ ಕಾಗದಕ್ಕೆ ಉರಿ ಹಚ್ಚಿದರೆ ಅದು ಸುಡುವದಿಲ್ಲ.

## ಮಳಿ ಬರುವಾಗ ದೀಪವನ್ನು ಉರಿಸುವದು

ಗಂಧಕ, ಸಮುದ್ರಪಾಳ ಇವೆರಡನ್ನು ಸರಿಯಾಗಿ ತೆಗೆದುಕೊಂಡು ಎರಡನ್ನೂ ಕೂಡಿಸಿ ಜಿನುಗಾಗಿ ಅರೆದು ಇಡಬೇಕು. ಅರಳೆಯನ್ನು ತಕ್ಕೊಂಡು ಚನ್ನಾಗಿ ಹಿಂಜಿ ಆ ಅರಳೆಯಲ್ಲಿ ಸದರಿ ತಯಾರಿಸಿದ ಪುಡಿಯನ್ನು ಇಟ್ಟು

ಬತ್ತಿಯನ್ನು ಮಾಡಬೇಕು. ಆ ಬತ್ತಿಯನ್ನು ಒಂದು ಪಣತೆಯಲ್ಲಿ ಹಾಕಿ ಅದಕ್ಕೆ ಉರಿ ಹಚ್ಚಿದರೆ ಅದು ಉರಿಯುವದು. ಮಳೆ ಸುರಿದರೂ – ಗಾಳಿ ಬೀಸಿದರೂ ಆ ದೀಪವು ಆರುವದಿಲ್ಲ. ಇದು ಜನರಿಗೆ ಅಗಾಧವಾಗಿ ಕಾಣುವದು.

## ಮಜ್ಜಿಗೆಯನ್ನು ಘಟ್ಟಿ ಮಾಡುವದು

ಬೆಳವಲ ಬೀಜವನ್ನು ಹಾಲಿನಲ್ಲಿ ಹಾಕಿ ಅರೆದು ಪುಡಿಯನ್ನು ಮಾಡಿ ಇಟ್ಟುಕೊಂಡು ಇರಬೇಕು. ಜಾದೂದ ಸಮಯದಲ್ಲಿ ಎಲ್ಲರಿಗೂ ಆ ಮಜ್ಜಿಗೆಯನ್ನು ತೋರಿಸಿ ತನ್ನ ಕೈ ಚಮತ್ಕಾರದಿಂದ ಸದರೀ ಪುಡಿಯನ್ನು ಮಜ್ಜಿಗೆಯಲ್ಲಿ ಹಾಕಿದರೆ ಆ ಮಜ್ಜಿಗೆಯು ಘಟ್ಟಿಯಾಗುವದು.

## ಹಸರು ಅಕ್ಷರ ಮೂಡಿಸುವಿಕೆ

ಸ್ಪಿರಿಟ್ ಮತ್ತು ಕೋವಾಲ್ಟ ಇದಕ್ಕೆ ಸಮವಾಗಿ ನೀರನ್ನು ಹಾಕಿ ಕಾಜಿನ ಬಾಟ್ಲಿಯಲ್ಲಿ ಇಟ್ಟು ಅದರಿಂದ ಕಾಗದದ ಮೇಲೆ ಅಕ್ಷರಗಳನ್ನು ಬರೆಯಬೇಕು. ಆ ಕಾಗದದಲ್ಲಿ ಬರೆದ ಅಕ್ಷರಗಳು ಕಾಣಿಸುವದಿಲ್ಲ. ಆ ಕಾಗದವನ್ನು ಬೆಂಕಿಯ ಜಳಕ್ಕೆ ಹಿಡಿದು ಬಿಸಿ ಮಾಡಿದರೆ ಆ ಕ್ಷಣಕ್ಕೆ ಆ ಬರೆದ ಅಕ್ಷರಗಳು ಹಸರು ಅಕ್ಷರಗಳಾಗುವವು.

## ಬಾಯಲ್ಲಿ ಉರಿ ತೋರಿಸುವದು

ಸಣ್ಣದೊಂದು ಬಿಲ್ವ ಪತ್ರಿಯ ಕಾಯಿಯನ್ನು ತಂದು ಅದಕ್ಕೆ ಎರಡೂ ಕಡೆಗೆ ತೂತು ಮಾಡಿ ಅದರೊಳಗಿನ ಯಾವತ್ತೂ ಹೊಲಸನ್ನು ತೆಗೆದು ಚನ್ನಾಗಿ ಸ್ವಚ್ಛ ಮಾಡಬೇಕು. ಎಕ್ಕೆಯ ಕಟ್ಟಿಗೆಯನ್ನು ಸುಟ್ಟು ಇದ್ದಲಿಯನ್ನು ಮಾಡಿ ಆ ಇದ್ದಲಿಯನ್ನು ಆ ಪತ್ರಿ ಕಾಯೊಳಗೆ ತುಂಬಿ ಅದರಲ್ಲಿ ಬೆಂಕಿಯನ್ನು ಹಾಕಿ ಅಳಗಾಡಿಸಿ ಊದಿ ತನ್ನ ಬಾಯೊಳಗೆ ಇಟ್ಟುಕೊಂಡು ಉಸುರು ಬಿಟ್ಟರೆ ಅದು ಉರಿಯುತ್ತದೆ. ಆಶ್ಚರ್ಯವು.

## ಅಂಗೈಯಲ್ಲಿ ಬೆಂಕಿ ಹಾಕಿಕೊಳ್ಳುವಿಕೆ

ದೊಡ್ಡದಾದ ಕಪ್ಪೆಯನ್ನು ತೆಗೆದುಕೊಂಡು ಬಂದು ಅದರ ಚರಬಿಯನ್ನು ತೆಗೆದುಕೊಂಡು ಇಟ್ಟುಕೊಂಡಿರಬೇಕು. ತಾವು ಜಾದೂ ಮಾಡುವ ಸಮಯದಲ್ಲಿ ಆ ಚರಬಿಯನ್ನು ಕೈಗೆ ಒಳಗೂ ಹೊರಗೂ ಎಲ್ಲಾ ಕಡೆಗೂ ಚೆನ್ನಾಗಿ ಎರಡೂ ಹಸ್ತಗಳಿಗೆ ಸವರಿಸಿಕೊಂಡು ಅಂಗೈಯಲ್ಲಿ ನಿಗಿ ನಿಗಿ ಎನಿಸುವ ಬೆಂಕಿಯ ಕೆಂಡವನ್ನು ಕೈಯಲ್ಲಿ ಹಾಕಿಸಿಕೊಂಡರೆ ಕೈಯು ಸುಡುವದಿಲ್ಲ. ಕುಳಿತವರೆಲ್ಲರಿಗೂ ಅಗಾಧವಾಗಿ ತೋರುವದು. ಈ ಕಾರ್ಯವನ್ನು ಮೊದಲು ಮನೆಯಲ್ಲಿ ಕೆಲವು ಸಾರೆ ಪ್ರಯೋಗ ಮಾಡಿಕೊಂಡು ನಂತರ ತಮಗೆ ಸಾಧ್ಯವಾದ ಮೇಲೆ ಎರಡನೇ ಕಡೆಗೆ ಪ್ರಯೋಗ ಪ್ರಾರಂಭಿಸಬೇಕು.

## ಲಿಂಬಿ ಹುಳಿಯನ್ನು ಸವಿ ಮಾಡುವದು

ಲಿಂಬಿ ಹಣ್ಣಿಗೆ ಮೈತುಂಬ ತೂತುಗಳನ್ನು ಮಾಡಿ ಅದರೊಳಗೆ ಹುಣಚಿಯ ಕಟ್ಟಿಗೆಯನ್ನು ಸುಟ್ಟು ಬೂದಿಯನ್ನು ಮಾಡಿ ಆ ಬೂದಿಯನ್ನು ಆ ಲಿಂಬಿ ಹಣ್ಣಿನ ತೂತುಗಳಲ್ಲಿ ಅಲ್ಪ ಸ್ವಲ್ಪ ಹಾಕಬೇಕು. ಮತ್ತು ಆ ಬೂದಿಯನ್ನು ನೀರೊಳಗೆ ಹಾಕಿ ಕಲಿಸಿ ಆ ನೀರಿನಲ್ಲಿ ಆ ಲಿಂಬಿ ಹಣ್ಣನ್ನು ಹಾಕಿದರೆ ಕೆಲ ಹೊತ್ತಿನಲ್ಲಿ ಆ ಲಿಂಬಿ ಹಣ್ಣಿನ ಹುಳಿಯು ಹೋಗಿ ಸವಿಯಾಗುವದು

## ನೀರು ಹಾಲಾಗುವಂತೆ ಮಾಡುವದು

ಔಡಲವನ್ನು ಒಡೆದು ಮೇಲಿನ ಸಿಪ್ಪಿಯನ್ನು ತೆಗೆದು ಒಳಗಿನ ಬಿಳಿಯಾದ ತಿಳುಲನ್ನು ತೆಗೆದುಕೊಂಡು ಕಲ್ಲ ಮೇಲೆ ಹಾಕಿ ಸಣ್ಣಾಗುವಂತೆ ಅರೆದು ಸಣ್ಣಾದ ಮೇಲೆ ಅದರಲ್ಲಿ ನೀರು ಹಾಕಿ ಅರೆಯಬೇಕು. ಅದು ಗಂಧದ ಹಾಗೆ ಆಯಿತೆಂದರೆ ಆ ಗಂಧವನ್ನು ಒಂದು ತಾಮ್ರದ ಪಾತ್ರೆಯನ್ನು

ತಕ್ಕೊಂಡು ಸದರ ಗಂಧವನ್ನು ಆ ಪಾತ್ರೆಯ ಒಳಗೆ ಎಲ್ಲಾ ಸವರಬೇಕು. ಅದನ್ನು ಚನ್ನಾಗಿ ಒಣಗಿಸಬೇಕು. ಆ ಮೇಲೆ ಜಾದೂ ಆಟವನ್ನು ಮಾಡುವ ಕಾಲಕ್ಕೆ ಆ ಪಾತ್ರೆಯನ್ನು ತಂದು ಮುಂದರಿಸಿ ಎಲ್ಲರಿಗೂ ತೋರಿಸಿ ಅದ ರಲ್ಲಿ ನೀರನ್ನು ಹಾಕಲು ಆ ನೀರು ಹಾಲಿನೋಪಾದಿಯಲ್ಲಿ ಬೆಳ್ಳಗೆ ಕಾಣು ವದು

## ಲಿಂಬಿ ಹಣ್ಣಿನ ಕುಣಿದಾಟ

ಒಂದು ಲಿಂಬಿ ಹಣ್ಣನ್ನು ತಂದು ಆ ಹಣ್ಣಿಗೆ ಒಂದು ತೂತು ಮಾಡಿ ಅದರಲ್ಲಿ ಅರಿಷಣ ಪುಡಿ, ಪಾದರಸ ಇವೆರಡನ್ನು ಕೂಡಿಸಿ ಆ ಲಿಂಬಿ ಹಣ್ಣಿ ನಲ್ಲಿ ತುಂಬಿ ಅದೇ ಹಣ್ಣಿನಿಂದ ಅದರ ಬಾಯಿ ಮುಚ್ಚಿ ಬಂದು ಮಾಡಿ ಇಡಬೇಕು. ಜಾದು ಮಾಡುವ ಕಾಲಕ್ಕೆ ಆ ಲಿಂಬಿ ಹಣ್ಣನ್ನು ಬೆಂಕಿಯ ಮೇಲೆ ಇಡಬೇಕು. ಅದು ಸ್ವಲ್ಪ ಬಿಸಿಯಾಯಿತೆಂದರೆ ಕುಣಿದಾಡಲಾ ರಂಭಿಸುವದು. ಆಶ್ಚರ್ಯವೆನಿಸುವದು.

## ಆನೆಯನ್ನು ಮಾಡಿ ತೋರಿಸುವಿಕೆ

ಗೊಳಗೊಳಕಿಯ ಬೀಜ, ಮತ್ತು ಬಾವಂಜಿಯ ಬೀಜ ಇವೆರಡನ್ನೂ ಸಣ್ಣಾಗಿ ಅರೆದು ಕರೇ ಆಕಳ ಬೆಣ್ಣಿಯನ್ನೂ ಹಾಲನ್ನೂ ಸಮರಸವನ್ನಾಗಿ ಕಲಿಸಿ ಅದರಲ್ಲಿ ಆನೆಯ ಲದ್ದಿಯನ್ನು ಹಾಕಿ ಚನ್ನಾಗಿ ಕಲಿಸಿ ಎಮ್ಮಿಯ ಕರದ ಮೈಗೆ ತುಂಬ ಹಚ್ಚಲು ಅದು ಆನೆಯ ಹಾಗೆ ಕಾಣುವದು.

## ನೀರು ರಕ್ತವಾಗಿ ಕಾಣುವಂತೆ ಮಾಡುವದು

ಆದಿತ್ಯವಾರ ದಿವಸ ಅಮಾವಾಸಿಯಿದ್ದಾಗ ಕಕ್ಕೆಯ ಗಿಡದ ಕಾಯಿ ಯನ್ನು ತೆಗೆದುಕೊಂಡು ಬಂದು ನೀರು ಹಾಕಿ ಗಂಧವನ್ನು ತೆಯಿದು ಇಡ

ಬೇಕು. ಆ ಮೇಲೆ ಒಂದು ಕಾಜಿನ ಬಾಟ್ಲಿಯನ್ನು ಅದರಲ್ಲಿ ನೀರು ತುಂಬಿ ಆ ನೀರಿನಲ್ಲಿ ಸದರಿ ಗಂಧವನ್ನು ಹಾಕಿ ಮಿಶ್ರ ಮಾಡಲು ಆ ನೀರು ಕೆಂಪ ಗಾಗಿ ರಕ್ತದಂತೆ ಕಾಣಿಸುವದು.

## ಬೇವಿನ ಎಲೆಗಳನ್ನು ಚೇಳು ಮಾಡುವದು

ಆದಿತ್ಯವಾರ ದಿವಸ ಅಮವಾಸಿ ಬಂದಾಗ ಕರೇ ತಲೆಯ ಮೂರು ನಿುಡಿಚಿಗಳನ್ನು ಹಿಡಿದುಕೊಂಡು ಬಂದು ಹೊಸ ಗಡಿಗೆಯಲ್ಲಿ ಆ ಮಿಡಚಿ ಗಳನ್ನು ಹಾಕಿ ಮುಚ್ಚಳವನ್ನು ಮುಚ್ಚಿ ಬಂದ ಮಾಡಿ ಕುಳ್ಳ ತಾಳಿಯನ್ನು ಹಾಕಿ ಅದರಲ್ಲಿ ಆ ಗಡಿಗೆಯನ್ನು ಇಟ್ಟು ಬೆಂಕಿ ಹಚ್ಚಿ ಸುಡಬೇಕು. ಹಿಂದಿ ನಿಂದ ಆರಿದ ಮೇಲೆ ಕಡಿಗೆ ತೆಗೆದುಕೊಂಡು ಆ ಗಡಗಿಯೊಳಗಿನ ಮಿಡಚಿ ಗಳನ್ನು ತಕ್ಕೊಂಡು ಭಸ್ಮವನ್ನು ಮಾಡಬೇಕು. ಆ ಭಸ್ಮವನ್ನು ತನ್ನ ಅಂಗೈಗೆ ಹಚ್ಚಿಕೊಂಡು ಗುರುಧ್ಯಾನಯುಕ್ತನಾಗಿ ಬೇವಿನ ಎಲೆಗಳನ್ನು ತೆರೆದು ಒಗೆದರೆ ಅದರಲ್ಲಿ ಎಷ್ಟು ಎಲೆಗಳಿರುವವೋ ಅವೆಲ್ಲವೂ ಚೇಳುಗಳಾಗಿ ಹರಿದಾ ಡುವವು. ಈ ಕೃತಿಯನ್ನು ಮಾಡುವಾಗ ಧೈರ್ಯವಂತನಾಗಿ ಇರತಕ್ಕದ್ದು ಅಗದಿ ಆಶ್ಚರ್ಯಕರವಾದದ್ದು.

## ಹೂವುಗಳ ಬಣ್ಣ ಬೇರೆ ಮಾಡುವದು

ಕೆಂಪು ಕಣಗಿಲ ಮತ್ತು ದಾಸಾಳ ಮೊದಲಾದ ಎಲ್ಲ ಕೆಂಪು ಹೂವು ಗಳಿಗೆ ಬಣ್ಣ ಬದಲಾಯಿಸಬೇಕಾದರೆ ಆ ಕೆಂಪು ಹೂವುಗಳಿಗೆ ಗಂಧಕದ ಹೊಗೆಯನ್ನು ಹಾಕಲು ಆ ಹೊಗೆಗೆ ಅದರ ಕೆಂಪು ಬಣ್ಣವು ಹೋಗಿ ಬಿಳೀ ಬಣ್ಣದ ಕಣಗಿಲ ಮತ್ತು ಬಿಳೀ ದಾಸಾಳದ ಹೂವುಗಳಿಗೆ ನವಸಾಗರದ ಹೊಗೆಯನ್ನು ಕೊಟ್ಟರೆ ಆ ಬಿಳೀ ಕಣಗಿಲ ಮತ್ತು ದಾಸಾಳದ ಹೂವು ಗಳು ಕೆಂಪಗಾಗುವವು.

## ಗುಲಾಬಿ ಅಕ್ಷರ ಮಾಡುವದು

ಯವಾಕ್ಷರ, ಐಸಿಡ್ ಎಕ್ಸಾಯಿಡ್ ಆಪ್ ಕೋವಾಲ್ಟ ಇವುಗಳನ್ನು ಸರಿಯಾಗಿ ತೆಗೆದುಕೊಂಡು ಎಲ್ಲವನ್ನೂ ಕೂಡಿಸಿ ಇಟ್ಟುಕೊಂಡಿರಬೇಕು. ತಾವು ಜಾದೂ ಮಾಡಿ ತೋರಿಸುವ ಸಮಯದಲ್ಲಿ ಬಿಳಿ ಕಾಗದವನ್ನು ಎಲ್ಲರಿಗೂ ತೋರಿಸಿ ಆ ಕಾಗದದ ಮೇಲೆ ಐಸಿಡ್‌ದಿಂದ ಬರೆಯಬೇಕು. ಆವಾಗ ಆ ಕಾಗದದಲ್ಲಿ ಏನೂ ಕಾಣಿಸುವದಿಲ್ಲ. ಬೆಂಕಿಯ ಮೇಲೆ ಹಿಡಿದು ಜಳಪಡಿಸಲು ಗುಲಾಬಿ ಬಣ್ಣದ ಅಕ್ಷರಗಳು ಕಾಣಿಸುತ್ತವೆ.

## — ಟೆಂಗಿನಕಾಯಿಯ ಮೇಲೆ ನೀರು ಸಿಂಪಡಿಸಿದರೆ — ತುಣುಕು ತುಣುಕಾಗುವಂತೆ ಮಾಡುವದು.

ಬಲಿತ ಟೆಂಗಿನ ಕಾಯಿಗಳನ್ನು ತೆಗೆದುಕೊಂಡು ಬಂದು ಅದರ ಮೇಲಿನ ಎಲ್ಲ ಜುಬ್ಬರವನ್ನು ತೆಗೆದು ಸ್ವಚ್ಛ ಮಾಡಿ ಹೊಸ ಸುಣ್ಣವನ್ನು ಹಾಕಿ ಅದರಲ್ಲಿ ನಡು ಮಧ್ಯ ಟೆಂಗಿನಕಾಯಿಗಳನ್ನು ಚನ್ನಾಗಿ ಮುಚ್ಚುವಂತೆ ಆ ಸುಣ್ಣದ ಮಧ್ಯದಲ್ಲಿ ಹುಗಿದಿಡಬೇಕು. ಅವುಗಳನ್ನು ೫-೬ ದಿವಸಗಳವರೆಗೂ ಹಾಗೆಯೇ ಬಿಡಬೇಕು. ೫-೬ ದಿವಸಗಳ ಮೇಲೆ ಆ ಟೆಂಗಿನ ಕಾಯಿಗಳನ್ನು ನೀರು ಮುಟ್ಟದಂತಾಸ್ಥಳಗಳಲ್ಲಿ ಕಾದಿಟ್ಟುಕೊಳ್ಳಬೇಕು. ತಾವು ಜಾದೂ ಮಾಡಿ ತೋರಿಸುವ ಕಾಲದಲ್ಲಿ ಒಂದೊಂದೇ ಆ ಕಾಯಿಗಳನ್ನು ತೆಗೆದು ಕುಳಿತವರಿಗೆಲ್ಲರಿಗೂ ತೋರಿಸಿ ತಾನು ಕೈಯಲ್ಲಿ ನೀರು ತೆಗೆದುಕೊಂಡು ಮಂತ್ರಿಸುತ್ತಾನೋ ಏನೋ ಅನ್ನುವವರ ಹಾಗೆ ಆ ನೀರಿಗೆ ಊದಿ ಆ ಕಾಯಿಯ ಮೇಲೆ ಹಾಕಲು ಆ ಕಾಯಿ ಪಟ್ - ಪಟ್ ಎಂದು ಒಡೆದು ಬಿಡುವದು. ಇದರಂತೆ ಎಷ್ಟು ಕಾಯಿಗಳನ್ನು ಇಟ್ಟುಕೊಂಡಿರುವಿರೋ ಅವೆಲ್ಲವನ್ನು ಇದೇ ರೀತಿ ನೀರು ಸಿಂಬಡಿಸಿ ಒಡೆಯಬೇಕು. ಒಡೆಯುವದು. ಆಶ್ಚರ್ಯವು.

## ನೀರ ಮೇಲೆ ನಡೆಯುವದು.

. ನೀರ ಮೇಲೆ ನಡೆಯಬೇಕೆನ್ನುವವರು. ಮೊದಲು ಆ ಜಲದೇವತೆಗೆ ಜಲಸ್ತಂಭನ ಮಾಡಬೇಕೆಂದು ವಿನಯದಿಂದ ಬೇಡಿಕೊಳ್ಳಬೇಕು. ಆ ಮೇಲೆ ರವಿವಾರ ದಿವಸ ಪುಷ್ಯಾನಕ್ಷತ್ರವು ಬಂದಾಗ ಸಾಧಿಸಿಕೊಂಡು ಶುಚಿರ್ಭೂತನಾಗಿ ಅಡವಿಗೆ ಹೋಗಿ ಮತ್ತಿಯ ಗಿಡವನ್ನು ಪೂಜಿಸಿ ಕೈ ಮುಗಿದು ಜಲಸ್ತಂಭನಾಯನಮಃ ಎಂದು ನೆನೆದು ಆ ಗಿಡಕ್ಕೆ ಕೊಡ್ಲಿಯಿಂದ ಕಚ್ಚನ್ನು ಹಾಕಿ ಕಡೆದುಕೊಂಡು ಬಂದು ತುಂಡು ಮಾಡಿ ಕೆತ್ತಿ ತನ್ನ ಕಾಲಳತೆಯ ಆವಿಗೆಗಳನ್ನು ತಯಾರ ಮಾಡಿಸಿ ಆ ತಯಾರಾದ ಆವಿಗೆಗಳನ್ನು ಗುರುಧ್ಯಾನಯುಕ್ತನಾಗಿ ಪೂಜಿಸಿ ಜಲಸ್ತಂಭನಾಯನಮಃ ಎಂದು ನಮಸ್ಕರಿಸಿ ಕಾಲೊಳಗೆ ಹಾಕಿಕೊಂಡು ಜಲದೇವತೆಗೆ ನಮಸ್ಕರಿಸಿ ನೀರ ಮೇಲೆ ನಡೆಯಲು ಮುಳುಗುವದಿಲ್ಲ. ಇದನ್ನರಿತು ಜಲಸ್ತಂಭನವನ್ನು ಮಾಡಬೇಕು. ಮೊದಲು ಇದರ ಸಾಧನೆಯನ್ನು ಮಾಡಿಕೊಳ್ಳಬೇಕು. ಆ ನಂತರ ಕಾರ್ಯಾರಂಭವನ್ನು ಮಾಡಬೇಕು. ಏಕಾಏಕಿ ಕಾರ್ಯವನ್ನಾರಂಭಿಸಲಾಗದು ಮೊದಲು ಸಾಧ್ಯ ಮಾಡಿಕೊಂಡು ಆ ಮೇಲೆ ಆರಂಭಿಸಬೇಕು.

## ಕಾಗದದಲ್ಲಿ ಎಣ್ಣೆಯನ್ನು ಹಾಕಿ ಸಾಮಾನು ಕರಿಯುವದು

ನುಗ್ಗಿ ಗಿಡದ ತಪ್ಪಲವನ್ನು ದೇಟು ಸಹಿತವಾಗಿ ತಂದು ಅದನ್ನು ಕಲ್ಲ ಮೇಲೆ ಹಾಕಿ ಸಣ್ಣಾಗಿ ಅರೆದು ಅದನ್ನು ಒಂದು ಅರಿವೆಯಲ್ಲಿ ಹಾಕಿ ಹಿಂಡಿ ರಸವನ್ನು ತೆಗೆದುಕೊಂಡು ಇಟ್ಟುಕೊಳ್ಳಬೇಕು. ನಂತರ ಒಂದು ಜಿಗುಟಾದ ಕೃಷ ಕಾಗದವನ್ನು ತೆಗೆದುಕೊಂಡು ಬಂದು ಅದಕ್ಕೆ ಆ ಸದರಿ ರಸವನ್ನು ಚನ್ನಾಗಿ ಉಣಿಸಬೇಕು. ಅದೆಲ್ಲವೂ ರಸವನ್ನು ಉಂಡ ಮೇಲೆ ಆ ಕಾಗದವನ್ನು ಒಣಗಿಸಿ ಆ ಕಾಗದದ ಒಂದು ಡೊಣ್ಣೆಯನ್ನು ಮಾಡಿ ಆ ಡೊಣ್ಣೆಯಲ್ಲಿ ಕುಸುಬೆಯ ಎಣ್ಣೆಯನ್ನು ಹಾಕಿ ಬೆಂಕಿಯ ಮೇಲಿಟ್ಟು ಅದು ಕಾಯಿತೆಂದರೆ ಅದರಲ್ಲಿ ಏನಾದರೂ ತಮಗೆ ಬೇಕಾದ ಅವಲಕ್ಕಿ ಮೊದಲಾದ ಯಾವ ಜೀನಸುಗಳನ್ನಾದರೂ ಕರಿದುಕೊಳ್ಳಬೇಕು. ಸಾಧಾರಣ ಆ ಕಾಗದಕ್ಕೆ ಹಚ್ಚಿದ ರಸವು ಸುಟ್ಟು ಹೋಗುವದರೊಳಗಾಗಿ ತಮ್ಮ ಕಾರ್ಯವನ್ನು ಮಾಡಿಕೊಳ್ಳಬೇಕು

## ತಲೆಯ ಮೇಲೆ ಬೆಂಕಿಯನ್ನು ಕಾಣುವದು

ಹರತಾಳ ಮಣಶಿಲೆ ಇವೆರಡನ್ನು ಸಮನಾಗಿ ತಕ್ಕೊಂಡು ಅಂಕೋಲೆಯ ಎಣ್ಣೆಯಲ್ಲಿ ಕೂಡಿಸಿ ಮೇಣದಂತೆ ಮಾಡಿ ಅದರಲ್ಲಿ ಒಂದು ಅರಿವೆಯ ತುಂಡನ್ನು ತೆಗೆದುಕೊಂಡು ಆ ಅರಿವೆಗೆ ಸದರಿ ಮೇಣವನ್ನು ಚನ್ನಾಗಿ ಹಚ್ಚಿ ನೆನೆಯಿಸಬೇಕು. ಅದನ್ನು ರಾತ್ರಿ ಕಾಲದಲ್ಲಿ ಆ ಅರಿವೆಯನ್ನು ತಲೆಯ ಮೇಲೆ ಇಟ್ಟುಕೊಂಡರೆ ಆ ಅರಿವೆಯು ಉರಿಯುತ್ತಿರುವಂತೆ ಕಾಣಿಸುವದು.

## ಹೂವುಗಳನ್ನು ಬಹಳ ದಿವಸ ತಾಜಾ ಇರುವಂತೆ ಮಾಡುವದು

ಯಾವ ಹೂವುಗಳನ್ನಾದರೂ ಬಹು ದಿವಸಗಳ ವರೆಗೆ ಇರುವಂತೆ ಮಾಡಬೇಕಾದರೆ ಆ ಹೂವುಗಳನ್ನು ಉಪ್ಪಿನ ನೀರಿನಲ್ಲಿ ಚನ್ನಾಗಿ ತೋಯಿಸಿಟ್ಟರೆ ಆ ಹೂವುಗಳು ತೀವ್ರ ಬಾಡುವದಿಲ್ಲ. ಕೆಲವು ದಿವಸಗಳ ವರೆಗೆ ಆ ಹೂವುಗಳು ಉಪಯೋಗ ಮಾಡಿಕೊಳ್ಳಲಿಕ್ಕೆ ಬರುತ್ತವೆ. ಬಾಡುವದಿಲ್ಲ. ಯಾವದಾದರೊಂದು ಆಫೀಸಿನಲ್ಲಿ ಟೇಬಲ್ ಮೇಲೆ ಇರಿಸತಕ್ಕ ಕೆಲವು ಹೂವುಗಳ ಗೊಂಚಲಗಳನ್ನು ಇದೇ ಪ್ರಕಾರವಾಗಿ ಮಾಡಿ ಇಟ್ಟುಕೊಳ್ಳಬಹುದು.

## ದೀವಿಗೆಗಳ ಹೋರಾಟ

ಮಣ್ಣಿನ ಹೊಸ ಎರಡು ಪಣತಿಗಳನ್ನು ತೆಗೆದುಕೊಂಡು ಬಂದು ಅವೆರಡೂ ಪಣತೆಗಳಲ್ಲಿ ತಕ್ಕಷ್ಟು ಎಣ್ಣೆಯನ್ನು ಹಾಕಿ ಒಂದು ಪಣತೆಯಲ್ಲಿ ಹುಲಿಯ ಚರಬಿಯನ್ನು ಹಾಕಬೇಕು. ಮತ್ತೊಂದು ಪಣತೆಯಲ್ಲಿ ಆಡಿನ ಚರಬಿಯನ್ನು ಹಾಕಬೇಕು. ಸಬಕಾರದ ಎರಡು ಬತ್ತಿಗಳನ್ನು ಮಾಡಿ ಎರಡೂ ಪಣತೆಗಳಲ್ಲಿ ಹಾಕಿ ದೀಪವನ್ನು ಹಚ್ಚಬೇಕು. ಈ ಎರಡೂ ಪಣತೆಗಳನ್ನು ಎದುರು ಬದರಾಗಿಯಿಟ್ಟರೆ ಅವೆರಡೂ ಪಣತೆಗಳು ಒಂದಕ್ಕೊಂದು ಕಾದಾಡುವವು.

## ಅಕ್ಕಿಯು ಅನ್ನವಾಗದೆ ಇರೋಣ

ಅಕ್ಕಿಯು ಅನ್ನವಾಗದಂತೆ ಮಾಡಬೇಕಾದರೆ ಅದಕ್ಕೊಂದು ಉಪಾಯು ಉಂಟು. ಅದು ಏನೆಂದರೆ ಎಕ್ಕೆಯ ಗಿಡದ ಹಾಲನ್ನು ತಂದು ಅದರಲ್ಲಿ ಅಕ್ಕಿಯನ್ನು ನೆನೆಯಿಸಿ ಇಟ್ಟುಕೊಂಡರೆ ಆ ಅಕ್ಕಿಯನ್ನು ತಗೊಂಡು ಪಾತ್ರೆಯಲ್ಲಿ ಹಾಕಿ ನೀರು ಹಾಕಿ ಅನ್ನವನ್ನು ಮಾಡಲು ಎಷ್ಟು ಉರಿ ಹಚ್ಚಿ ಕುದಿಸಿದರೂ ಅದು ಕುದ್ದು ಅನ್ನವಾಗುವದಿಲ್ಲ. ಮೊದಲಿನಂತೆಯೇ ಅಕ್ಕಿಯು ಹಾಗೇ ಇರುವದು. ಕುದಿಯುವದಿಲ್ಲ. ಉರಿ ಹಚ್ಚಿ ಬೇಸರಿಯುವದು.

## ರಾತ್ರಿ ಹಗಲಿನಂತೆ ಕಾಣುವದು

ಕಾಶಿ ಗಿಡದ ಹೂವು, ಕಾಯಿ ಹಣ್ಣು, ತೊಪ್ಪಲ ಎಲ್ಲವನ್ನೂ ತೆಗೆದುಕೊಂಡು ಬಂದು ಅದನ್ನು ಸಣ್ಣಾಗಿ ಅರೆದು ಒಂದು ಅರಿವೆಯಲ್ಲಿ ಹಾಕಿ ಚನ್ನಾಗಿ ಹಿಂಡಿಕೊಂಡು ರಸವನ್ನು ತೆಗೆದುಕೊಳ್ಳಬೇಕು. ಆ ರಸದಲ್ಲಿ ಜೇನು ತುಪ್ಪವನ್ನು ಹಾಕಿ ಕಲಿಸಿ ಕಣ್ಣಿಗೆ ತಿಲಾಂಜನವನ್ನು ಹಚ್ಚಿಕೊಳ್ಳಲು ಅವನಿಗೆ ರಾತ್ರಿ ಕಾಲವು ಹಗಲಾಗಿ ಕಾಣುವದು.

## ಕೈಯಲ್ಲಿ ಬೆಂಕಿಯನ್ನು ಹಿಡಿಯುವದು

ದೇಶಿ ಕರ್ಪುರ ಮತ್ತು ನವಸಾಗರ ಇವೆರಡನ್ನೂ ಕೂಡಿಸಿ ನೀರು ಹಾಕಿ ಸಣ್ಣಾಗಿ ಅರೆದು ಗಂಧವನ್ನು ಮಾಡಿ ಎರಡೂ ಕೈಗಳಿಗೆ ಹಚ್ಚಿಕೊಂಡು ಚಕ್ಕಿ ಆರಿಸಿಕೊಳ್ಳಬೇಕು. ಆ ಗಂಧವು ಆರಿದ ಬಳಿಕ ಆ ಕೈಗಳಿಂದ ಬೆಂಕಿಯನ್ನು ಹಿಡಿದರೆ ಕೈ ಸುಡುವದಿಲ್ಲ.

## ಬಾಟ್ಲಿಯಲ್ಲಿ ಬೆಂಕಿ ಇರುವಂತೆ ತೋರಿಸುವದು

ಬಾಟ್ಲಿಯಲ್ಲಿ ಬೆಂಕಿ ಇರುವಂತೆ ಮಾಡಿ ತೋರಿಸಬೇಕಾದರೆ ಒಂದು ಬಾಟ್ಲಿಯನ್ನು ತೆಗೆದುಕೊಂಡು ಬಂದು ಆ ಬಾಟ್ಲಿಯನ್ನು ಸ್ವಚ್ಛವಾಗಿ

ನೀರಿನಿಂದ ತೊಳೆದು ಆ ಬಾಟ್ಲಿಯಲ್ಲಿ ಸ್ಪಿರಿಟು ಹಾಕಿ ಮತ್ತೆ ಅದರಲ್ಲಿ ಗಂಧ ಕವನ್ನು ಸಣ್ಣಾಗಿ ಪುಡಿ ಮಾಡಿ ಅದರಲ್ಲಿ ಹಾಕುವದು ಅದನ್ನು ಮಿಶ್ರಮಾಡಿ ಆ ಬಾಟ್ಲೆಯನ್ನು ಕತ್ತಲೆಯಲ್ಲಿ ಇಟ್ಟರೆ ಬೆಂಕಿಯನ್ನು ತುಂಬಿನ ಬಾಟ್ಲ ಯಂತೆ ಕಾಣಿಸಿಕೊಳ್ಳುವದು.

## ಉರಿಯುವ ವಸ್ತ್ರವನ್ನು ತಲೆಯಲ್ಲಿಡುವದು

ಮೊದಲು ಕುಸುಬೆಯ ಎಣ್ಣೆಯನ್ನು ತಲೆಗೆ ಚನ್ನಾಗಿ ತಿಕ್ಕಬೇಕು. ಆ ಮೇಲೆ ತಾಳರಸದ ರಸವನ್ನು ತಲೆತುಂಬ ಸವರಿಕೊಳ್ಳಬೇಕು. ಅದಾದ ಮೇಲೆ ಒಂದು ವಸ್ತ್ರವನ್ನು ತಕ್ಕೊಂಡು ಅದಕ್ಕೆ ಎಣ್ಣೆಯನ್ನು ಎದ್ದಿ ಬೆಂಕಿ ಯನ್ನು ಹಚ್ಚಬೇಕು. ಆ ಉರಿಯುವ ವಸ್ತ್ರವನ್ನು ತಲೆಯ ಮೇಲೆ ಇಟ್ಟುಕೊಂಡರೆ ಒಂದು ಕೂದಲು ಸಹ ಸುಡುವದಿಲ್ಲ. ತಲೆಗೆ ಉರಿ ತಾಕು ವದಿಲ್ಲ.

## ನೀರಲ್ಲಿ ದೀಪವನ್ನು ಉರಿಸುವದು

ನೀರಿನಲ್ಲಿ ದೀಪವನ್ನು ಉರಿಸಬೇಕಾದಲ್ಲಿ ಚೀನಿ ಕರ್ಪುರದ ವಡಿಗಳನ್ನು ತಂದು ಅದನ್ನು ಕಲ್ಲ ಮೇಲೆ ಹಾಕಿ ಚನ್ನಾಗಿ ಜಿಗುಟಾಗುವಂತೆ ಅರೆದು ಬತ್ತಿಯನ್ನು ಮಾಡಿ ಪಣತೆಯಲ್ಲಿ ನೀರು ಹಾಕಿ ಅದರಲ್ಲಿ ಆ ಕರ್ಪು ರದ ಬತ್ತಿಗಳನ್ನು ಹಾಕಿ ಅದಕ್ಕೆ ಉರಿಯನ್ನು ಹಚ್ಚಿದರೆ ಅದು ಉರಿಯ ತೊಡಗುವದು. ಆರುವದಿಲ್ಲ. ಇದರಂತೆಯೇ ಎಣ್ಣೆಯನ್ನು ಹಾಕಿದರಂತೂ ಸಂದೇಹವಿಲ್ಲದೆ ಉರಿಯುತ್ತದೆಂಬದನ್ನು ನೆನಪಿನಲ್ಲಿಟ್ಟುಕೊಳ್ಳತಕ್ಕದ್ದು. ಜಾದೂ ಸಮಯದಲ್ಲಿ ಉಪಯೋಗಿಸಬಹುದು.

## ರಕ್ತವನ್ನು ಸುರಿಸುವದು

ಕೈಯೊಳಗಿಂದ ರಕ್ತವು ಬೀಳುವಂತೆ ಮಾಡಬೇಕಾದರೆ ಮೊದಲು ಗೋಣಿಯ ಹಾಲನ್ನು ತನ್ನ ಎರಡೂ ಕೈಗಳಿಗೆ ಹಚ್ಚಿಕೊಂಡು ಆಮೇಲೆ

ಕರೇ ಏಳೀದೆಲೆಗೆ ಸ್ವಲ್ಪ ಹೊಸ ಸುಣ್ಣವನ್ನು ಚನ್ನಾಗಿ ಲೇಪನ ಮಾಡಿ ಆ ಎಲೆಗಳನ್ನು ಮುದ್ದಿ ಮಾಡಿ ಹಿಚುಕಿ ಹಿಚುಕಿ ಹಿಂಡಿದರೆ ಆ ಬೀಳುವ ರಸವು ರಕ್ತದಂತೆ ಕಾಣಿಸುವದು.

## ಎಲ್ಲರೂ ಕುರಿಯಹಾಗೆ ಕಾಣುವದು

ಎಲ್ಲರೂ ಕುರಿಯ ಹಾಗೆ ಕಾಣಬೇಕಾದರೆ ಮೊದಲು ಕುರಿಯ ತಲೆಯನ್ನು ತಂದು ಅದರಲ್ಲಿ ಮಣ್ಣನ್ನು ತುಂಬಿ ಅದರಲ್ಲಿ ನೀರು ಸಿಂಪಡಿಸಿ ದಾಳಿಂಬರ ಬೀಜವನ್ನು ಊರಬೇಕು. ಅದಕ್ಕೆ ಸರಿಯಾಗಿ ನೀರು ಹಾಕಿ ಬೆಳೆಸಬೇಕು. ಆ ಗಿಡವು ಬೆಳೆದು ದೊಡ್ಡದಾದ ಬಳಿಕ ಆ ಗಿಡದ ಹೂವುಗಳನ್ನು ಸರಗೊಳಿಸಿ ಮಾಲೆಯನ್ನು ಮಾಡಿಕೊಂಡು ಆ ಮಾಲೆಯನ್ನು ಯಾರು ಕೊರಳಲ್ಲಿ ಹಾಕಿಕೊಳ್ಳುವರೊ ಅವರಿಗೆ ಎಲ್ಲ ಜಗತ್ತು ಕುರಿಯ ಹಾಗೆ ಕಾಣುವದು.

## ಬರೆದ ಚಿತ್ರವು ಮಾಯವಾಡುವದು

ಸಿಂಧೂರ, ನವಸಾಗರ, ಬಳಿಗಾರ ಈ ಮೂರನ್ನು ಸರಿಯಾಗಿ ತಗೆದುಕೊಂಡು ಅದನ್ನು ಸಣ್ಣಾಗಿ ಪುಡಿಯನ್ನು ಮಾಡಿಯಿಟ್ಟುಕೊಳ್ಳಬೇಕು. ಈ ಪುಡಿಯನ್ನು ಕಾಗದದ ಮೇಲೆ ಬರೆದ ಚಿತ್ರದ ಮೇಲೆ ಈ ಪುಡಿಯನ್ನು ಹಾಕಿ ತಿಕ್ಕಿದರೆ ಆ ಬರೆದ ಚಿತ್ರವು ಮಾಯವಾಗುವದು ಅಳಿಕಿ ಹೋಗುವದು. ಬರೇ ಕಾಗದವೇ ಉಳಿಯುವದು.

## ನೀರಿನಿಂದ ದೀಪವನ್ನು ಉರಿಸುವದು

ನೀರಿನಿಂದ ದೀಪವನ್ನು ಉರಿಸಬೇಕಾದರೆ ದೇಶಿ ಕರ್ಪೂರ ಮತ್ತು ರಾಳ ಇವೆರಡನ್ನೂ ಸರಿಯಾಗಿ ತೆಗೆದುಕೊಂಡು ಅರೆದುಯಿಟ್ಟುಕೊಂಡು

ಮಾಜೂಫಲಗ ಚೂರ್ಣ ಮತ್ತು ಆಡಿನ ಚರಬಿ ಇವೆರಡನ್ನು ಮತ್ತು ಮೊದಲಿನ ಎರಡು ಜೀನಸುಗಳನ್ನು ಕೂಡಿಸಿ ಹಾಕಿಕೊಂಡು ಬತ್ತಿಯನ್ನು ಮಾಡಿ ಪಣತೆಯಲ್ಲಿ ಹಾಕಿ ಆದರಲ್ಲಿ ನೀರು ಹಾಕಿ ಉರಿಹಚ್ಚಿದರೂ ಉರಿಯುತ್ತದೆ.

## ಉಂಗರವನ್ನು ಕುಣಿದಾಡಿಸುವದು

ಉಂಗರವನ್ನು ಕುಣಿದಾಡಿಸಬೇಕಾದರೆ ಮೊದಲು ವಳಗೆ ಪೊಳ್ಳು ಯಿರುವಂತೆ ವಂದು ಉಂಗರವನ್ನು ಮಾಡಿಸಿಕೊಂಡು ಆ ಉಂಗರದ ಪೊಳ್ಳಿನಲ್ಲಿ ವಳಗೆ ನವಸಾಗರವನ್ನು ತುಂಬಬೇಕು ತಾವು ಜಾದೂ ಮಾಡುವ ಸಮಯದಲ್ಲಿ ಆ ಉಂಗರವನ್ನು .ಎಲ್ಲರಿಗೂ ತೋರಿಸಿ ಬೆಂಕಿಯ ಮೇಲೆ ಹಿಡಿದು ಬಿಸಿಮಾಡಲಾಗಿ ಆ ಉಂಗರವು ಕುಣಿದಾಡಲಾರಂಭಿಸುವದು ಅಗ್ನಿಯ ಬಲವು ಕಡಿಮೆಯಾಯಿತೆಂದರೆ ನಿಲ್ಲುವದು ಆಶ್ಚರ್ಯ.

## ಶರೀರದಲ್ಲಿ ಶಸ್ತ್ರವನ್ನು ಚುಚ್ಚಿಕೊಳ್ಳುವದು

ಮೈಯಲ್ಲಿ ಶಸ್ತ್ರಗಳನ್ನು ಚುಚ್ಚಿಕೊಳ್ಳಬೇಕಾದರೆ ಮೊದಲು ಶಸ್ತ್ರಕ್ಕೂ ಬಾಯಿಗೂ ರಕ್ತ ಮಂಡಲದ ತಪ್ಪಲದ ರಸವನ್ನು ಹಚ್ಚಬೇಕು. ಹಿಂದಿನಿಂದ ತುತ್ತೀವು, ಹುಣಸಿಹಣ್ಣು ಇವೆರಡನ್ನೂ ಶಸ್ತ್ರಕ್ಕೆ ಹಚ್ಚಿ ರಕ್ತ ಮಂಡಲದ ತೊಪ್ಪಲವನ್ನು ಬಾಯಲ್ಲಿ ತಿನ್ನಬೇಕು. ಆ ನಂತರ ಅದನ್ನು ಉಗಳಬೇಕು. ಹಿಂದಿನಿಂದ ಶಸ್ತ್ರವನ್ನು ಹಾಕಿಕೊಳ್ಳಲು ಗಾಯವಾಗುವದಿಲ್ಲ.

## ಮತ್ತೊಂದು ಪ್ರಕಾರ

ಬಾಯಲ್ಲಿ ಶಸ್ತ್ರವನ್ನು ಹಾಕಿಕೊಳ್ಳಬೇಕಾದರೆ ಮೊದಲು ಗಂಟು-ಗಳ್ಳಿಯ ಬೇರನ್ನು ಬಾಯಿಯಲ್ಲಿ ತಿಂದು ಉಗಳಬೇಕು ಆ ನಂತರ ಶಸ್ತ್ರವನ್ನು ಹಾಕಿಕೊಳ್ಳಲು ಅಥವಾ ಚುಚ್ಚಿಕೊಳ್ಳಲು ಗಾಯವಾಗಲಾರದು.

## ರಾಕ್ಷಸರಂತೆ ಕಾಣಿಸುವದು

ಎಲ್ಲರೂ ರಾಕ್ಷಸರಂತೆ ಕಾಣಬೇಕಾದರೆ ಮೊದಲು ಮಂಗಳವಾರ ದಿವಸ ಅಮಾವಾಶಿ ಬಂದಾಗ ನೋಡಿಕೊಂಡು ಆ ದಿವಸ ಒಂದು ಸೊಂಡಿ ಇಲಿ ಯನ್ನು ಹಿಡಿದುಕೊಂಡು ಅದನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಅದನ್ನು ಕೊಂದು ಅಲ್ಲಿಯೇ ಸುಟ್ಟು ಭಸ್ಮವನ್ನು ಮಾಡಿ ಆರಿದ ನಂತರ ಆ ಭಸ್ಮವನ್ನು ತೆಗೆದುಕೊಂಡು ಬಂದು ಇಟ್ಟುಕೊಳ್ಳಬೇಕು. ಜಾದೂ ಮಾಡುವ ಸಮಯದಲ್ಲಿ ಆ ಬೂದಿಯನ್ನು ಯಾವಾತನು ತನ್ನ ಮೈಗೆಲ್ಲ ಹಚ್ಚಿಕೊಳ್ಳು ವನೋ ಅವನ ದೃಷ್ಟಿಗೆ ಬಿದ್ದವರೆಲ್ಲರೂ ರಾಕ್ಷಸನಂತೆಯೇ ಕಾಣುವರು.

## ಕತ್ತಲೆಯೊಳಗೆ ದೀವಿಗೆ ಇಲ್ಲದೆ ಬೆಳಕು ಕಾಣಿಸುವದು

ಕತ್ತಲೆಯೊಳಗೆ ಬೆಳಕು ಬೀಳುವಂತೆ ಮಾಡಬೇಕಾದರೆ ಮೊದಲು ಬಿಳೀ ಬಾಟ್ಲಿಯನ್ನು ತೆಗೆದುಕೊಂಡು ಅದನ್ನು ಚನ್ನಾಗಿ ಹೊಲಸಿಲ್ಲದಂತೆ ತೊಳೆದು ಸ್ವಚ್ಛವಾದ ಆ ಬಾಟ್ಲಿಯಲ್ಲಿ ಲವಂಗದ ಅರಕನ್ನು ಹಾಕಿ ಬೂಚು ಇಡಬೇಕು ಮತ್ತು ಅದಕ್ಕೆ ಫಾಸ್ಫರಸ್‌ನ್ನು ಸ್ವಲ್ಪ ಹಾಕಿ ಬೂಚು ಇಟ್ಟು ಬಾಯಿ ಬಂದು ಮಾಡಬೇಕು. ಆ ಬಾಟ್ಲಿಯನ್ನು ಕತ್ತಲವಿರುವ ಸ್ಥಳದಲ್ಲಿ ಇಟ್ಟರೆ ದೀವಿಗೆಯು ಉರಿಯುತ್ತಿರುವಂತೆ ಬೆಳಕು ಬೀಳುವದು.

## ಉಂಗರಕ್ಕೆ ದಾರವನ್ನು ಕಟ್ಟಿ ತೂಗಹಾಕಬೇಕು ದಾರ ಸುಟ್ಟರೂ ಉಂಗರವು ಬೀಳದಿರುವದು

ದಾರಕ್ಕೆ ಬೆಂಕಿ ಹಚ್ಚಿ ದಾರವನ್ನು ಸುಟ್ಟರೂ ದಾರಕ್ಕೆ ಕಟ್ಟಿದ ಉಂಗ ರವು ಬೀಳದಂತೆ ಮಾಡಬೇಕಾದರೆ ಒಂದು ಜಿನುಗಾದ ದಾರವನ್ನು ತೆಗೆದು ಕೊಂಡು ಅದಕ್ಕೆ ಉಪ್ಪಿನ ನೀರನ್ನು ಮಂದಗೆ ಮಾಡಿ ಅದರಲ್ಲಿ ಆ ದಾರ ವನ್ನು ನೆನೆಯಿಸಿ ಒಣಗಿಸಬೇಕು. ಆ ಮೇಲೆ ಒಂದು ಉಂಗರವನ್ನು ತೆಗೆದು ಕೊಂಡು ಆ ಉಂಗರಕ್ಕೆ ಉಪ್ಪಿನ ನೀರಿನಿಂದ ನೆನೆಯಿಸಿ ತಯಾರ

ಮಾಡಿದ ದಾರವನ್ನು ಕಟ್ಟಬೇಕು. ಅದನ್ನು ತೂಗ ಹಾಕಬೇಕು. ಆ ತೂಗ ಹಾಕಿದ ಉಂಗರದ ದಾರವನ್ನು ದೀಪದ ಉರಿಯಿಂದ ಆ ದಾರವನ್ನು ಸುಡಬೇಕು. ದಾರವು ಎಲ್ಲಾ ಸುಟ್ಟು ಕರ್ರಗೆ ಕಾಣಿಸುತ್ತಿದ್ದರೂ ಉಂಗರವು ಮಾತ್ರ ಹಾಗೆಯೇ ಜೋತಾಡುತ್ತಿರುವದು. ಇದನ್ನು ಮಾಡುವ ಸ್ಥಳದಲ್ಲಿ ಘಾಳಿಯು ಮಾತ್ರ ಇರಬಾರದು.

## ಉರಿಯನ್ನು ನೊಂದಿಸುವಿಕೆ

ಬೆಂಕಿಯನ್ನು ಆರಿಸಬೇಕಾದರೆ ಬೆತ್ತದ ಬೇರು, ಕುದುರೆಯ ಕುರಯಿ ಇವೆರಡನ್ನು ಸರಿಯಾಗಿ ತೆಗೆದುಕೊಂಡು ಸಾಪಾದ ಕಲ್ಲಿನ ಮೇಲೆ ಸಣ್ಣಾಗಿ ಅರಿಯಬೇಕು. ಇದನ್ನು ಅಡಿಗೆಯನ್ನು ಮಾಡುವ ಕಾಲದಲ್ಲಿ ಒಲೆಯಲ್ಲಿ ಹಾಕಿದರೆ ಉರಿಯು ಆರಿ ಹೋಗಿ ಬರೇ ಹೊಗೆಯು ಮುಸುಕುವದು. ಪುನಃ ಆ ಖುರವನ್ನು ತೆಗೆದೊಗೆದರೆ ಉರಿಯುವದು.

## ನೀರು ತುಂಬಿದ ಪಾತ್ರೆಯಲ್ಲಿ ಅರಿಷಣದ ಉಂಡೆಯನ್ನು ಹಾಕಿ ಅದನ್ನು ಹಾಗೇ ತೆಗೆಯುವದು

ಅರಿಷಣದ ಪುಡಿ, ಗೊಳಗೊಳಕಿಯ ಬೀಜ ಇವೆರಡನ್ನೂ ಕೂಡಿಸಿ ಚನ್ನಾಗಿ ಕುಟ್ಟಿ ಉಂಡೆಯನ್ನು ಮಾಡಿ ಆ ಉಂಡೆಯನ್ನು ನೀರು ತುಂಬಿದ ಪಾತ್ರೆಯ ಲ್ಲಿ ಹಾಕಬೇಕು. ತಾನು ಮಾಡುವ ಸಮಯದಲ್ಲಿ ಎಲ್ಲರೆದುರಿನಲ್ಲಿ ಆ ಪಾತ್ರೆಯೊಳಗೆ ಕೈ ಹಾಕಿ ಆ ಅರಿಷಣದ ಉಂಡಿಯನ್ನು ಕಡೆಗೆ ತೆಗೆದು ಎಲ್ಲರಿಗೂ ತೋರಿಸಬೇಕು.

## ಹುಂಜವು ಗೆಲ್ಲುವಂತೆ ಮಾಡುವದು

ರವಿವಾರ ದಿವಸ ಪುಷ್ಯಾ ನಕ್ಷತ್ರವು ಬಂದಾಗ ನಸಗುನ್ನಿಯ ಗಿಡವಿದ್ದಲ್ಲಿಗೆ ಶುಚಿರ್ಭೂತನಾಗಿ ಮೌನದಿಂದ ಹೋಗಿ ಆ ಗಿಡವನ್ನು ಪೂಜೆಯನ್ನು

ಮಾಡಿ ಆ ಗಿಡವನ್ನು ಬೇರು ಸಹಿತವಾಗಿ ಕಿತ್ತುಕೊಂಡು ಬರಬೇಕು. ತಾವು ಜೂಜಾಟವನ್ನು ಆಡುವಾಗ ಆ ಬೇರನ್ನು ಹುಂಜದ ಕೊರಳಿಗೆ ಕಟ್ಟಿ ಕಡದಾಟಕ್ಕೆ ಬಿಟ್ಟರೆ ತನ್ನ ಹುಂಜವು ಗೆಲ್ಲುವದು.

## ಗೊತ್ತು ಮಾಡಿಕೊಂಡ ಎಲೆಯನ್ನು ತೆಗೆದು ತೋರಿಸುವದು

ಇಸ್ಪೇಟಿನ ಪ್ಯಾಕನ್ನು ಟಿಪಾಯಿಸಿಕೊಂಡು ಇಡಬೇಕು. ಅದರಲ್ಲಿ ಒಬ್ಬನನ್ನು ಕರೆದು ನಿನಗಿಷ್ಟವಿದ್ದ ಎಲೆಯನ್ನು ತೆಗೆದು ನಿನ್ನ ನೆನಪಿನಲ್ಲಿ ಇಟ್ಟುಕೋ ಎಂದು ಹೇಳಬೇಕು. ಆ ಎಲೆಯನ್ನು ಪ್ಯಾಕಿನ ಮೇಲೆ ಇಟ್ಟು ಅದನ್ನು ಟಿಪಾಯಿಸಿ ಇಟ್ಟು ಮತ್ತೊಂದು ಗುರ್ತಿಸಿರುವ ಎಲೆಯನ್ನು ಅದರ ಮೇಲಿಟ್ಟು ಟಿಪಾಯಿಸಿದ ಎಲೆಗಳನ್ನು ಬೇರೆಬೇರೆ ಮಾಡುತ್ತಾ ತಾನುಜೋಡಿಸಿರುವ ಎಲೆಯ ಪಕ್ಕದ್ದೇ ಸಭಿಕರು ಗುರ್ತಿಸಿದ್ದೆಂದು ತೆಗೆದು ಹಾಕುವದು.

## ಕೆಂಪು ಬಣ್ಣವನ್ನು ಅರಿಷಿಣ ಮಾಡುವದು

ಎಲ್ಲರ ಎದುರಿನಲ್ಲಿ ಅರಿಷಣವನ್ನು ಸುಣ್ಣವನ್ನು ತರಿಸಿಕೊಂಡು ಅದನ್ನು ಕೆಂಪು ಬಣ್ಣವಾಗುವಂತೆ ಕಲಿಸಿ ಮುದ್ದೆಯನ್ನು ಮಾಡಿ ಇಲ್ಲಿ ನೋಡಿರಿ. ಇದನ್ನು ಪುನಃ ಅರಿಷಿಣವಾಗಿಯೇ ಮಾಡುತ್ತೇನೆ. ನೋಡಿರಿ ಎಂದು ತೋರಿಸಿ ಗುಪ್ತವಾಗಿ ಬೆರಳಿನ ಸಂದಿನಲ್ಲಿ ಇಟ್ಟುಕೊಂಡಿದ್ದ ಹುಣಸೇ ಹಣ್ಣಿನ ತಿರಳು ಅದಕ್ಕೆ ತನ್ನ ಕೈಯ ಚಮತ್ಕಾರದಿಂದ ಕಲಿಸಿ ಮಂತ್ರವನ್ನು ಹೇಳುವವನಂತೆ ನಟಿಸುತ್ತಾ ಸಭೆಯ ಎದುರಿನಲ್ಲಿ ಇಡಲು ಅದು ಅರಿಷಿಣವಾಗಿಯೇ ಆಗುವದು.

## ಸತ್ತ ಮೀನವನ್ನು ಆಡಿಸುವದು

ಸತ್ತ ಮೀನಗಳನ್ನು ಆಡಿಸಿ ತೋರಿಸಬೇಕಾದರೆ ಮೊದಲು ಅಂಕೋಲೆಯ ಗಿಡದ ಎಣ್ಣೆಯನ್ನು ತಯಾರಿಸಿಕೊಳ್ಳಬೇಕು. ನಂತರ ಒಂದು ಸತ್ತ

ಮೀನವನ್ನು ತಂದು ಆ ಮೀನವನ್ನು ಸದರಿ ಅಂಕೋಲೆಯ ಎಣ್ಣೆಯಲ್ಲಿ ಆ ಸತ್ತ ಮೀನವನ್ನು ಚನ್ನಾಗಿ ಆ ಎಣ್ಣೆಯಲ್ಲಿ ಎದ್ದಿ ತೋಯಿಸಬೇಕು. ಆ ಮೇಲೆ ಒಂದು ಡಬರಿಯನ್ನು ತಂದು ಅದರಲ್ಲಿ ತಕ್ಕಷ್ಟು ನೀರನ್ನು ಹಾಕಿ ಆ ನೀರಿನಲ್ಲಿ ಆ ಸತ್ತ ಮೀನವನ್ನು ಹಾಕಲು ಅದು ನೀರಿನಲ್ಲಿ ಹರಿದಾಡುವದು

## ತಗಣಿಯನ್ನು ನಾಶ ಮಾಡುವಿಕೆ

ಮನೆಯೊಳಗಿನ ತಗಣಿಗಳನ್ನು ಕಳೆದುಕೊಳ್ಳಬೇಕಾದರೆ ಅದಕ್ಕೆ ಮೊದಲು ಎಕ್ಕೆಯ ಗಿಡದ ಹಾಲನ್ನು ಸಂಗ್ರಹಿಸಿಕೊಳ್ಳಬೇಕು. ಆ ನಂತರ ಅದರಲ್ಲಿ ಹಾಕತಕ್ಕ ಸಾಮಾನುಗಳು ಯಾವವೆಂದರೆ ೧ ಜೇಕಿನಕಡ್ಡಿ, ೨ ಕೇರ ಹರಳು, ೩ ಸಜ್ಜಿ ರಸ, ೪ ಬಿಳೀ ಸಾಸವಿ ಈ ನಾಲ್ಕು ಸಾಮಾನುಗಳನ್ನು ಸರಿಯಾಗಿ ತೆಗೆದುಕೊಂಡು ಸಣ್ಣಾಗಿ ಜಜ್ಜಿ ಅರೆದು ಪುಡಿಯನ್ನು ಮಾಡಿ ಆ ಪುಡಿಯಲ್ಲಿ ಸದರಿ ಎಕ್ಕಿ ಗಿಡದ ಹಾಲನ್ನು ಹಾಕಿ ಚೆನ್ನಾಗಿ ಜಿಗುಟಾಗುವಂತೆ ಅರೆದು ಅದನ್ನು ಯಳ್ಳ ಎಣ್ಣೆಯಲ್ಲಿ ಮಿಶ್ರ ಮಾಡಿ ಪಣತಿಯಲ್ಲಿ ಆ ಎಣ್ಣೆಯನ್ನು ಹಾಕಿ ದೀಪವನ್ನು ಹಚ್ಚಲು ಎಲ್ಲ ತಗಣಿಗಳು ಸತ್ತು ಹೋಗುವವು.

## ಗಿಡದ ಮೇಲೆ ಉರಿಯನ್ನು ತೋರಿಸುವದು

ಗಿಡಗಳ ಮೇಲೆ ಉರಿಯ ಚಮತ್ಕಾರವನ್ನು ತೋರಿಸಬೇಕಾದರೆ ಮೊದಲು ಸಂಗ್ರಹಿಸತಕ್ಕ ಸಾಮಾನುಗಳು ಯಾವ ಯಾವವೆಂದರೆ ೧ ಗಂಧಕ ೨ ಕರಾಳ, ೩, ಕರ್ಪುರ, ೪ ಲೋಹಚೂರ್ಣ ಈ ನಾಲ್ಕು ಜಿನಸುಗಳನ್ನು ತಕ್ಕಷ್ಟು ತೆಗೆದುಕೊಂಡು ಅದರಲ್ಲಿ ಕೊಂಚ ಅಂದರೆ ಸ್ವಲ್ಪ ರಾಳವನ್ನೇ ಹೆಚ್ಚು ಕೂಡಿಸಿ ಅರೆದು ಅದನ್ನು ಒಂದು ಅರಬಿಯಲ್ಲಿ ಕಟ್ಟಬೇಕು. ಅರಬಿಯಲ್ಲಿ ಹಾಕಿ ಕಟ್ಟಿದ ಈ ಗಂಟನ್ನು ಗಿಡದ ಮೇಲೆ ಏರಿ ಒಂದು ಕೋತಿಗೆ (ಟೊಂಗೆಗೆ) ಕಟ್ಟಿ ಆ ಗಂಟಿಗೆ ಕಡ್ಡಿಯನ್ನು ಕೊರೆದು ಉರಿಯನ್ನು ಹಚ್ಚ

ಬೇಕು. ಗಾಳಿಯು ಹೆಚ್ಚು ಹೆಚ್ಚು ಬಿಟ್ಟಂತೆ ಆ ಗಂಟಿನ ಉರಿಯು ಗಿಡದ ತುಂಬ ಆವರಿಸಿಕೊಂಡು ಗಿಡಕ್ಕೆ ಬೆಂಕಿ ಹತ್ತಿದಂತೆ ಕಾಣುವದು ಆಶ್ಚರ್ಯವು.

## ಹಾಸಿಗೆಯಲ್ಲಿ ಬೆಂಕಿ ತೋರಿಸುವದು

ಮಲಗಿದ ಹಾಸಿಗೆಯೊಳಗೆ ಬೆಂಕಿಯನ್ನು ತೋರಿಸಬೇಕಾದರೆ ಮೊದಲು ಕರೇ ವಿಳೇದ ಎಲಿಯನ್ನು ಜಜ್ಜಿ ಒಂದು ಅರಿವೆಯಲ್ಲಿ ಹಾಕಿ ಹಿಂಡಿಕೊಂಡು ರಸವನ್ನು ತೆಗೆದುಕೊಳ್ಳಬೇಕು. ಆ ಮೇಲೆ ಆ ರಸದಲ್ಲಿ ಅರಿಷಿಣ ಮತ್ತು ಕರ್ಪುರ ಇವೆರಡನ್ನು ಹಾಕಿ ಚನ್ನಾಗಿ ಅರೆದು ಜಿಗುಟಾಗುವ ಹಾಗೆ ಮಾಡಬೇಕು. ಅದನ್ನು ಬತ್ತಿಯನ್ನು ಹೊಸದು ತಯಾರ ಮಾಡಿ ಒಣಗಿಸಬೇಕು. ತಾವು ಜಾದು ಮಾಡಿ ತೋರಿಸುವ ಕಾಲಕ್ಕೆ ದೀಪದ ಕಡ್ಡಿಯನ್ನು ಕೆರೆದು ಆ ತಯಾರಿಸಿದ ಕೆಲವು ಬತ್ತಿಗಳಿಗೆ ಬೆಂಕಿಯನ್ನು ಹಚ್ಚಿ ಹಾಸಿಗೆಯ ಮೇಲೆ ಇರಿಸಿದರೆ ಅದು ಹಾಸಿಗೆಗೆ ಹತ್ತುವದಿಲ್ಲ. ಆ ಬತ್ತಿಯು ತನ್ನಷ್ಟಕ್ಕೆ ತಾನೇ ಸುಡುತ್ತಿರುವದು.

## ಕಬ್ಬಿಣದ ಮೇಲೆ ಚಿತ್ರ ಬರೆಯುವಿಕೆ

ಕಬ್ಬಿಣದ ಮೇಲೆ ಯಾವದಾದರೊಂದು ಬರೆಯಬೇಕಾದರೆ ಮೊದಲು ಲಿಂಬಿ ಹಣ್ಣಿನ ರಸವನ್ನು ಸಂಗ್ರಹಿಸಿ ಇಟ್ಟುಕೊಳ್ಳತಕ್ಕದ್ದು ಆ ನಂತರ ತುತ್ತಿ ಮತ್ತು ನವಸಾಗರ ಇವೆರಡನ್ನು ಸಮಾನವಾಗಿ ಕೂಡಿಸಿ ಸಣ್ಣಾಗಿ ಅರೆದು ಅದರಲ್ಲಿ ಮೊದಲು ತಯಾರಿಸಿದ ಆ ಲಿಂಬಿ ರಸವನ್ನು ಹಾಕೀ ಚನ್ನಾಗಿ ಅರೆದು ಗಂಧವನ್ನು ಮಾಡಬೇಕು. ಆ ಗಂಧವನ್ನು ಕಡ್ಡಿಯಿಂದಾಗಲೀ ಅಥವಾ ಬ್ರಿಸ್ಸಿನಿಂದಾಗಲಿ ಕಬ್ಬಿಣದ ತಗಡಿನ ಮೇಲೆ ಅಕ್ಷರಗಳನ್ನಾಗಲಿ ಅಥವಾ ಯಾವದಾದರೊಂದು ಚಿತ್ರವನ್ನಾಗಲಿ ಬರೆಯಬೇಕು. ಅದು ಚನ್ನಾಗಿ ಒಣಗಿತೆಂದರೆ ಅದರ ಮೇಲೆ ಬರೆದ ಚಿತ್ರಗಳು ಸ್ಪಷ್ಟವಾಗಿ ಕಾಣಿಸುವವು.

## ಮೈಮೇಲಿನ ಬಟ್ಟೆಗಳು ಉರಿಯಂತೆ ಕಾಣುವದು

ಮನುಷ್ಯನು ಬೆಂಕಿಯಂತೆ ಕಾಣಿಸುವ ಹಾಗೆ ಮಾಡಬೇಕಾದರೆ ಅದಕ್ಕೆ ಕೆಲವು ಜೀನಸುಗಳು ಬೇಕಾಗುವವು. ಅವು ಯಾವವೆಂದರೆ ೧ ಹರತಾಳ, ೨ ಗಂಧಕ, ೩ ಸಿಂಧೂರ, ೪ ಮೆಣಶಿಲೆ ಈ ನಾಲ್ಕು ಸಮನಾಗಿ ತಕ್ಕೊಂಡು ಅಂಕೋಲಿಯ ಎಣ್ಣೆಯಲ್ಲಿ ಅರೆದು ಬಟ್ಟೆಗಳಿಗೆ ಹಚ್ಚಲು ಬೇಕು. ರಾತ್ರಿ ಆ ಅರಿವೆಗಳನ್ನು ಮೈಯಲ್ಲಿ ಹಾಕಿಕೊಂಡರೆ ನೋಡಿದವರಿಗೆಲ್ಲ ಉರಿ ಹತ್ತಿದಂತೆ ಕಾಣುತ್ತದೆ. ಅಗದಿ ಆಶ್ಚರ್ಯಕರವು.

## ಮನೆಯಲ್ಲಿ ಹುಲಿಗಳು ಕಾಣುವಂತೆ ಮಾಡುವದು

ಹುಲಿಯ ತಲೆಯ ಬರುಡೆಯನ್ನು ತಂದು ಅದರಲ್ಲಿ ಮಣ್ಣು ತುಂಬಿ ಸರಿಯಾಗಿ ನೀರು ಹಾಕಿ ತೋಯಿಸಿ ಅದರಲ್ಲಿ ಹತ್ತಿಕಾಳ ಬೀಜವನ್ನು ಊರಲು ಬೇಕು ಅದಕ್ಕೆ ದಿನಾಲೂ ನೀರು ಸಿಂಪಡಿಸುತ್ತಿರಬೇಕು. ಅದು ಮೊಳೆತು ಸಸಿಯಾಗಿ ಬೆಳೆದು ಆದರಲ್ಲಿ ಬಂದ ಹತ್ತಿಯಿಂದ ಬತ್ತಿಗಳನ್ನು ಮಾಡಿ ಒಂದು ಹೊಸ ಪಣತಿಯಲ್ಲಿ ಯಂಣೆಯನ್ನು ಹಾಕಿ ಅದರಲ್ಲಿ ಆ ಬತ್ತಿಗಳನ್ನು ಹಾಕಿ ದೀಪವನ್ನು ಹಚ್ಚಿದರೆ ರಾತ್ರಿ ಆ ದೀಪದ ಬೆಳಕು ಎಲ್ಲೆಲ್ಲಿ ಬಿದ್ದಿರುತ್ತದೋ ಅಲ್ಲಿಯ ವರೆಗೆ ಹುಲಿಗಳೇ ಕಾಣಿಸುವವು ನೋಡಿದವರಿಗೆ ಭಯವಾಗುವದು ಆಶ್ಚರ್ಯವು

## ಬೆಂಕಿಯ ಮೇಲೆ ನಡೆಯುವದು

ಬೆಂಕಿಯ ಮೇಲೆ ನಡದಾಡಬೇಕಾದರೆ ಗಜಗದತೊಪ್ಪಲು, ಬಾಳೆಗಡ್ಡೆ ಇವೆರಡನ್ನೂ ಜಿಗುಟಾಗುವಂತೆ ಚನ್ನಾಗಿ ಅರೆದು ದೊಡ್ಡದೊಂದು ಕಪ್ಪೆಯ ನೆಣದಲ್ಲಿ ಹಾಕಿ ಮಿಶ್ರಮಾಡಿ ಬೆಂಕಿಯ ಮೇಲಿಟ್ಟು ಕುದಿಸಿ ಪಾಕವನ್ನು ಮಾಡಿಯಿಟ್ಟುಕೊಂಡು ಜಾದೂ ಮಾಡುವ ಕಾಲಕ್ಕೆ ಆ ಪಾಕವನ್ನು ಅಂಗಾಲಿಗೆ ಮೇಲೆ ಕೆಳಗೂ ಸರಿಯಾಗಿ ಹಚ್ಚಿಕೊಂಡು ಒಣಗಿದ ಮೇಲೆ ಬೆಂಕಿಯ

ಕೆಂಡದೊಳಗೆ ಸಹಜವಾಗಿ ಅಡ್ಡಾಡಬಹುದು ಇದನ್ನು ಮೊದಲು ಪ್ರಾಕ್ಟೀಸ್ ಮಾಡಿಕೊಂಡು ನಂತರ ಜಾದೂ ಸಮರಕ್ಕೆ ನಿಲ್ಲಬೇಕು.

## ಪಕ್ಷಿಯ ಪಕ್ಕದಲ್ಲಿ ಚಿತ್ರ ತೋರಿಸುವದು

ಪಕ್ಷಿಗಳ ರೆಕ್ಕೆಯಲ್ಲಿ ಚಿತ್ರವನ್ನು ತೋರಿಸಬೇಕಾದರೆ ಬಳಿಗಾರ, ನವಸಾಗರ ಇವೆರಡನ್ನು ಸರಿಯಾಗಿ ತಗೆದುಕೊಂಡು ಕೂಡಿಸಿ ಸಣ್ಣಾಗಿ ಪುಡಿಯನ್ನು ಮಾಡಿ ಅದರಲ್ಲಿ ಶಿರಸಲಗಿಡದ ತಪ್ಪಲದ ರಸವನ್ನು ಹಾಕಿ ಅರೆದು ಗಂಧವನ್ನು ಮಾಡಿ ಅದರಲ್ಲಿ ಮತ್ತಷ್ಟು ಸದರಿ ಪುಡಿಯನ್ನು ಹಾಕಿ ಗಟ್ಟಿಯಾಗಿ ಮಾಡಬೇಕು. ಅದನ್ನು ಮಿದ್ದಿ ದುಂಡಗಾಗಿ ಗಾಲಿಯು ಹಾಗೆ ಮಾಡಬೇಕು. ಆ ಗಾಲಿಯಲ್ಲಿ ತಮಗೆ ಬೇಕಾದದ್ದನ್ನು ಬರೆದು ಪಕ್ಷಿಯು ಮಲಗುವ ಸ್ಥಾನದಲ್ಲಿ ಅದಕ್ಕೆ ಕಾಣದಂತೆ ಗುಪ್ತವಾಗಿಯಿಡಬೇಕು. ಅದು ದಿನಾಲೂ ಆ ಗಾಲಿಯ ಮೇಲೆ ಕೂಡ್ರೋಣದರಿಂದ ಆ ಗಾಲಯಲ್ಲಿ ಬರೆದದ್ದು ಅದರ ಮರಿಯ ರೆಕ್ಕೆಯಲ್ಲಿ ಮೂಡಿರುತ್ತದೆ ತಗೆದುನೋಡಬಹುದು. ನಾವು ಬರೆದು ಇಟ್ಟ ಗಾಲಿಯು ಆ ಪಕ್ಷಿಗೆ ಎಷ್ಟೂ ಕಾಣಬಾರದು. ಕಂಡರೆ ಅದು ಅದನ್ನು ತಗೆದುಒಗೆಯುತ್ತದೆ. ಆದ ಕಾರಣ ನೀವು ಇಟ್ಟದ್ದು ಆ ಪಕ್ಷಿಗೆ ತಿಳಿಯಬಾರದು ಅದು ಮಲಗುವಲ್ಲಿಯೇ ಇರಬೇಕು.

## ಮನೆಯೊಳಗೆ ಎಲ್ಲಿ ನೋಡಿದರು ನೀರು ಕಾಣುವಂತೆ ಮಾಡುವದು

ದೊಡ್ಡದಾದ ಒಂದು ಮೀನವನ್ನು ತಂದು ಅದರ ನೆಣವನ್ನು ತಕ್ಕೊಳ್ಳಬೇಕು. ಮತ್ತು ಅದರಂತೆ ಒಂದು ಬಲಿಷ್ಟವಾದ ಕುರಿಯ ನೆಣವನ್ನು ತಗೆದುಕೊಂಡು ಈ ಎರಡನ್ನೂ ಕೂಡಿಸಿ ಇಡಬೇಕು. ಮತ್ತು ಅರಳೆಯನ್ನು ತಗೆದುಕೊಂಡು ಹಸನಾದ ಬತ್ತಿಗಳನ್ನು ಮಾಡಿ ಆ ಬತ್ತಿಗಳನ್ನು ಮೇಲೆ ತಯಾರಿಸಿದ ನೆಣವನ್ನು ಚನ್ನಾಗಿ ಆ ಬತ್ತಿಗೆ ಮರ್ಧಿಸಿ ಹಚ್ಚಬೇಕು. ಬತ್ತಿಗಳನ್ನು ಒಂದು ಹೊಸಾ ಪಣತಿಯಲ್ಲಿ ಹಾಕಿ ದೀಪವನ್ನು ಹಚ್ಚಿ ಕತ್ತಲೆಯಲ್ಲಿ ಇರಿಸಲು ಮನೆಯಲ್ಲಿ ಎಲ್ಲ ಕಡೆಗೂ ನೀರೇ ಕಾಣುವದು.

## ಕಾಗದಕ್ಕೆ ಉರಿ ಹತ್ತದಂತೆ ಮಾಡುದದು

ಕಾಗದಕ್ಕೆ ಉರಿಯು ಹತ್ತದಂತೆ ಚಮತ್ಕಾರವನ್ನು ಮಾಡಿ ತೋರಿಸ ಬೇಕಾದರೆ ದೇಶಿಯ ಕರ್ಪೂರವನ್ನೂ, ಪಟಿಗವನ್ನೂ ಸರಿಯಾಗಿ ತಗೆದು ಕೊಂಡು ಎರಡನ್ನೂ ಕೂಡಿಸಿ ನೀರು ಹಾಕಿ ಸಣ್ಣಾಗಿ ಅರೆದು ಗಂಧವನ್ನು ಮಾಡಿ ಆ ಗಂದವನ್ನು ಒಂದು ದಪ್ಪವಾದ ಕಾಗದವನ್ನು ತಗೆದುಕೊಂಡು ಆ ಕಾಗದಕ್ಕೆ ಸದರ ಗಂಧವನ್ನು ಹಚ್ಚಬೇಕು. ಮತ್ತು ಒಣಗಿಸ ಬೇಕು. ಇದೇ ಪ್ರಕಾರವಾಗಿ ೩-೪ ಸಾರೆ ಹಚ್ಚಿ ಹಚ್ಚಿ ಒಣಗಿಸಬೇಕು. ಆ ಕಾಗದವನ್ನು ತಯಾರಿಸಿ ಅದಕ್ಕೆ ಕಡ್ಡಿ ಕೊರೆದು ಉರಿ ಹಚ್ಚಿದರೆ ಆ ಹಾಳಿಗೆ ಉರಿಯು ಹತ್ತುವದಿಲ್ಲ. ಸುಡುವದೂ ಇಲ್ಲ.

## ಗಿಡಗಳ ಟೊಂಗೆಗಳು ಬಾಗುವ ಹಾಗೆ ಮಾಡುವದು

ಗಿಡದ ಕೊಲೆಗಳು ಬಾಗುವಂತೆ ಮಾಡಬೇಕಾದರೆ ಅದಕ್ಕೆ ಸರ್ಪದ ಎಲಬು, ಮನುಷ್ಯರ ಎಲಬು, ಕುರಿಯ ಎಲಬು ಈ ಮೂರನ್ನು ಕೂಡಿಸಿ ನೆಲದಲ್ಲಿ ಒಂದು ತೆಗ್ಗು ತೆಗೆದು ಆ ತೆಗ್ಗಿನಲ್ಲಿ ಈ ಮೂರು ಜೀನಸಿನ ಎಲಬು ಗಳನ್ನು ಕೂಡಿಸಿ ಸಣ್ಣಾಗಿ ಮಾಡಿ ಆ ಪುಡಿಯನ್ನು ಯಾವ ಗಿಡದ ಬುಡದಲ್ಲಿ ಸುಡುತ್ತಿರೋ ಆ ಗಿಡಗಳಿಗೆ ಹೊಗೆಯು ಬಡಿದೊಡನೆಯೇ ಆ ಗಿಡದ ಟೊಂಗೆ ಗಳು ಕೆಳಗೆ ಬರುವವು.

## ವಿಷ ಕಾಯಿಗಳನ್ನು ಸವಿ ಮಾಡುವದು

ವಿಷ ಕಾಯಿಗಳನ್ನು ಸವಿ ಮಾಡಬೇಕಾದರೆ ನೈಟ್ರೇಟ್ ಆಫ್ ಸಿಲ್ವರ್ ಮತ್ತು ಹಾಯಿಪೊ ಸಲ್ಫೇಟ್ ಆಫ್ ಸೋಡಾ ಇವುಗಳನ್ನು ಬೇರೆ ಬೇರೆ ರುಚಿ ನೋಡಿದರೆ ವಿಷವಾಗಿ ಕಾಣುವದು. ಇವೆರಡನ್ನೂ ಕೂಡಿಸಿದರೆ ಬಹು ರುಚಿಯಾಗಿ ಸವಿಯಾಗುವದು.

## ಜನರಿಗೆ ಕಾಣದ ಹಾಗೆ ಮಾಡುವದು

ಮನುಷ್ಯರಿಗೆ ಕಾಣದ ಹಾಗೆ ಆಗಬೇಕಾದರೆ ಸಾಸ್ವೆಯ ಎಂಣೆಯಲ್ಲಿ ನೆಲದಾಳಿಯ ಗಡ್ಡಿಯನ್ನು ಚೂರ್ಣ ಮಾಡಿ ಸಣ್ಣಾಗಿ ಅರೆದು ಗುಳಿಗೆಗಳನ್ನು ಮಾಡಿ ಆ ಗುಳಿಗೆಗಳನ್ನು ತಾನು ಜಾದು ಮಾಡಿ ತೋರಿಸುವಾಗ ಬಾಯೊಳ ಗಿಟ್ಟುಕೊಂಡರೆ ತಾನು ಜನರಿಗೆ ಕಾಣುವದಿಲ್ಲ.

## ಬೆಂಕಿ ಕೆಂಡವನ್ನು ಎತ್ತುವದು

ನವಸಾಗರ ಕರ್ಪುರ ಇವೆರಡನ್ನೂ ನೀರಲ್ಲಿ ಚನ್ನಾಗಿ ಅರೆದು ಕೈಗೆ ಹಚ್ಚಿಕೊಂಡು ವಣಗಿಸಿ ಬೆಂಕಿಯ ಕೆಂಡವನ್ನು ಹಿಡಿಯಬಹುದು.

## ಆಟಗಾರನ ಆಟವನ್ನು ಕೆಡಿಸುವದು

ಆಟಗಾರನ ಆಟವನ್ನು ನಿಲ್ಲಿಸಬೇಕಾದ ಪಕ್ಷದಲ್ಲಿ ಮಣಸಿಲೆ, ಇಂಗಲೀಕ ನೀಲಾಂಜನ, ಗೋರೋಜನ, ಹರಿದಳ ಈ ಐದು ಜೀನಸುಗಳನ್ನು ಕೂಡಿಸಿ ಇಟ್ಟುಕೊಂಡು ನಂತರ ಒಂದು ಆವಿಯನ್ನು ತಗೆದುಕೊಂಡು ಬಂದು ಆ ಆವಿಗೆ ಮೇಲಿನ ಐದು ಜೀನಸುಗಳನ್ನು ಏಳು ದಿವಸಗಳ ವರೆಗೂ ಆಹಾರವನ್ನು ಕೊಡಬೇಕು. ಆ ಆವಿಯನ್ನು ಒಂದು ಸ್ಥಳದಲ್ಲಿ ಇರಿಸಿ ಕೊಂಡಿರಬೇಕು. ಆ ಆವಿಯು ಹಾಕಿದ ಅದರ ಮಲವನ್ನು ತಾನು ಕೈಗೆ ಹಚ್ಚಿಕೊಂಡು ಆಟವನ್ನು ಆಡುವ ಆಟಗಾರನಿಗೆ ತನ್ನ ಕೈಮುಷ್ಟಿಯನ್ನು ತೋರಿಸಲು ಆ ಆಟಗಾರನು ನೋಡಿದರೆ ಅವನ ಆಟವು ನಿಂತು ಹೋಗುವದು.

## ಮಶಿಯಿಲ್ಲದೆ ಅನೇಕ ತರದ ಬಂಣದ ಅಕ್ಷರಗಳನ್ನು ಮೂಡಿಸಿ ತೋರಿಸುವದು

ಕಾಗದದ ಮೇಲೆ ಹಾಲಿನಿಂದಾ ಅಕ್ಷರಗಳನ್ನು ಬರೆದು ನೆರಳಲ್ಲಿ ಒಣಗಿಸಿದರೆ ಅದು ಬರೇ ಕಾಗದವೇ ಕಾಣಿಸುವದು. ಆ ಕಾಗದವನ್ನು ನೀರಲ್ಲಿ ಹಾಕಿದ ಕೂಡಲೆ ನೀಲಿಯ ಬಣ್ಣದ ಅಕ್ಷರಗಳಾಗುವವು.

ಉಳ್ಳಾಗಡ್ಡಿಯ ರಸವನ್ನು ತೆಗೆದು ಅದರಿಂದ ಬಿಳೇ ಕಾಗದದ ಮೇ ಆ ಉಳ್ಳಾಗಡ್ಡಿಯ ರಸದಿಂದ ಬರೆಯಬೇಕು. ಅದನ್ನು ಒಣಗಿಸಬೇಕು ಅದು ಬಿಳಿ ಕಾಗದವೇ ಕಾಣಿಸುವದು. ಆ ಕಾಗದವನ್ನು ಬೆಂಕಿಯ ಮೇ ಹಿಡಿದು ಜಳವನ್ನು ಬಡಿಸಿದರೆ ಅವು ಹಳದಿ ಅಕ್ಷರಗಳಾಗುವವು.

## ನೀರಲ್ಲಿ ಕಲ್ಲು ತೇಲುವಂತೆ ಮಾಡುವದು

ನೀರಿನಲ್ಲಿ ಕಲ್ಲು ತೇಲುವಂತೆ ಮಾಡಬೇಕಾದರೆ ಪುಷ್ಯಾ ನಕ್ಷತ್ರವಿ ರವಿವಾರವನ್ನು ಸಾಧಿಸಿಕೊಂಡು ಆ ದಿವಸ ಹಂದಿಯ ಮಲ, ಮೊಲದ ಮಲ ನೆಲಗುಳ್ಳದ ಬೇರು ಈ ಮೂರನ್ನು ತಂದು ಸಣ್ಣಾಗಿ ಅರೆದು ಗಂಧವನ್ ಮಾಡಬೇಕು. ಆ ಗಂಧವನ್ನು ಒಂದು ಕಲ್ಲು ತಂದು ಅದಕ್ಕೆ ಎಲ್ಲ ಕಡೆಗ ಹಚ್ಚಿ ಬಿಸಿಲಿನಲ್ಲಿ ಇಟ್ಟು ಚನ್ನಾಗಿ ಒಣಗಿಸಬೇಕು ಅದು ಒಣಗಿದ ಬಳಿ ಒಂದು ತಾಮ್ರದ ಪಾತ್ರೆಯನ್ನು ತಕ್ಕೊಂಡು ಅದರಲ್ಲಿ ತಕ್ಕಷ್ಟು ನೀರನ್ ಹಾಕಿ ಅದರಲ್ಲಿ ಗಂಧದಿಂದ ತಯಾರ ಮಾಡಿಟ್ಟ ಆ ಕಲ್ಲನ್ನು ಅದರಲ್ಲಿ ಹಾ ಬೇಕು. ಆ ಪಾತ್ರೆಯೊಳಗಿನ ನೀರಿನಲ್ಲಿ ಆ ಕಲ್ಲು ತೇಲುವದು· ಮುಳುಗುವ ದಿಲ್ಲ.

## ಮನೆಯಲ್ಲಿ ಚಿರ್ಚಗಳು ಕಾಣುವಂತೆ ಮಾಡುವದು

ಆದಿತ್ಯವಾರ ದಿವಸ ಚಿರ್ಚದ ತಲೆಯ ಬುರುಡಿಯನ್ನು ತಗೆ ಕೊಂಡು ಬಂದು ಅದರಲ್ಲಿ ಮಣ್ಣು ತುಂಬಿ ನೀರು ಹೊಯ್ದು ಹಸಿ ಮಾ ಅದರಲ್ಲಿ ಹತ್ತಿಯ ಬೀಜಗಳನ್ನು ಊರಬೇಕು. ದಿನಾಲೂ ಅದಕ್ಕೆ ನೀರನ್ ಹಾಕುತ್ತಿರಬೇಕು. ಅವು ಬೆಳೆದು ದೊಡ್ಡ ಗಿಡಗಳಾದ ಬಳಿಕ ಆ ಗಿಡದಿಂ ಬಂದ ಹತ್ತಿಯನ್ನು ಬತ್ತಿಯನ್ನಾಗಿ ಮಾಡಿ ಒಂದು ಪಣತೆಯಲ್ಲಿ ಹಾಕಿ ಅ ರಲ್ಲಿ ಎಣ್ಣೆಯನ್ನು ಹಾಕಿ ದೀಪವನ್ನು ಹಚ್ಚಲು ಅದರ ಬೆಳಕು ಬಿದ್ದಲ್ಲೆ ಚಿರ್ಚನ ಹಾಗೆ ಆಕಾರವಾಗಿ ಕಾಣಿಸುವವು.

## ಸುಟ್ಟ ಗಂಜಿಪರಾಕನ್ನು ಬಾಟ್ಲಿಯಲ್ಲಿ ಇದ್ದಕ್ಕಿದ್ದಂತೆ ತೋರಿಸುವದು

ಸುಟ್ಟ ಗಂಜಿಪರಾಕನ್ನು ಮೊದಲಿನಂತೆ ಮಾಡಿ ತೋರಿಸಬೇಕಾದರೆ ಒಂದೇ ತರದ ಎರಡು ಗಂಜಿಪರಾಕುಗಳನ್ನು ತೆಗೆದುಕೊಂಡು ಒಂದು ಗಂಜಿ ಪರಾಕನ್ನು ಕರೇ ಬಣ್ಣದ ಬಾಟ್ಲಿಯಲ್ಲಿ ಮುಚ್ಚಿ ಯಾರಿಗೂ ತಿಳಿಯದಂತೆ ಮರೆ ಮಾಡಿ ಇಟ್ಟುಕೊಂಡಿರಬೇಕು. ಮತ್ತೊಂದು ಗಂಜಿ ಪರಾಕನ್ನು ಅಲ್ಲಿ ಕೂಡಿರುವ ಎಲ್ಲ ಜನರ ಸಮಕ್ಷಮವಾಗಿ ಅದನ್ನು ಸುಟ್ಟು ಆ ಬೂದಿಯನ್ನು ಹುಡುಗರು ಹಾರಿಸುವ ಕೇಪಿನ ಬಂದೂಕದಲ್ಲಿ ಹಾಕಿ ಅದರಲ್ಲಿ ಕೇಪು ಇಟ್ಟು ಆ ಬಾಟ್ಲಿಗೆ ಹೊಡೆದು ಆ ಬಾಟ್ಲಿಯನ್ನು ಒಡೆದು ಬಿಡಬೇಕು. ಅದರಲ್ಲಿ ಆ ಸುಟ್ಟ ಗಂಜಿಪರಾಕು ಪುನಃ ದೊರೆಯುವದು. ಅದನ್ನು ಎಲ್ಲರಿಗೂ ತೋರಿಸಬೇಕು.

## ಇದ್ದಲಿಯ ಕಪ್ಪು ಬಣ್ಣವನ್ನು ಬೆಳ್ಳಗೆ ಮಾಡುವದು

ಉರಿಯುತ್ತಿರುವ ಬೆಂಕಿಯ ಕೆಂಡವನ್ನು ಒಂದು ಪಾತ್ರೆಯಲ್ಲಿ ಹಾಕಿ ಅದರ ಮೇಲೆ ಕಾಷ್ಟಿಕ್ ಪುಡಿಯನ್ನು ಆ ಉರಿಯುತ್ತಿರುವ ಕೆಂಡದ ಮೇಲೆ ಹಾಕಲು ಅದು ತಕ್ಷಣಕ್ಕೆ ಒಂದು ತರದ ಶಬ್ದವಾಗುವದು. ಮತ್ತು ಆ ಇದ್ದಲಿಯು ಕಪ್ಪು ಬಣ್ಣವು ಹೋಗಿ ಬೆಳ್ಳಗಾಗುವದು.

## ನೆತ್ತಿಯ ಮೇಲೆ ಕಲ್ಲು ಒಡೆಯುವದು

ಮೊದಲನೆಯ ದಿವಸದಲ್ಲಿ ಹೋಗಿ ಕುರಟಿಗನ ಬಳ್ಳಿಯು ಎಲ್ಲಿ ಇರುವದೋ ಎಂಬುದನ್ನು ಗೊತ್ತು ಹಚ್ಚಿಕೊಂಡು ಬಂದಿರಬೇಕು. ರವಿವಾರ ದಿವಸ ಅಮಾವಾಸಿ ಇದ್ದಾಗ ಶುಚಿರ್ಭೂತನಾಗಿ ಮಾತನಾಡದೆ ಎಲ್ಲ ಪೂಜಾ ಸಾಮಾನುಗಳನ್ನು ತೆಗೆದುಕೊಂಡು ಆ ಬಳ್ಳಿ ಇದ್ದಲ್ಲಿಗೆ ಹೋಗಿ ಆ ಬಳ್ಳಿ

ಯನ್ನು ವಿಧಾನೋಕ್ತವಾಗಿ ಪೂಜೆಯನ್ನು ಮಾಡಿ ಪೂರ್ವ ಮುಖವಾಗಿ ಆ ಬಳ್ಳಿಯನ್ನು ಬೇರು ಸಹಿತವಾಗಿ ಕಿತ್ತುಕೊಂಡು ಬರಬೇಕು. ಜಾದೂ ಮಾಡಿ ತೋರಿಸುವ ಕಾಲಕ್ಕೆ ಆ ಬೇರನ್ನು ತಲೆಗೆ ಕಟ್ಟಿಕೊಂಡು ಅದರ ಮೇಲೆ ಕಲ್ಲು ಇಟ್ಟು ಒಡೆಯಲು ಆ ಕಲ್ಲು ಒಡೆಯುವದು. ತಲೆಗೆ ಮಾತ್ರ ಪೆಟ್ಟು ಹತ್ತುವದಿಲ್ಲ.

## ಜೋಳವನ್ನು ಅರಳು ಮಾಡುವದು

ಕಳ್ಳಿಯ ಹಾಲನ್ನು ತೆಗೆದುಕೊಂಡು ಬಂದು ಆ ಹಾಲಿನಲ್ಲಿ ಜೋಳವನ್ನು ಹಾಕಿ ನೆನೆಯಿಸಬೇಕು. ಇದರಂತೆ ಎರಡು ಮೂರು ಸಲ ಮಾಡಬೇಕು. ಆ ಜೋಳವನ್ನು ಚನ್ನಾಗಿ ಒಣಗಿಸಬೇಕು. ಈ ತಯಾರಾದ ಅರಳಿನ ಜೋಳವನ್ನು ತಯಾರ ಮಾಡಿ ಇಟ್ಟುಕೊಂಡು ಜೂಜಾಟವನ್ನು ಆಡುವ ಸಮಯದಲ್ಲಿ ಆ ಜೋಳದ ಕಾಳುಗಳನ್ನು ಅರಳು ಮಾಡುತ್ತೇನೆಂದು ಹೇಳಿ ಆ ಸದರಿ ಜೋಳವನ್ನು ಸೂರ್ಯನ ಬಿಸಿಲಿಗಿಟ್ಟರೆ ಆ ಜೋಳಗಳು ತಮ್ಮಷ್ಟಕ್ಕೆ ತಾವೇ ಅರಳುಗಳಾಗುವವು.

## ಮನೆಯಲ್ಲಿ ಕರಡಿಗಳು ಕಾಣುವಂತೆ ಮಾಡುವದು

ಒಂದು ಕರಡೆಯ ತಲೆಯ ಬುರಡಿಯನ್ನು ತಂದು ಅದರಲ್ಲಿ ಮಣ್ಣನ್ನು ತುಂಬಿ ಅದರಲ್ಲಿ ವಿಲಾಯತಿ ಹತ್ತಿಕಾಳ ಬೀಜವನ್ನು ಹಾಕಬೇಕು. ಅದಕ್ಕೆ ದಿನಾಲೂ ನೀರನ್ನು ಹಾಕಿಕೊಳ್ಳುತ್ತಿರಬೇಕು. ಅವು ಮೊಳೆತು ಗಿಡಗಳಾದ ಬಳಿಕ ಆ ಗಿಡದ ಹತ್ತಿಯನ್ನು ಬತ್ತಿಯನ್ನಾಗಿ ಮಾಡಿಕೊಂಡು ಒಂದು ಹೊಸ ಪಣತಿಯನ್ನು ತಂದು ಅದರಲ್ಲಿ ಎಣ್ಣೆಯನ್ನು ಹಾಕಿ ಆ ಬತ್ತಿಗಳನ್ನು ಇಟ್ಟು ದೀಪವನ್ನು ಹಚ್ಚಿ ಕತ್ತಲೆಯಲ್ಲಿ ಇಟ್ಟರೆ ಮನೆಯಲ್ಲಿ ಕರಡಿಯೇ ಕಾಣಿಸುತ್ತವೆ. ಆಶ್ಚರ್ಯವು.

## ಸರಪಳಿಯ ಕೊಂಡಿಯನ್ನು ಬಿಡಿಸುವದು

ಸರಪಳಿಯ ಕೊಂಡಿಗಳನ್ನು ಬಿಡಿಸಬೇಕಾದ್ದರೆ ಕುರಟಿಗನ ಬಳ್ಳಿಯ ಹಾಲು, ಆಲದಮರದಹಾಲು, ಯಕ್ಕಿಗಿಡದಹಾಲು, ಕಳ್ಳಿಯಹಾಲು ಇವೆಲ್ಲವುಗಳನ್ನು ಹೊಸ ಅರಿವೆಗೆ ಒಂದರ ಮೇಲೆ ಒಂದನ್ನು ಹಚ್ಚಿ ಆ ಅರಿವೆಯನ್ನು ಸರಪಣಿಯ ಕೊಂಡಿಗೆ ಹಚ್ಚಿ ಸ್ವಲ್ಪ ಹೊತ್ತು ಬಿಟ್ಟರೆ ತನ್ನಷ್ಟಕ್ಕೆ ತಾನೇ ಬಿಟ್ಟು ಬಿಡುತ್ತವೆ.

## ಎಲ್ಲ ಕಡೆಗೂ ಹಾವು ಕಾಣಿಸುವಂತೆ ಮಾಡುವದು

ಮನೆಯಲ್ಲಿ ಎಲ್ಲ ಕಡೆಗೂ ಹಾವುಗಳು ಕಾಣಿಸುವಂತೆ ಮಾಡಬೇಕಾದರೆ ಆದಿತ್ಯವಾರ ದಿವಸ ಅಮವಾಸಿಯು ಬಂದಾಗ ಸತ್ತಹಾವಿನ ಬಾಯೊಳಗೆ ವಿಲಾಯತಿಯ ಹತ್ತಿಯ ಬೀಜಗಳನ್ನು ತುಂಬಿ ಆ ಹಾವನ್ನು ಭೂಮಿಯಲ್ಲಿ ಹುಗಿಯಬೇಕು. ಅದರ ಮೇಲೆ ದಿನಾಲೂ ನೀರನ್ನು ಹಾಕಿಕೊಳ್ಳುತ್ತಾ ಇರಬೇಕು. ಆ ಬೀಜಗಳು ಮೊಳೆತು ಗಿಡಗಳಾಗುತ್ತವೆ. ಆ ಗಿಡಗಳಿಂದ ಬಂದ ಹತ್ತಿಯನ್ನು ಬತ್ತಿಯನ್ನಾಗಿ ಮಾಡಿ ಒಂದು ಹೊಸ ಪಣತೆಯನ್ನು ತಕ್ಕೊಂಡು ಅದರಲ್ಲಿ ಎಣ್ಣೆಯನ್ನು ಬತ್ತಿಯನ್ನು ಹಾಕಿ ದೀಪವನ್ನು ಹಚ್ಚಿ ಕತ್ತಲೆಯಲ್ಲಿ ಇರಿಸಲು ನೋಡಿದವರಿಗೆಲ್ಲ ಹಾವುಗಳೇ ಕಾಣುತ್ತವೆ.

## ಹಾಲನ್ನು ಆಗಿಂದಾಗಲೇ ಹೆಪ್ಪು ಮಾಡುವದು

ಹಾಲು ಆಗಿಂದಾಗಲೇ ಹೆಪ್ಪುಗಟ್ಟುವಂತೆ ಮಾಡಬೇಕಾದರೆ ಗೊಳಗೊಳಕಿಯ ಬೀಜಗಳನ್ನು ತಂದು ಕುಟ್ಟಿ ಚೂರ್ಣವನ್ನು (ಪುಡಿಯನ್ನು) ಮಾಡಿ ಇಟ್ಟುಕೊಂಡು ಎರಡು ಗ್ಲಾಸುಗಳನ್ನು ತೆಗೆದುಕೊಂಡು ಒಂದು ಗ್ಲಾಸಿನಲ್ಲಿ ಹಾಲನ್ನು ಹಾಕಬೇಕು- ಮತ್ತೊಂದು ಗ್ಲಾಸಿನಲ್ಲಿ ಸದರಿ ಪುಡಿಯನ್ನು ಹಾಕಿ ಇಟ್ಟುಕೊಳ್ಳಬೇಕು. ಗ್ಲಾಸಿನಲ್ಲಿರುವ ಹಾಲನ್ನು ಪುಡಿಇರುವ ಗ್ಲಾಸಿಗೆ ಹಾಲನ್ನು ಹಾಕಿದ ಕೂಡಲೇ ಆ ಹಾಲು ಹೆಪ್ಪುಗಟ್ಟುವದು.

## ಮನೆಯಲ್ಲಿ ಎಲ್ಲಕಡೆಗೂ ಸಿಂಹಗಳು ಕಾಣುವಂತೆ ಮಾಡುವದು

ಆದಿತ್ಯವಾರ ಅಮವಾಶ್ಯಿಯ ದಿವಸ ಸತ್ತ ಸಿಂಹದ ತಲೆಯಬುರುಡಿಯನ್ನು ತಂದು ಅದರಲ್ಲಿ ಮಣ್ಣು ತುಂಬಿ ಅದರೊಳಗೆ ಹತ್ತಿಯ ಬೀಜಗಳನ್ನು ಊರಬೇಕು. ಆದಕ್ಕೆ ದಿನಾಲು ನೀರನ್ನು ಹಾಕುತ್ತಿರಬೇಕು. ಅವು ಮೊಳೆತು ಗಿಡಗಳಾದ ಮೇಲೆ ಅದರ ಹತ್ತಿಯನ್ನು ತಕ್ಕೊಂಡು ಬತ್ತಿಯನ್ನು ಮಾಡಿ ಒಂದು ಹೊಸ ಪಣತಿಯೊಳಗೆ ಆ ಬತ್ತಿಗಳನ್ನು ಹಾಕಿ ಅದಕ್ಕೆ ತಕ್ಕಷ್ಟು ಯಣ್ಣಿಯನ್ನು ಹಾಕಿ ದೀಪವನ್ನು ಹಚ್ಚಲು ರಾತ್ರಿ ಮನೆಯಲ್ಲಿ ಎಲ್ಲ ಕಡೆಗೂ ಸಿಂಹದ ಮರಿಗಳೇ ಕಾಣಿಸುತ್ತವೆ. ಇದು ಎಲ್ಲರಿಗೂ ಆಶ್ಚರ್ಯವಾಗಿ ಕಾಣುವದು.

## ಬತ್ತಾಸುಗಳನ್ನು ನೀರಲ್ಲಿ ಹಾಕಿದರೂ ಇದ್ದಕ್ಕಿದ್ದಂತೆ ಮಾಡುವದು

ದುಂಡಗಾಗಿರುವ ಕೆಲವು ಬತ್ತಾಸುಗಳನ್ನು ತಕ್ಕೊಂಡು ಆ ಬತ್ತಾಸುಗಳನ್ನು ಎಣ್ಣಿಯಲ್ಲಿ ಹಾಕಿ ಕಲಕುಮಲಕು ಮಾಡಿ ತೋಯಿಸಿ ತೆಗೆದುಕೊಂಡು ಜಾದೂ ಮಾಡಿ ತೋರಿಸುವ ಸಮಯದಲ್ಲಿ ಆ ಬತ್ತಾಸುಗಳನ್ನು ನೀರು ತುಂಬಿದ ಭಾಂಡೆಯೊಳಗೆ ಹಾಕಿದರೆ ಅವು ಕರಗುವದಿಲ್ಲ ಮತ್ತು ಮುಕ್ಕಾಗುವದಿಲ್ಲ ಆಶ್ಚರ್ಯಕರವಾದದು.

## ಕಾದ ಕಬ್ಬಿಣವನ್ನು ಬಾಯಿಂದ ಹಿಡಿಯುವದು

ಕಾದ ಕಬ್ಬಿಣವನ್ನು ಬಾಯಿಂದ ಹಿಡಿಯಬೇಕಾದರೆ ಆದಿತ್ಯವಾರ ದಿವಸ ಪುಷ್ಯಾನಕ್ಷತ್ರ ಇದ್ದಾಗ ಅಗಲಿ ಅಥವಾ ಅಮವಾಸಿ ಇದ್ದಾಗ ಆಗಲಿ ಸಾಧಿಸಿಕೊಂಡು ಕಣಗಿಲಗಿಡದ ತಪ್ಪಲನ್ನು ತಂದು ಅದನ್ನು ಸಣ್ಣಾಗಿ ಅರೆದು ರಸವನ್ನು ತೆಗೆದುಕೊಂಡು ಆ ರಸವನ್ನು ಬಾಯಿಗೆ ಸವರಿಕೊಂಡು ಕಾದಿರುವ ಕಬ್ಬಿಣವನ್ನು ಬಾಯಿಂದ ಹಿಡಿಯಬಹುದು ಬಾಯಿ ಸುಡುವದಿಲ್ಲ. ಇದರಂತೆ ಬೆಂಕಿಯನ್ನಾದರೂ ಇಟ್ಟುಕೊಳ್ಳಬಹುದು.

## ಕತ್ತಲೊಳಗೆ ಪುಸ್ತಕವನ್ನು ಓದುವದು

ಕತ್ತಲೆಯಲ್ಲಿ ಪತ್ರಗಳನ್ನು ಓದಬೇಕಾದರೆ ಗೂಗೆಯ ತಲೆಯನ್ನು ತಂದು ಅದನ್ನು ವಲೆಯ ಮೇಲೆ ಇಟ್ಟು ಕೆಳಗೆ ತಪ್ಪದ ದೀಪವನ್ನು ಹಚ್ಚಿ ಇಡಬೇಕು. ಆ ದೀಪದಿಂದ ಆ ಗೂಗೆಯ ತಲೆಗೆ ಬಡೆದ ಕಾಡಿಗೆಯನ್ನು ತಗೆದುಕೊಂಡು ಅದನ್ನು ಕಣ್ಣಿಗೆ ಹಚ್ಚಿಕೊಂಡು ಕತ್ತಲೆಯಲ್ಲಿ ಪತ್ರಗಳನ್ನು ಸಹಜವಾಗಿ ಓದಬಹುದು.

## ಕಾದ ಯಂಣೆಯ ಹಿಡಿಯುವದು

ಕಾದಯಂಣೆಯನ್ನು ಕೈಯಿಂದ ಹಿಡಿಯಬೇಕಾದರೆ ನೀರಿನಲ್ಲಿ ಉಪ್ಪು ಹಾಕಿ ಕಲಿಸಿ ಕೈಗೆ ಎಲ್ಲ ಬುಡಕೂ ಮೇಲೂ ಸರಿಯಾಗಿ ಹಚ್ಚಿಕೊಂಡು ಕಾದಯಂಣೆಯನ್ನು ಹಿಡಿದರೆ ಕೈಸುಡುವದಿಲ್ಲ.

## ನೀರಿನೊಳಗೆ ದೀವಿಗೆ ಉರಿಯುವದು

ನೀರಿನೊಳಗೆ ದೀವಿಗೆಯನ್ನು ಉರಿಸಬೇಕಾದರೆ ಊಚಜೇನಮೇಣವನ್ನು ಕರಗಿಸಿ ಅದರೊಳಗೆ ಗಂಧಕದ ಪುಡಿಯನ್ನು ಹಾಕಿ ಚೆನ್ನಾಗಿ ಅರೆದು ಬತ್ತಿಯನ್ನು ಮಾಡಿ ಆ ಬತ್ತಿಗೆ ಸದರ ಮೇಣ ಮತ್ತು ಗಂಧಕದ ಪುಡಿಯನ್ನು ತಯಾರು ಮಾಡಿದ್ದನ್ನು ಆ ಬತ್ತಿಗೆ ಚೆನ್ನಾಗಿ ಹಚ್ಚಿ ಒಂದು ಪಣತಿಯನ್ನು ತಕೊಂಡು ಅದರಲ್ಲಿ ಆ ಬತ್ತಿಯನ್ನು ಇಟ್ಟು ಆ ಪಣತಿಗೆ ನೀರು ಹಾಕಿ ದೀಪವನ್ನು ಹಚ್ಚಬೇಕು. ಅದು ಉರಿಯುವದು ಯಂಣೆಯ ಅವಶ್ಯಕತೆ ಇರುವದಿಲ್ಲ. ಆ ಬತ್ತಿಯು ಎಲ್ಲಾ ಸುಟ್ಟು ಹೋಗುವ ವರೆಗೂ ಆ ದೀಪವು ತಾನೇ ಉರಿಯುವದು. ಮಳಿಯಲ್ಲಿ ಇಟ್ಟರೂ ಸಹ ಆರುವದಿಲ್ಲ. ಗಾಳಿಗೂ ಹೋಗುವದಿಲ್ಲ ತಾನೇ ಉರಿಯುವದು ಆಶ್ಚರ್ಯ.

## ಲಿಂಬೀ ಹಣ್ಣನ್ನು ಹೆಚ್ಚಿದರೆ ರಕ್ತಬೀಳುವದು

ಲಿಂಬಿಹಣ್ಣನ್ನು ಹೆಚ್ಚಿದರೆ ರಕ್ತವು ಬೀಳುವಂತೆ ಮಾಡಬೇಕಾದರೆ ಕೆಂಪುದಾಸಾಳದ ಹೂವುಗಳನ್ನು ತಂದು ಒಂದು ಚೂರಿಯನ್ನು ತಗೆದು ಕೊಂಡು ಆ ಚೂರಿಯಿಂದ ಆ ಹೂವುಗಳನ್ನು ಕೊಯ್ದು ಕೊಯ್ದು ಅದರ ರಸವನ್ನು ಆ ಚೂರಿಗೆ ಹತ್ತುವಂತೆ ಮಾಡಿ ಒಣಗಿಸಬೇಕು. ಹೀಗೆ ಕೆಲ ವೊಂದು ಸಾರೆ ಮಾಡಿ ಮಾಡಿ ಆ ಚೂರಿಯನ್ನು ಇಟ್ಟಿರಬೇಕು. ಜಾದೂ ಮಾಡಿ ತೋರಿಸುವ ಸಮಯದಲ್ಲಿ ಒಂದು ಹಣ್ಣಾದ ಲಿಂಬೆಯ ಹಣ್ಣನ್ನು ತಂದು ಆ ಚೂರಿಯಿಂದ ಹೆಚ್ಚಿದರೆ ಆ ಚೂರಿಗೆ ಹತ್ತಿದ ರಸವೆಲ್ಲವೂ ರಕ್ತ ವಾಗಿ ಸುರಿಯುವದು.

## ಅರಿವೆಯು ಸುಡದಂತೆ ಮಾಡುವದು

ಅರಿವೆಯು ಸುಡದಂತೆ ಮಾಡಬೇಕಾದರೆ ಬ್ರ್ಯಾಂಡಿಯಲ್ಲಿ ಕರ್ಪುರವನ್ನು ಸಣ್ಣಾಗಿ ಅರೆದು ಅದರಲ್ಲಿ ದಪ್ಪವಾದ ಅರಿವೆಯನ್ನು ಕೆಲವು ಸಾರೆ ನೆನೆಯಿಸಿ ನೆರಳಲ್ಲಿ ಒಣಗಿಸಬೇಕು. ಈ ಅರಿವೆಯನ್ನು ದೀಪಕ್ಕೆ ಹಿಡಿದರೆ ಆ ಅರಿವೆಯು ಸುಡುವದಿಲ್ಲ. ಉರಿಯೂ ಹತ್ತುವದಿಲ್ಲ ಬಹಳ ಹೊತ್ತು ದೀಪವನ್ನು ಹಿಡಿದರೆ ಸುಡುವದಿಲ್ಲ ಉರಿಯುತ್ತದಷ್ಟೆಹೊರ್ತು ಅರಿವೆಯು ಸುಡುವದಿಲ್ಲ.

## ಚೋಳುಗಳನ್ನು ಹಿಡಿದು ಆಡಿಸುವದು

ಚೇಳುಗಳನ್ನು ತಂದು ಹಿಡಕೊಂಡು ಆಡಿಸಬೇಕಾದರೆ ಇದಕ್ಕೆ ಉಪಾ ಯವೇನಂದರೆ ಕೆಲವು ಚೋಳುಗಳನ್ನು ಹಿಡಿದು ತಂದು ಅವುಗಳನ್ನು ಒಂದು ಮಣ್ಣಗಡಿಗೆಯೊಳಗೆ ಹಾಕಬೇಕು. ಅವುಗಳಿಗೆ ಆಹಾರಕ್ಕೋಸ್ಕರವಾಗಿ ಆ ಗಡಿಗೆಯಲ್ಲಿ ಸೆಗಣೆಯನ್ನು ಹಾಕುತ್ತಾ ಇರಬೇಕು. ಅಂದರೆ ಆ ಚೇಳುಗಳು ಆಹಾರದಿಂದ ಬದುಕಿಕೊಂಡಿರುತ್ತವೆ. ತಾವು ಜಾದೂವನ್ನು ಮಾಡುವ

ಕಾಲಕ್ಕೆ ಚೋಳಿನ ವಿಷದಕೊಂಡಿಗೆ ಒಂದು ಕಾಜಿನ ಮಣಿಯನ್ನು ಆ ವಿಷದ ಕೊಂಡಿಗೆ ಹಾಕಿ ಮೇಲೆ ಮೇಣವನ್ನು ಹಚ್ಚಬೇಕು. ಹೀಗೆ ಮಾಡಿದರೆ ಆ ಚೋಳುಗಳು ಕಚ್ಚುವದಿಲ್ಲ ತಾವು ಬೇಕಾದ ಪ್ರಕಾರದಲ್ಲಿ ಆಟವನ್ನು ಆಡಿಸ ಕೊಳ್ಳಬಹುದು-

## ಮಶಿ ಇಲ್ಲದೆ ಬಣ್ಣ ಅಕ್ಷರಗಳನ್ನು ಮೂಡಿಸುವಿಕೆ

ನವಸಾಗರದ ನೀರು ತಗೆದುಕೊಂಡು ಬಳಿಕ ಕಾಗದದ ಮೇಲೆ ಬರೆದು ನೆರಳಲ್ಲಿ ಒಣಗಿಸಬೇಕು. ಅದು ಬಿಳಿ ಕಾಗದದದಂತೆ ಸಾಬೀತ ಕಾಣು ತ್ತದೆ. ಅದನ್ನು ಬೆಂಕಿಯ ಮೇಲೆ ಹಿಡಿದು ಜಳವನ್ನು ಒಡಿಸಿದರೆ ಅವು ಕೆಂಪು ಅಕ್ಷರಗಳಾಗುವವು ಆಕಳ ಹಾಲಿನಲ್ಲಿ ನವಸಾಗರವನ್ನು ಕೂಡಿಸಿ ಕಾಗದದ ಮೇಲೆ ಬರೆದು ಒಣಗಿಸುವದು ಅದು ಬಿಳೇಕಾಗದದ ಹಾಗೆಯೇ ಕಾಣುವದು ಅದನ್ನು ಬೆಂಕಿಯ ಜಳಕ್ಕೆ ಹಿಡಿದು ಬಿಸಿ ಮಾಡಿದರೆ ಹಸರು ಬಣ್ಣದ ಅಕ್ಷರಗಳಾಗುವವು.

## ನೀರು ಹಾಲಾಗುವ ಬೇರೆ ಉಪಾಯ

ಜಿನುಗಾದ ಮಲ್ಲಿನ ಅರಿವೆಯ ತುಂಡುಗಳನ್ನು ಘಟ್ಟಿಯಾದ ತಾಜಾ ಹಾಲಿನಲ್ಲಿ ಕೆಲವು ಸಾರೆ ತೋಯಿಸಿ ಒಣಗಿಸಿ ವತ್ತೆ ಹಾಲಲ್ಲಿ ತೋಯಿಸಿ ಒಣಗಿಸಿ ಹೀಗೆ ಕೆಲ ಕೆಲವು ಸಾರೆ ಮಾಡಿ ವಣಗಿಸಿ ಇಟ್ಟುಕೊಂಡಿರಬೇಕು. ಆ ತುಂಡುಗಳನ್ನು ನೀರು ತುಂಬಿದ ಭಾಂಡೆಯೊಳಗೆ ಹಾಕಿದರೆ ಆ ನೀರುಗಳೆಲ್ಲಾ ಹಾಲಾಗುವವು.

## ಹಕ್ಕಿಗಳನ್ನು ಹಿಡಿಯುವ ಉಪಾಯ

ಹಕ್ಕಿಗಳನ್ನು ಹಿಡಿಯಬೇಕಾದರೆ ಊಚಿಇಂಗನ್ನು ನೀರು ಹಾಕಿ ಚನ್ನಾಗಿ ಅರೆದು ನೀರಾಗುವಂತೆ ತೆಳ್ಳಗಾಗಿ ಮಾಡಬೇಕು. ಅದರಲ್ಲಿ ಕಾಳು ಗಳನ್ನು ನೆನೆಹಾಕಿ ವಣಗಿಸಿ ಇಟ್ಟುಕೊಂಡು ಆ ಕಾಳುಗಳನ್ನು ಯಾವ ಪಕ್ಷಿಗೆ

(ಹಕ್ಕಿಗೆ) ತಿನ್ನಲಿಕ್ಕೆ ಹಾಕುತ್ತೀವೋ ಆ ಹಕ್ಕಿಗಳು ತಿಂದೊಡನೆ ಅವಕ್ಕೆ ಮದಡು ಬರುವದು ಇದರಿಂದ ಅದರ ಚೈತನ್ಯವು ಕಡಿಮೆಯಾಗುವದು. ಆವಾಗ ಆ ಹಕ್ಕಿಯನ್ನು ಸಹಜವಾಗಿ ಹಿಡಿಯಬಹುದು.

## ಹೆಚ್ಚಾಗಿ ಉಣ್ಣುವಂತೆ ಮಾಡುವದು

ಆದಿತ್ಯವಾರ ಅಮವಾಸಿಯ ದಿವಸದ ಮೊದಲನೆಯ ದಿವಸ ಸಾಯಂಕಾಲ ಹೋಗಿ ಆ ಎಕ್ಕೆಯ ಮರಕ್ಕೆ ವಿಧಿಪೂರ್ವಕವಾಗಿ ಪೂಜೆಯನ್ನು ಮಾಡಿ ಮುಂಜಾನೆ ಅಂದರೆ ಆದಿತ್ಯವಾರ ಅಮವಾಸಿಯ ದಿವಸ ಮುಂಜಾನೆ ಹೋಗಿ ಪೂಜೆಯನ್ನು ಮಾಡಿ ಆ ಗಿಡದ ಹೂವುಗಳನ್ನು ಎತ್ತಿಕೊಂಡು ಮಾಲೆಯನ್ನು ಮಾಡಿ ಕೊರಳಲ್ಲಿ ಧರಿಸಿಕೊಂಡು ಊಟ ಮಾಡಲಿಕ್ಕೆ ಕೂತರೆ ದೆವ್ವನಂತೆ ಹೆಚ್ಚಾಗಿ ಊಟವನ್ನು ಮಾಡುವನು. ಇದಕ್ಕೆ ಉತಾರವು ಆ ಕೊರಳೊಳಗಿನ ಮಾಲೆಯನ್ನು ತಗೆಯಲು ನಿಲ್ಲುವದು.

## ಆನೆಯ ಹಾಗೆ ಕಾಣಿಸುವದು

ಪುಷ್ಯಾ ನಕ್ಷತ್ರ ಬೃಹಸ್ಪತಿವಾರ ದಿವಸ ಬಂದಾಗ ಆ ದಿವಸ ಅಂಕೋಲಿ ಬೀಜಗಳನ್ನು ತಂದು ಸತ್ತ ಆನೆಯ ಬಾಯೊಳಗೆ ಇಟ್ಟು ಭೂಮಿಯಲ್ಲಿ ಹುಗಿದು ಮೇಲೆ ನೀರನ್ನು ಹಾಕುತ್ತಿರಬೇಕು. ಅವು ಗಿಡಗಳಾಗಿ ಫಲವಾಗುವವು. ಆ ಗಿಡದ ಬೀಜಗಳನ್ನು ತಗೆದುಕೊಂಡು ಪಂಚಲೋಹದ ತಗಡಿನಲ್ಲಿ ಸುತ್ತಿಕೊಂಡು ಬಾಯಲ್ಲಿ ಇಟ್ಟುಕೊಂಡರೆ ಆನೆಯಂತೆ ಮದಉಳ್ಳವನಾಗುವನು

## ಬಿಳಿಯ ಅಕ್ಷರಗಳನ್ನು ಮಾಡಿತೋರಿಸುವದು

ಒಂದು ಕಾಗದವನ್ನು ತಗೆದುಕೊಂಡು ಅದರ ಮೇಲೆ ಮಂದಗಾಗಿರುವ ಹೊಸ ಸುಣ್ಣದ ನೀರಿನಿಂದಾ ಆ ಕಾಗದದ ಮೇಲೆ ಬರೆದು ಅದನ್ನು ಚನ್ನಾಗಿ

ಆರುವಂತೆ ಒಣಗಿಸಬೇಕು. ಆವಾಗ ಆ ಕಾಗದವು ಮೊದಲಿನಂತೆಯೇ ಸಾಬೀತವಾಗಿಯೇ ಕಾಣುವದು. ಆ ಮೇಲೆ ಒಂದು ಫಾತ್ರೆಯಲ್ಲಿ ನೀರು ಹಾಕಿ ಅದರಲ್ಲಿ ಸದರೀ ಕಾಗದವನ್ನು ಎದ್ದಿ ತೋಯಿಸಿಧರೆ ಆವಾಗ ಬಿಳೇ ಅಕ್ಷರಗಳು ಆ ಕಾಗದದಲ್ಲಿ ಸ್ಪಷ್ಟವಾಗಿ ಕಾಣುತ್ತವೆ ಎಲ್ಲರಿಗೂ ತೋರಿಸಬಹುದು.

## ಎಲ್ಲಾ ತರದ ಬಂಣದ ಅಕ್ಷರ ಮಾಡುವದು

ಒಂದು ಬಿಳೇಕಾಗದವನ್ನು ತಗೆದುಕೊಂಡು ಆ ಕಾಗದದ ಮೇಲೆ ಲಿಂಬಿಹಣ್ಣಿನ ರಸದಿಂದ ತಮಗೆ ತಿಳಿದ ಪ್ರಕಾರ ಎನನ್ನಾದರೂ ಅದರಲ್ಲಿ ಬರೆಯಬೇಕು. ಅದನ್ನು ಚನ್ನಾಗಿ ನೆರಳಲ್ಲಿ ಒಣಗಿಸಬೇಕು. ಅದು ಎಲ್ಲಾ ಒಣಗಿದ ಬಳಿಕ ಆ ಕಾಗದವನ್ನು ನೋಡಿದರೆ ಅದರಲ್ಲಿ ಏನೂ ಕಾಣಿಸುವದಿಲ್ಲ ಸ್ವಾಭಾವಿಕವಾಗಿ ಮೊದಲಿನಂತೆಯೇ ಆ ಕಾಗದವು ಕಾಣುವದು ಅದನ್ನು ಬೆಂಕಿಯ ಜಳಕ್ಕೆ ಹಿಡಿದರೆ ಎಲ್ಲಾ ಬಂಣದ ಅಕ್ಷರಗಳಾಗುವವು.

## ಹಳದಿ ಅಕ್ಷರಗಳನ್ನು ಮಾಡುವದು

ಬಿಳೇಕಾಗದವನ್ನು ತಕ್ಕೊಂಡು ಅದರ ಮೇಲೆ ಕಾಚಿ ಗಡ್ಡೆಯ ರಸವನ್ನು ತಯಾರ ಮಾಡಿಕೊಂಡು ಆ ಮಂದವಾದ ರಸದಿಂದ ಆ ಕಾಗದದ ಮೇಲೆ ಅಕ್ಷರಗಳನ್ನು ಬರೆದು ಚನ್ನಾಗಿ ಒಣಗಿಸಬೇಕು. ಒಣಗಿದ ಮೇಲೆ ಆ ಕಾಗದವನ್ನು ನೋಡಿದರೆ ಆ ಕಾಗದದಲ್ಲಿ ಬರೆದ ಅಕ್ಷರಗಳು ಕಾಣಿಸುವದಿಲ್ಲ. ಆ ಕಾಗದವನ್ನು ಉರಿಯ ಜಳಕ್ಕೆ ಹಿಡಿದು ಅದಕ್ಕೆ ಜಳ ಬಡಿದರೆ ಅದರಲ್ಲಿ ಹಳದಿ ಅಕ್ಷರಗಳು ಕಾಣುವವು.

## ಬರೆದ ಅಕ್ಷರವನ್ನು ಮಾಯ ಮಾಡುವದು

ಬಳಿಗಾರ, ನವಸಾಗರ, ಶಂಕಪಾಕ್ಷಾಣ. ಈ ಮೂರನ್ನು ತಗೆದುಕೊಂಡು ಬಂದು ಇವನ್ನು ಸಮಭಾಗವಾಗಿ ತಗೊಂಡು ಕಲ್ಲ ಮೇಲೆ ಹಾಕಿ

ಚನ್ನಾಗಿ ಅರೆದು ಯಿಟ್ಟುಕೊಂಡು ನಂತರ ಒಂದು ಅಕ್ಷರವನ್ನು ಬರೆದ ಕಾಗದವನ್ನು ತಗೆದು 'ಕೊಂಡು ಆ' ಕಾಗದ ಮೇಲೆ ಸದರಿ ಚೂರ್ಣವನ್ನು ಹಾಕಿ ತಿಕ್ಕಿದರೆ ಆ ಕಾಗದಲ್ಲಿದ್ದ ಅಕ್ಷರ ಗಳೆಲ್ಲವೂ ಅಳಿಕಿ ಹೋಗುವವು.

## ಕಳೆದ ಉಂಗರವನ್ನು ತಿರುಗಿ ತರಿಸುವದು

ವಂದೇ ನಮೂನೆಯು ಎರಡು ಮೋಹರಿನ ಉಂಗರವನ್ನು ಮಾಡಿಸ ಬೇಕು ಆ ಎರಡು ಉಂಗರಗಳಲ್ಲಿ ವಂದು ಉಂಗರವನ್ನು ಕಪ್ಪು ಬಂಣದ ವಂದು ಬಾಟ್ಲೆಯನ್ನು ತಂದು ಅದರಲ್ಲಿ ಯಾರಿಗೂ ತಿಳಿಯದ ಹಾಗೆ ಹಾಕಿ ಆ ಬಾಟ್ಲೆಯನ್ನು ಅಲ್ಲೆ ತನ್ನ ಬಳಿಯಲ್ಲಿಯೇ ಎಲ್ಲರಿಗೂ ಕಾಣುವಂತೆ ಇಟ್ಟು ಕೊಳ್ಳಬೇಕು ಮತ್ತೊಂದು ಉಂಗರವನ್ನು ತಗೆದು ಅಲ್ಲಿ ಕುಳಿತಿರುವ ಎಲ್ಲ ಜನರಿಗೂ ತೋರಿಸಬೇಕು ನೋಡಿರಿ ಈ ಉಂಗರವನ್ನು ಬಾವಿಯೊಳಗೆ ಹಾಕಿ ಬನ್ನಿರಿ ಇದನ್ನು ತಿರುಗಿ ಇಲ್ಲಿಗೆ ತರಿಸಿ ತೋರಿಸುತ್ತೇನೆ ಅಂತಾ ಅವ ರೆಲ್ಲರಿಗೂ ಹೇಳಿ ಆ ಉಂಗರವನ್ನು ಅಲ್ಲಿ ಕೂಳಿತಿರುವ ವಬ್ಬನನ್ನು ಕರೆದು ಅವನ ಕೈಯಲ್ಲಿ ಆ ಉಂಗರವನ್ನು ಕೊಟ್ಟು ಇದನ್ನು : ಬಾವಿಯಲ್ಲಿ ಹಾಕಿ ಬಾಯಿಂದು ಅವನಿಗೆ ಹೇಳಿ ಆ ಉಂಗರವನ್ನು ಅವನ ಕೈಯಲ್ಲಿ ಕೊಡಬೇಕು. ಅವನು ಹೋಗಿ ಅದನ್ನು ಭಾವಿಯಲ್ಲಿ ಚಲ್ಲಿಬಂದ ಮೇಲೆ ಇಗೋ ನೋಡಿರಿ. ಆ ಭಾವಿಯಲ್ಲಿ ಹಾಕಿಬಂದ ಉಂಗರವನ್ನು ಇಲ್ಲಿ ನನ್ನ ಮಂತ್ರ ಶಕ್ತಿಯಿಂದ ಅದನ್ನು ತರಿಸುತ್ತೇನೆ ಎಂದು ಒದರಿ ಎಲ್ಲರಿಗೂ ಕೇಳುವಂತೆ ಹೇಳಬೇಕು. ಆ ಮೇಲೆ ತನ್ನ ಮುಂದೆ ಇಟ್ಟು ಕೊಂಡಿರುವ ಬಾಟ್ಲೆಯನ್ನು ಕೈಯಲ್ಲಿ ತಗೆದು ಕೊಂಡು ಒಂದು ವಸ್ತ್ರವನ್ನು ತನ್ನ ಮೋರೆಗೆ ಮುಸುಕು ಹಾಕಿಕೊಂಡು ತನ್ನ ಕೈಯ ಚಮತ್ಕಾರದಿಂದ ಆ ಬಾಟ್ಲೆಯೊಳಗಿನ ಉಂಗರವನ್ನು ಹಾಗೆಯೇ ತಗೆದುಕೊಂಡು ಆ ಮೇಲೆ ತನ್ನ ಮುಸುಕು ತಗೆದು ಇಗೋ ನೋಡಿರಿ ಆ ಉಂಗರವನ್ನು ಇಲ್ಲಿ ತರಿಸಿದ್ದೇನೆ ಎಂದು ಹೇಳಿ ಎಲ್ಲರಿಗೂ ಆ ಉಂಗರವನ್ನು ತೋರಿಸಬೇಕು. ಇದರಲ್ಲಿ ತನ್ನ ಕೈ ಚಮತ್ಕಾರವೇ ಮುಖ್ಯವಾಗಿರು ವದು.

## ನೀರನ್ನು ಘಟ್ಟಿಯಾಗಿ ಮಾಡುವದು

ತಾವರೆಯ ಬಳ್ಳಿಯನ್ನು ತಂದು ಅದನ್ನು ಎಲೆಸಹಿತವಾಗಿ ಕಲ್ಲ ಮೇಲೆ ಹಾಕಿ ಚನ್ನಾಗಿ ಸಣ್ಣಾಗುವಂತೆ ಅರೆದು ಅದನ್ನು ಒಂದು ಅರಿವೆಯಲ್ಲಿ ಹಾಕಿ ರಸವನ್ನು ಹಿಂಡಿಕೊಂಡು ಇಟ್ಟುಕೊಳ್ಳಬೇಕು. ಆ ಮೇಲೆ ಒಂದು ಹೊಸ ಮಡಿಕೆಯನ್ನು ತಂದು ಅದಕ್ಕೆ ಹೊರಗೂ ಒಳಗೂ ಸದರಿ ರಸವನ್ನು ಹಚ್ಚಿ ಒಣಗಿಸಬೇಕು. ಇದರಂತೆಯೇ ಕೆಲವು ದಿವಸಗಳ ತನಕ ರಸವನ್ನು ಹಚ್ಚಿ ಹಚ್ಚಿ ಒಣಗಿಸಿ ತಯಾರ ಮಾಡಬೇಕು. ತಾವು ಜಾದೂ ಮಾಡಿ ತೋರಿಸುವ ಸಮಯದಲ್ಲಿ ಮೂರು ತಾಸು ಮೊದಲೇ ಆ ಮಡಿಕೆಯೊಳಗೆ ನೀರು ಹಾಕಿ ಇಟ್ಟಿರಬೇಕು. ಆ ಮಡಿಕೆಯ ಬಾಯಿಗೆ ಒಂದು ಹಗ್ಗವನ್ನು ಕಟ್ಟಿ ಜಂತಿಗೆ ಜೋತಾಡುವಂತೆ ಆ ಮಡಿಕೆಯನ್ನು ತೂಗ ಹಾಕಬೇಕು. ಆ ಮೇಲೆ ಆ ಗಡಿಗೆಯನ್ನು ಒಡೆದು ಕಡೆಗೆ ತೆಗೆಯಬೇಕು. ಅದರಲ್ಲಿ ಇದ್ದ ನೀರು ಘಟ್ಟಿಯಾಗಿ ಮುದ್ದಿಯಾಗಿರುತ್ತದೆ. ಅದು ಹಾಗೆಯೇ ಜೋತಾಡುತ್ತದೆ. ಇದನ್ನು ಜೋಕೆಯಿಂದ ಮಾಡಬೇಕು.

## ಎಲ್ಲ ಜೀವಿಗಳಂತೆ ಮಾಡುವದು

ಎಲ್ಲ ಜೀವಿಗಳಂತೆ ಕಾಣಬೇಕಾದರೆ ಮುಖ್ಯವಾಗಿ ಆದಿತ್ಯವಾರ ದಿವಸ ಪುಷ್ಯಾ ನಕ್ಷತ್ರವು ಇದ್ದಾಗ ಅಂಕೋಲೆಯ ಬೀಜಗಳನ್ನು ಶುಚಿರ್ಭೂತನಾಗಿ ತೆಗೆದುಕೊಂಡು ಬಂದು ಇಟ್ಟುಕೊಳ್ಳಬೇಕು. ಆ ಬೀಜಗಳನ್ನು ನೀವು ಯಾವ ಪ್ರಾಣಿಗಳ ಬಾಯಲ್ಲಿ ಇಡುತ್ತೀರೋ ಅದೇ ಪ್ರಕಾರದ ಪ್ರಾಣಿಗಳಾಗುತ್ತೀರೆಂದು ತಿಳಿಯಬೇಕು. ಯಾವ ಸತ್ತ ಜೀವಿಗಳ ಬಾಯಿಯಲ್ಲಿಅಂಕೋಲಿಯ ಬೀಜಗಳನ್ನು ಇಟ್ಟು ಭೂಮಿಯಲ್ಲಿ ಹೂಗಿದು ದಿನಾಲೂ ನೀರು ಹಾಕುತ್ತಿರಬೇಕು. ಆ ಬೀಜಗಳು ಮೊಳೆತು ಗಿಡಗಳಾಗುತ್ತವೆ. ಆ ಗಿಡದೊಳಗಿನ ಬೀಜಗಳನ್ನು ತೆಗೆದುಕೊಂಡು ತ್ರಿಲೋಹದ ತಗಡಿನಲ್ಲಿ ಹಾಕಿ ಮಡಿಚಿ ಬಾಯಲ್ಲಿ ಇಟ್ಟುಕೊಂಡರೆ ನೀವು ಯಾವ ಪ್ರಾಣಿಯ ಬಾಯಲ್ಲಿ ಆ

ಬೀಜಗಳನ್ನು ಇಟ್ಟು ಹುಗಿದಿದ್ದರೋ ಅದೇ ಪ್ರಾಣಿಯ ಹಾಗೆ ಕಾಣಿಸುವದು. ಆದ್ದರಿಂದ ತಮಗೆ ಬೇಕಾದ ಪ್ರಾಣಿಗಳು ಸತ್ತಾಗ ಅವುಗಳ ಬಾಯಿಯಲ್ಲಿ ಸದರಿ ಬೀಜಗಳನ್ನು ಇಟ್ಟು ಹುಗಿದು ಅದಕ್ಕೆ ದಿನಾಲೂ ನೀರು ಹಾಕುತ್ತ ಹೋಗಬೇಕು. ಅವು ಗಿಡಗಳಾದ ಮೇಲೆ ಅದರ ಬೀಜಗಳನ್ನು ತಂದು ಸಂಗ್ರಹಿಸಿ ಇಟ್ಟುಕೊಳ್ಳಬೇಕು. ಪ್ರಸಂಗಾನುಸಾರ ಅದರ ಉಪಯೋಗವನ್ನು ಮಾಡಿಕೊಳ್ಳಬೇಕು.

## ಬೆಂಕಿ ಇಲ್ಲದೆ ಜೋಳವನ್ನು ಅರಳು ಮಾಡುವದು

ಒಂದು ಹಿಡಿ ಜೋಳವನ್ನು ತೆಗೆದುಕೊಂಡು ಒಂದು ಪಾತ್ರೆಯಲ್ಲಿ ನೀರನ್ನು ಹಾಕಿ ಅದರಲ್ಲಿ ಆ ಜೋಳವನ್ನು ಹಾಕಿ ೨-೩ ದಿವಸ ಅದರಲ್ಲಿಯೇ ಬಿಡಬೇಕು. ಆ ಮೇಲೆ ಅವನ್ನು ಕಡೆಗೆ ತೆಗೆದು ಎಕ್ಕೆಯ ಗಿಡದ ಹಾಲಿನಲ್ಲಿ ಕಲಿಸಿ ಇಡಬೇಕು. ಮರು ದಿವಸ ಆ ಜೋಳಗಳನ್ನು ಕಡೆಗೆ ತೆಗೆದುಕೊಂಡು ಕಳ್ಳಿಯ ಹಾಲಿನಲ್ಲಿ ಕಲಿಸಿ ಇಡಬೇಕು. ಮರುದಿವಸ ಕಡೆಗೆ ತೆಗೆದು ನೆರಳಲ್ಲಿಯೇ ಒಣಗಿಸಬೇಕು. ಈ ಪ್ರಕಾರ ತಯಾರ ಮಾಡಿದ ಜೋಳಗಳನ್ನು ತಾವು ಜಾದು ಮಾಡಿ ತೋರಿಸುವ ಸಮಯದಲ್ಲಿ ಆ ಜೋಳವನ್ನು ಬೆಂಕಿ ಇಲ್ಲದೆ ಅರಳುಮಾಡುತ್ತೇನೆ ಎಂದು ಹೇಳಿ ಎಲ್ಲರಿಗೂ ತೋರಿಸಬೇಕು. ಆ ಮೇಲೆ ಆ ಜೋಳವನ್ನು ತನ್ನ ಕೈ ಮುಷ್ಟಿಯಿಂದ ಘಟ್ಟಿಯಾಗಿ ಕಾವು ಬರುವಂತೆ ಮುಚ್ಚಬೇಕು. ಅವು ನಿಮ್ಮ ಮೈ-ಕೈಯ ಕಾವಿಗೆ (ಉಷ್ಣತೆಗೆ) ಅರಳಾಗಿ ಬಿಡುವವು. ಅದನ್ನು ತೆಗೆದು ಎಲ್ಲರಿಗೂ ತೋರಿಸಬೇಕು. ಆಶ್ಚರ್ಯ,

## ಬಾಯಲ್ಲಿ ಬೆಂಕಿಯನ್ನು ಹಿಡಿಯುವದು

ಆಕಳ ಕಾರ ಮತ್ತು ನವಸಾಗರ ಇವೆರಡನ್ನು ಬಾಯಲ್ಲಿ ಹಾಕಿಕೊಂಡು ಕಸಕಸ ತಿಂದು ಉಗಳಿ ಬಿಡಬೇಕು. ಆ ಮೇಲೆ ತೊಗರಿ ಕಟಿಗೆಯಿಂದಾದ ಬೆಂಕಿಯನ್ನು ಬಾಯಲ್ಲಿ ಇಟ್ಟುಕೊಳ್ಳಬಹುದು. ಬಾಯಿ ಸುಡುವದಿಲ್ಲ.

## ಕತ್ತಿ ಕಠಾರಿಯ ಮೇಲೆ ಅಕ್ಷರ ಮೂಡಿಸುವದು

ಕತ್ತಿ-ಕಠಾರಿಯ ಮೇಲೆ ವಿಳಾಸವನ್ನು ಹಾಕಬೇಕಾದರೆ ಅದರ ಮೇಲೆ ಮೇಣವನ್ನು ಚನ್ನಾಗಿ ಕರಗಿಸಿ ಒಂದು ಬಟ್ಟಲದಲ್ಲಿ ಹಾಕಿ ಅದರಿಂದ ಆ ಆಯುಧಗಳ ಮೇಲೆ ತಮಗೆ ಬೇಕಾದ್ದನ್ನು ಅಥವಾ ವಿಳಾಸವನ್ನು ಇಲ್ಲವೆ ಯಾವದಾದರೊಂದು ಚಿತ್ರವನ್ನಾದರೂ ಬರೆಯಬೇಕು. ಆ ಮೇಲೆ ಹಚ್ಚುವ ಜೀನಸು ಏನೆಂದರೆ ಮೈಲ ತುತ್ತೀವು ಮತ್ತು ನವಸಾಗರ ಇವೆರಡನ್ನು ಲಿಂಬಿ ಹುಳಿಯ ರಸದಲ್ಲಿ ಚೆನ್ನಾಗಿ ಅರೆದು ಆಯುಧಗಳ ಮೇಣದಿಂದ ಬರೆದದ್ದರ ಮೇಲೆಯೇ ಔಷಧವನ್ನು ಅಂದರೆ ಲಿಂಬಿಹುಳಿಯನ್ನು ಅದರ ಮೇಲೆ ಚನ್ನಾಗಿ ಸವರಬೇಕು. ಅದನ್ನು ಬಿಸಿಲಿನಲ್ಲಿ ಕೆಲ ಹೊತ್ತು ಇಟ್ಟು ಒಣಗಿಸಬೇಕು. ಒಣಗಿದ ಮೇಲೆ ಅದರಲ್ಲಿ ಬರೆದದ್ದು ಕಾಣಿಸುವದು.

## ಹೆಚ್ಚು ಅನ್ನವನ್ನು ಭೋಜನ ಮಾಡುವದು

ರವಿವಾರ ದಿವಸ ಪುಷ್ಯ ನಕ್ಷತ್ರ ವಿದ್ದಾಗ ಆರೆಯ ಗಿಡಕ್ಕೆ ಪೂಜೆಯನ್ನು ಮಾಡಿ ಬರಬೇಕು. ಮರು ದಿವಸ ಸೋಮವಾರ ದಿವಸ ಸೂರ್ಯೋದಯ ಕಾಲದಲ್ಲಿ ಶುಚಿರ್ಭೂತನಾಗಿ ಮೌನದಿಂದ ಹೋಗಿ ಆ ಗಿಡದ ಚಿಗರುಗಳನ್ನು ತಂದು ತನ್ನ ಬಲ ಭುಜದಲ್ಲಿ ಕರೇ ದಾರದಿಂದ ಅಗಲಿ ಅಥವಾ ಹಸರು ದಾರ ದಿಂದಾಗಲೀ ಬಲ ತೋಳಿನಲ್ಲಿ ಕಟ್ಟಿಕೊಂಡು ಆರಾಮವಾಗಿ ಕೂತುಕೊಂಡು ಭೋಜನವನ್ನು (ಊಟವನ್ನು) ಮಾಡ ತೊಡಗಿದರೆ ಎಷ್ಟು ಉಂಡರೂ ಸಾಕಾಗುವದಿಲ್ಲ. ನೀಡತಕ್ಕವರು ನೀಡಿ ನೀಡಿ ಸಾಕಾಗಿ ಹೋಗುವರು. ಮನಿಯೊಳಗಿನ ಅನ್ನವೂ ತೀರಿ ಹೋಗುವದು.

## ಹಸಿವೆ ಆಗಬಾರದೆಂಬುದಕ್ಕೆ

ತುಳಶಿಯ ಬೀಜ, ಗೊಳಗೊಳಕೆಯ ಬೀಜ, ಬಂಗಿಯ ಬೀಜ, ವಿಳೀ ದೆಲೆಯ ಸಮೂಲ(ಬಳ್ಳಿ) ಈ ನಾಲ್ಕು ಜೀನಸುಗಳನ್ನು ಸಣ್ಣಾಗಿ ಪುಡಿಮಾಡಿ

ಆಡಿನ ಹಾಲು ಹಾಕಿ ಅರೆದು ಮುದ್ದಿಯನ್ನು ಮಾಡಿ ಒಂದು ಗದ್ಯಾಣದಂತೆ ಒಂದೊಂದು ಗುಳಿಗೆಗಳನ್ನು ಮಾಡಿ ಇಟ್ಟಿರಬೇಕು. ಆ ಗುಳಿಗೆಗಳನ್ನು ದಿನಾಲು ಮುಂಜಾನೆ ಒಂದು ಗುಳಿಗೆಯನ್ನು ತಿಂದು ಮೇಲೆ ಹಾಲು ಕುಡಿಯಬೇಕು. ಹಸಿವೆಯು ಆಗುವದಿಲ್ಲ. ತಡೆಯುವದು.

## ಆಗಿಂದಾಗ ಪೈರು ಬೆಳಿಸಿ ತೋರಿಸುವದು

ಆಗಿಂದಾಗ ಪೈರನ್ನು ಬೆಳಿಸಿ ಎಲ್ಲರಿಗೂ ತೋರಿಸಬೇಕಾದರೆ ಮುಂಗಾರಿಯ ಮಳೆಯಲ್ಲಿ ಬೀಳುವ ಆಣೆಕಲ್ಲುಗಳನ್ನು ಬಹಳವಾಗಿ ಹಿಡಕೊಂಡು ಅವುಗಳನ್ನು ಒಂದು ಬಾಟ್ಲಿಯಲ್ಲಿ ಹಾಕಿ ಇಟ್ಟುಕೊಂಡಿರಬೇಕು. ಆ ನೀರಿನಲ್ಲಿ ಮುಂಜಾನೆ ರಾಗಿಯನ್ನು ನೆನೆ ಹಾಕಿ ರಾತ್ರಿ ತೆಗೆದು ಒಣಗಿಸಬೇಕು. ಹೀಗೆ ಏಕೂ ಪ್ರಕಾರ ಒಂದು ವಾರದ ವರೆಗೂ ಮುಂಜಾನೆ ಆ ಆಣೆಕಲ್ಲಿನ ನೀರಿನಲ್ಲಿ ನೆನೆ ಹಾಕುವದು· ರಾತ್ರಿ ತೆಗೆದು ಒಣಗಿಸುವದು. ಇದೇ ಪ್ರಕಾರ ಒಂದು ವಾರದ ವರೆಗೂ ಮಾಡಬೇಕು. ಆ ಮೇಲೆ ತಾವು ಜಾದೂ ಮಾಡಿ ತೋರಿಸುವ ಸಮಯದಲ್ಲಿ ಆ ರಾಗಿಯನ್ನು ತೆಗೆದುಕೊಂಡು ಈಗಿಂದೀಗಲೇ ರಾಗಿಯ ಪೈರನ್ನು ಮಾಡಿ ತೋರಿಸುತ್ತೇನೆಂದು ಹೇಳಿ ಭೂಮಿಯಲ್ಲಿ ಮಡಿಯನ್ನು ಮಾಡಿ ಆ ರಾಗಿಯ ಬೀಜಗಳನ್ನು ಹಾಕಿ ಮೇಲೆ ನೀರು ಸಿಂಪಡಿಸಬೇಕು. ಸ್ವಲ್ಪ ನೆನೆದೊಡನೆಯೇ ರಾಗಿಯ ಪೈರು ಮೊಳೆತು ಕಾಣಲಾರಂಭಿಸುವವು. ಈ ತಮಾಷೆಯು ಆಶ್ಚರ್ಯಕರವಾದದ್ದು.

## ಗುಬ್ಬಿಯನ್ನು ಕುಣಿಸುವದು

ಒಂದು ಪ್ಲಾಸ್ಟಿಕ್ಕಿನ ಗೊಂಬೆಯನ್ನು ತೆಗೆದುಕೊಂಡು ಒಂದು ಅದರ ಕಾಲಿಗೆ ಒಂದು ಉದ್ದವಾದ ಕುದುರೆಯ ಜವೆಯನ್ನು ಕಟ್ಟಬೇಕು. ನಂತರ ಒಂದು ಮಣ್ಣಿನ ಅಗಲವಾದ ಪಾತ್ರೆಯನ್ನು ತಗೊಂಡು ಆ ಪಾತ್ರೆಯ ಕುತ್ತಿಗೆಯೊಳಗೆ ಯಾರಿಗೂ ಕಾಣದಂತೆ ಕುದುರೆಯ ಜವೆಯು ಹಿಡಿಯು

ವಷ್ಟೇ ಒಂದು ತೂತನ್ನು ತೆಗೆಯಬೇಕು. ತಾನು ಜಾದೂ ಮಾಡಿ ತೋರಿಸುವ ಸಮಯದಲ್ಲಿ ಆ ಪಾತ್ರೆಯೊಳಗೆ ನೀರು ಹಾಕಿ ತನ್ನ ಕೈ ಚಮತ್ಕಾರದಿಂದ ಆ ಗುಬ್ಬಿಯ ಕಾಲಿಗೆ ಕಟ್ಟಿರುವ ಕುದುರೆಯ ಜವೆಯನ್ನು ಆ ಮಣ್ಣಿನ ಪಾತ್ರೆಯ ಕುತ್ತಿಗೆಯಲ್ಲಿ ತೆಗೆದಿರುವ ತೂತಿನೊಳಗೆ ಹಾಯಿಸಿಕೊಂಡು ತನ್ನ ಕಾಲ ಹೆಬ್ಬೆರಳಿಗೆ ಸುತ್ತಿಕೊಂಡು ಇಗೋ ನೋಡಿರಿ ಈ ಗುಬ್ಬಿಯನ್ನು ನೀರಲ್ಲಿ ಕುಣಿದಾಡಿಸುತ್ತೇನೆ ಎಂದು ಹೇಳಿ ತನ್ನ ಕಾಲಲ್ಲಿರುವ ಕುದುರೆಯ ಜವೆಯನ್ನು ಜಗ್ಗುತ್ತಲೂ, ಸಡಿಲು ಬಿಡುತ್ತಲೂ ಮಾಡಿದರೆ ಆ ಗುಬ್ಬಿಯು ಆ ನೀರಲ್ಲಿ ಮುಳುಗುವದೂ ಏಳುವದೂ ಮಾಡತೊಡಗುವದು. ಇದನ್ನು ನೋಡಿದವರೆಲ್ಲರೂ ಆಶ್ಚರ್ಯಪಡುವರು.

## ಬಾಯಲ್ಲಿ ಉರಿ ಮಾಡಿ ತೋರಿಸುವದು

ಪೆಟ್ಲ ಉಪ್ಪಿನಲ್ಲಿ ಒಂದು ದಪ್ಪವಾದ ದಾರವನ್ನು ನೆನೆಯಿಟ್ಟು ಅದನ್ನು ಮರುದಿವಸ ಕಡೆಗೆ ತಗೆದು ಸೂರ್ಯಪುಟವನ್ನು ಕೊಟ್ಟು ಒಣಗಿಸಬೇಕು. ಮತ್ತು ಒಂದು ತಾಳೇಗಿಡದ ಹಸೇಗರಿಯನ್ನು ತಂದು ಇಟ್ಟುಕೊಂಡಿರಬೇಕು. ತಾವು ಜಾದೂ ಮಾಡುವ ಸಮಯದಲ್ಲಿ ಔಷಧದಿಂದ ತಯಾರ ಮಾಡಿಟ್ಟ ಆ ದಾರವನ್ನು ತಗೆದುಕೊಂಡು ಅದಕ್ಕೆ ಬೆಂಕಿಯನ್ನು ಹಚ್ಚಿದರೆ ಅದು ನಿಗಿನಿಗಿ ಕೆಂಡದಂತೆ ಆಗುವದು ಆ ಕೆಂಡವನ್ನು ಹಸಿ ತಾಡವಾಲೆಯ ಗರಿಯಲ್ಲಿ ಇಟ್ಟ ಮೂರು ಭಾಗ ಆ ಕೆಂಡವನ್ನು ಮುಚ್ಚಬೇಕು ಒಂದು ಭಾಗವನ್ನು ಹಾಗೇ ಜನರಿಗೆ ಕಾಣುವಂತೆ ಹಾಗೇ ಬಿಡಬೇಕು. ಆ ತಾಡವಾಲಿ ಸಹಿತವಾಗಿ ಮುಚ್ಚಿದ್ದನ್ನು ಬಾಯಲ್ಲಿ ಇಟ್ಟುಕೊಂಡು ಹೊರಗೆ ಉಸುರು ಬಿಟ್ಟರೆ ಆ ಖುಲ್ಲಾ ಇರುವ ದಾತದ ಬೆಂಕಿಯು ಆ ಉಸುರಿನ ಗಾಳಿಗೆ ಅದು ಮತ್ತಿಷ್ಟು ನಿಗಿನಿಗಿ ಕೆಂಡವಾಗಿ ನೋಡುವವರಿಗೆ ಭಯಂಕರವಾಗಿ ಆ ಬೆಂಕಿಯು ಕಾಣುವದು. ಹೀಗೆ ಉಸುರು ಹೊರಗೆ ಬಿಟ್ಟ ಹಾಗೆ ಆ ಬೆಂಕಿಯ ಉರಿಯು ಮತ್ತಿಷ್ಟು ಹೆಚ್ಚಾಗುತ್ತ ಹೋಗುವದು ನೋಡುವವರಿಗೆ ಬಹು ಆಶ್ಚರ್ಯವಾಗಿ ಕಾಣುವದು. ಇಂಥ ಎಲ್ಲ ಕೃತಿಗಳನ್ನು ಮೊದಲು ಮನೆಯಲ್ಲಿ ಸಾಧನ

ಮಾಡಿಕೊಂಡು ನಂತರ ಹೊರಗೆ ಪ್ರಾಯೋಗಿಸಲ್ಪಡಬೇಕು. ಒಮ್ಮೆ
ಹೊರಗೆ ಪ್ರಯೋಗಿಸಬಾರದು.

## ಮನೆಯಲ್ಲಿ ಓತಿಕಾಟಿಗಳು ಕಾಣುವಂತೆ ಮಾಡುವದು

ರವಿವಾರ ದಿವಸ ಪುಷ್ಯಾನಕ್ಷತ್ರವಿದ್ದಾಗ ಒಂದು ಸತ್ತ ಓತಿಕಾಟವನ್ನು
ತಂದು ಅದರ ಬಾಯಲ್ಲಿ ವಿಲಾಯತಿ ಹತ್ತಿಕಾಳ ಬೀಜಗಳನ್ನು ಹಾಕಿ ನೆಲದಲ್ಲಿ
ಹುಗಿದು ಅದಕ್ಕೆ ದಿನಾಲೂ ನೀರನ್ನು ಹಾಕುತ್ತಿರಬೇಕು ಅದರಿಂದ ಆ ಬೀಜ
ಗಳು ಮೊಳೆತು ಸಸಿಯಾಗಿ ದೊಡ್ಡ ಗಿಡಗಳಾಗುತ್ತವೆ. ಆ ಮೇಲೆ ಆ ಗಿಡ
ದೊಳಗಿನ ಹತ್ತಿಯನ್ನು ತಗೆದುಕೊಂಡು ಬತ್ತಿಗಳನ್ನು ಮಾಡಿ ಒಂದು ಹೊಸ
ಪಣತಿಯನ್ನು ತೆಗೆದುಕೊಂಡು ಬಂದು ಅದರಲ್ಲಿ ಕುಸುಬೆಯಿಂದಾದ ಯಂ
ಯನ್ನು ಆ ಹೊಸ ಪಣತೆಯಲ್ಲಿ ಹಾಕಿ ಅಧರಲ್ಲಿ ಸದರಿ ಬತ್ತಿಗಳನ್ನು ಹಾ
ರಾತ್ರಿ ಕಾಲದಲ್ಲಿ ದೀಪವನ್ನು ಹಚ್ಚಿದರೆ ಅದು ಉರಿಯಲಾರಂಭಿಸುವದು.
ಆ ದೀಪದ ಬೆಳಕು ಎಲ್ಲಿಯ ವರೆಗೆ ಬಿದ್ದಿರುವದೋ ಅಲ್ಲಿಯ ವರೆಗೂ ಮನೆ
ತುಂಬ ಎಲ್ಲೆಡೆಗೂ ವಿಶೇಷ ಓತಿಕಾಟಗಳೇ ಕಾಣಿಸುತ್ತವೆ. ಇದನ್ನು ನೋಡಿ
ದವರಿಗೆಲ್ಲರಿಗೂ ಭಯಪ್ರಾಪ್ತವಾಗುತ್ತದೆ. ಅವರಿಗೆ ಸಮಾಧಾನ ಹೇ
ಅಂಜಬೇಡಿರಿ ಇದೊಂದು ಚಮತ್ಕಾರ ಮಾಡುತ್ತೇನೆಯೆಂದು ಹೇಳಬೇಕು.
ನೋಡಿದವರಿಗೆಲ್ಲರಿಗೂ ಬಹು ಸೋಜಿಗವಾಗಿ ಕಾಣುವದು.

## ಗುಡಿಸಲಿಗೆ ಹತ್ತಿದ ಬೆಂಕಿಯನ್ನು ಆರಿಸುವದು

ಪುಣ್ಯವಂತನಾದ ಪುರುಷನು ಜಳಕವನ್ನು ಮಾಡಿಕೊಂಡು ಶ್ರೀ
ಗುರುನಾಥನನ್ನು ನೆನೆದು ಒಂದು ತಾಮ್ರದ ತಂಬಿಗೆಯನ್ನು ತಗೆದುಕೊಂಡ
ಅದನ್ನು ತುಂಬಿದ ಕೊಡದೊಳಗಿನ ನೀರನ್ನು ತುಂಬಿಕೊಂಡು ಬೆಂಕಿ ಹತ್ತಿ
ಸ್ಥಳಕ್ಕೆ ಶ್ರೀ ಗುರುದೇವತಾದಿಗಳನ್ನು ನೆನೆಯುತ್ತಾ ಹೋಗಿ ಭೋ ಅಗ್ನಿ
ದೇವನೆ ಸಾಕು ಶಾಂತನಾಗು ಎಂದು ದೀನ ಸ್ವರದಿಂದ ಹೇಳಿಕೊಂಡು ತಾನ

ಸೈದಿರುವ ತಂಬಿಗೆಯೊಳಗಿನ ನೀರನ್ನು ತನ್ನ ಗುರುಮಂತ್ರದಿಂದ ಮಂತ್ರಿಸಿ ಆ ಅಗ್ನಿದೇವನಿಗೆ ಸಿಂಪಡಿಸಿ ಉಳಿದ ನೀರನ್ನು ತಾನು ಅಷ್ಟಷ್ಟೇ ಕೂಡಿಯುತ್ತಾ ಹೋದರೆ ಆ ಉರಿಯುತ್ತಿರುವ ಬೆಂಕಿಯು ತನ್ನಷ್ಟಕ್ಕೆ ತಾನೇ ಶಾಂತವಾಗುವದು ಇದು ಆ ಪುಣ್ಯಪುರುಷನ ಮಹತ್ವವೆಂದರಿವುದು.

## ಬಾಳೇಹಣ್ಣು ಭಾರವನ್ನು ಹೊರುವದು

ಒಂದು ಕರೇಬಾಳೇಹಣ್ಣನ್ನು ತಗೆದುಕೊಂಡು ಬಂದು ಆ ಬಾಳೇಹಣ್ಣಿನ ಮೇಲಿನ ಶಿಪ್ಪಿಯನ್ನು ತೆಗೆಯದೇ ಆ ಹಂಣಿನ ನಡುಮಧ್ಯದಲ್ಲಿ ಸೂಜಿಯಿಂದ ಮೇಲಿಂದ ಕೆಳತನಕ ಹಾಯುವಂತೆ ತೂತನ್ನು ಮಾಡಿ ಅದರಲ್ಲಿ ಘಟ್ಟಿಯಾದ ರೀಲಿನ ದಾರವನ್ನು ಆ ಬಾಳೇಹಣ್ಣಿನಲ್ಲಿ ತೆಗೆದಿರುವ ಮೇಲಿಂದ ಕೆಳತನಕ ಹಾಕಿ ಪಾರಾಗಿ ಎಳಕೊಳ್ಳಬೇಕು. ಆ ಹಣ್ಣಿನ ಕೆಳಭಾಗದ ದಾರಕ್ಕೆ ಒಂದು ಕಲ್ಲನ್ನು ಕಟ್ಟಬೇಕು ಆ ಮೇಲಿನ ದಾರವನ್ನು ಆ ಕಲ್ಲಿಗೆ ಬಾಳೇಹಣ್ಣು ಹತ್ತುವಂತೆ ಮೇಲಕ್ಕೆ ಎಳೆದುಕೊಳ್ಳಬೇಕು. ಆ ಮೇಲಿನ ದಾರವನ್ನು ಮೇಲೆ ಜಂತಿಗೆ ಅಥವಾ ತೊಲೆಗೆ ಎತ್ತರವಾಗಿ ಕಟ್ಟಿ ಜೋತಾಡುವಂತೆ ಮಾಡಬೇಕು. ಆದನ್ನೆಲ್ಲರಿಗೂ ಇಗೋ ನೋಡಿರಿ ಈ ಬಾಳೇಹಣ್ಣು ಎಷ್ಟು ಭಾರವನ್ನು ಹೊತ್ತಿರುವದು ನೋಡಿರಿ ಎಲ್ಲರಿಗೂ ತೋರಿಸಬೇಕು ನೋಡಿದವರೆಲ್ಲರಿಗೂ ಆಶ್ಚರ್ಯವಾಗಿ ಕಾಣುವದು.

## ಒಂದು ಪಾತ್ರೆಯಲ್ಲಿರುವ ಹಾಲನ್ನು ಮತ್ತೊಂದು ಪಾತ್ರೆಗೆ ಬರುವಂತೆ ಮಾಡುವದು

ಒಂದು ದೊಡ್ಡದಾದ ವಸ್ತ್ರವನ್ನು ತಗೆದುಕೊಂಡು ಆ ಬಿಳೇ ವಸ್ತ್ರವನ್ನು ತಾಜಾ ಹಾಲಿನಲ್ಲಿ ನೆನೆಸಿ ವಣಗಿಸ ಬೇಕು ಹೀಗೆ ೩—೪ ಸಾರೆ ಹಾಲಿನಲ್ಲಿ ನೆನೆಯಿಸಿ ವಣಗಿಸಬೇಕು. ಈ ಪ್ರಕಾರವಾಗಿ ತಯಾರ ಮಾಡಿದ ವಸ್ತ್ರವನ್ನು ತನ್ನ ಹತ್ತರ ಕಿಸೆಯೊಳಗೆ ಇಟ್ಟು ಕೊಂಡಿರಬೇಕು. ಆ ಮೇಲೆ ಒಂದು

ಪಾತ್ರೆಯಲ್ಲಿ ಹಾಲನ್ನು ಹಾಕಿ ಇಡಬೇಕು. ಮತ್ತೊಂದು ಪಾತ್ರೆಯಲ್ಲಿ ನೀರನ್ನು ಹಾಕಿಟ್ಟು ಕೊಳ್ಳಬೇಕು. ತಾನು ಜಾದೂ ಮಾಡುವ ಕಾಲಕ್ಕೆ ಎಲ್ಲರಿಗೂ ತೋರಿಸಿ ತನ್ನ ಕಿಸೆಯಲ್ಲಿರುವ ವಸ್ತ್ರವನ್ನು ಕಡೆಗೆ ತಗೆದುಕೊಂಡು ಆ ನೀರಿರುವ ಪಾತ್ರೆಯೊಳಗೆ ಆ ವಸ್ತ್ರವನ್ನು ಎದ್ದಿ ನೆನೆಇಸಿಮತ್ತೊಂದುಪಾತ್ರೆ ಯೊಳಗೆ ಹಿಂಡಬೇಕು. ಆ ವಸ್ತ್ರಕ್ಕೆ ಉಣಿಸಿದ ಹಾಲು ತಾನೇ ಸುರಿಯುವದು ಇದರಂತೆಯೇ ಒಂದೆರಡುಸಾರೆ ಎದ್ದಿ ಎದ್ದಿ ಮಾಡಿದರೆ ಅದರಲ್ಲಿರುವ ಎಲ್ಲ ಹಾಲು ಕಡಿಗೆ ಪಾತ್ರೆಯಲ್ಲಿ ಬೀಳುವದು ಅದನ್ನು ಎಲ್ಲರಿಗೂ ತೋರಿಸಬೇಕು.

## ಬಿಳಿ ಅಕ್ಷರಗಳನ್ನು ಕಪ್ಪು ಮಾಡಿ ತೋರಿಸುವದು

ಬಿಳೀ ಅರಿವೆಯಮೇಲೆ ನಾಇಟ್ರೆಟ್ ಸಿಲ್ವರದಿಂದ ತವುಗೆ ಬೇಕಾದದ್ದನ್ನು ಅದರ ಮೇಲೆ ಬರೆಯಬೇಕು ಆ ಬರೆದದ್ದನ್ನು ಹಗಲು ಬೆಳಕಿನಲ್ಲಿ ನೋಡಿದರೆ ಆ ಕಾಗದದಲ್ಲಿ ಬರೆದದ್ದು ಏನೂಕಾಣಿಸುವದಿಲ್ಲ ಮತ್ತು ಕತ್ತಲೆಯಲ್ಲಿ ಹೋಗಿ ನೋಡಿದರೂ ಅಲ್ಲಿಯೂ ಏನೂ ಕಾಣಿಸುವದಿಲ್ಲ. ಶುಕ್ಲ ಪಕ್ಷದ ರಾತ್ರಿ ಬೆಳದಿಂಗಳಲ್ಲಿ ದೀಪನ್ನು ಹಚ್ಚಿದಾಗ ಅದರ ಬೆಳಕಿಗೆ ನೋಡಿದರೆ ಮಾತ್ರ ಅದರಲ್ಲಿ ಬರೆದಿರುವ ಅಕ್ಷರಗಳೆಲ್ಲವೂ ಕರೇ ಅಕ್ಷರಗಳಾಗಿ ಕಾಣಿಸಲಾರಂಭಿಸುವವು.

## ಮನೆಯಲ್ಲಿ ಎಲ್ಲ ಕಡೆಗೂ ನವಿಲು ಕಾಣುವಂತೆ ಮಾಡುವದು

ಅದಿತ್ಯವಾರದಿವಸ ಅಮವಾಸಿ ಬಂದಾಗ ಒಂದುಸತ್ತನವಿಲಿನ ಬಾಯೊಳಗೆ ಕರೇಹತ್ತಿಯ ಬೀಜಗಳನ್ನು ಇಟ್ಟು ಅದನ್ನು ನೆಲದಲ್ಲಿ ಹುಗಿದು ನೆಲಕ್ಕೆ ದಿನಾಲು ನೀರನ್ನು ಹಾಕುತ್ತ ಇರಬೇಕು ಆ ಹತ್ತಿಯ ಬೀಜಗಳು ಮೊಳೆತು ದೊಡ್ಡ ಗಿಡಗಳಾದ ಮೇಲೆ ಅದರಿಂದ ಬಂದ ಹತ್ತಿಯನ್ನು ಬಿಡಿಸಿಕೊಂಡು ಆ ಬಂದ ಅರಳೆಯಿಂದ ಬತ್ತಿಗಳನ್ನು ಮಾಡಿ ಒಂದು ಹೊಸ ಪಣತೆಯನ್ನು ತಗೆದು ಕೊಂಡು ಅದರಲ್ಲಿ ಯಂಣೆಯನ್ನು ಹಾಕಿ ಆ ಪಣತೆಯಲ್ಲಿ ಆ ಬತ್ತಿಗಳನ್ನು

ಇಟ್ಟು ತೊಯಿಸಿ ಕತ್ತಲೆಯಲ್ಲಿ ದೀಪವನ್ನು ಹಚ್ಚಬೇಕು. ಆ ದೀಪದ ಬೆಳಕು ಎಲ್ಲಿಯವರೆಗೆ ಬೀಳುವದೋ ಅಲ್ಲಿಯ ವರೆಗೂ ಮನೆಯಲ್ಲೆಲ್ಲ ಎಲ್ಲಿ ನೋಡಿದರೂ ನವಿಲುಗಳೇ ಕಾಣಿಸುತ್ತವೆ. ಇದನ್ನೆಲ ಜನರು ನೋಡಿದರೆ ಆಶ್ಚರ್ಯವಾಗಿ ಕಾಣಿಸುತ್ತದೆ ಇದನ್ನು ಲಗ್ನ ಮುಹೂರ್ತಗಳಲ್ಲಿ ಮೋಜಿಗಾಗಿ ಮಾಡಿ ತೋರಿಸಬಹುದು. ಎಲ್ಲರಿಗೂ ಇದು ಸೋಜಿಗವು ಆಗಿ ಕಾಣುವದು.

## ಅಂಗೈಯಲ್ಲಿ ಗಿಡ ಮಾಡಿತೋರಿಸುವದು

ಅಂಗೈಯಲ್ಲಿ ಗಿಡಗಳನ್ನು ಹುಟ್ಟಿಸಿ ತೋರಿಸಬೇಕಾದರೆ ಮೊದಲು ದೂದಿಯ ರಸವನ್ನು ಮಾಡಿಕೊಂಡು ಆ ರಸದಲ್ಲಿ ಬಿಳೇ ಸಾಸ್ವಿಗಳನ್ನು ನೆನೆ ಹಾಕಿ ಚನ್ನಾಗಿ ನೆನೆಯಿಸಿ ಕಡೆಗೆ ತಗೆದುಕೊಂಡು ಅವನ್ನು ನೆರಳಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. ತಾನು ಜಾದೂ ಆಟವನ್ನು ಮಾಡಿತೋರಿಸುವಾಗ ಕೈಯಲ್ಲಿ ಸ್ವಚ್ಛವಾದ ಯರೇ ಮಣ್ಣನ್ನು ಹಾಕಿಕೊಂಡು ಅದರಲ್ಲಿ ಕೆಲವು ಸಾಸ್ವಿಕಾಳನ್ನು ಹಾಕಿ ಮೇಲೆ ತೆಳ್ಳಗಾಗಿ ಮಣ್ಣನ್ನು ಉದರಿಸಿ ಅದಕ್ಕೆ ತಕ್ಕಷ್ಟು ನೀರನ್ನು ಸಿಂಪಡಿಸಬೇಕು ಅಷ್ಟೇ ತಂಪಿಗೆ ಆ ಸಾಸ್ವಿಯ ಕಾಳುಗಳು ಮೊಳೆತು ಸಸಿಗಳಾಗುವವು. ಇದು ಬಹು ಆಶ್ಚರ್ಯಕರವಾದುದು.

## ಒಂದೇ ಬಾಟ್ಲಿಯಲ್ಲಿ ಹೂವನ್ನೂ ಮತ್ತು ಮಶಿಯನ್ನೂ ತೋರಿಸುವದು

ಅಗಲ ಬಾಯುಳ್ಳ ಒಂದು ಬಾಟ್ಲಿಯನ್ನು ತಗೆದುಕೊಂಡು ಆ ಬಾಟ್ಲಿಯಲ್ಲಿ ಅರ್ಧಭಾಗದವರೆಗೂ ಬಿಳೇಹೂವಗಳನ್ನು ಹಾಕಬೇಕು ಆ ಬಾಟ್ಲಿಗೆ ಕರೇ ಕಾಗದವನ್ನು ಹಚ್ಚಬೇಕು. ಅದರ ಮೇಲೆ ಆ ಬಾಟ್ಲಿಯ ಅಳತೆಯಷ್ಟೆ ಒಂದು ತಗಡನ್ನು ಕತ್ತರಿಸಿ ಅದರೊಳಗೆ ಹೂವಗಳ ಮೇಲೆ ಅಗದಿ ರಿಕ್ಕಾಗಿ ಮೇಲೆ ವ ಶಿಯನ್ನು ಹಾಕಿದರೂ ಬೀಳದಂತೆ ವ್ಯವಸ್ಥೆಯನ್ನು ಮಾಡಿ ಆ ತಗಡನ್ನು ಹೂವಗಳ ಮೇಲೆ ಇಟ್ಟು ಅದರ ಮೇಲೆ ಕರೇ ಮಶಿಯನ್ನು ಹಾಕಬೇಕು. ಅದನ್ನು ತನ್ನ ಮುಂದಿರುವ

ರುವ ಟೇಬಲ್ ಮೇಲೆ ಇಟ್ಟುಕೊಂಡು ಆ ಬಾಟ್ಲಿಗೆ ತನ್ನ ಕರವಸ್ತ್ರವನ್ನು ಮುಚ್ಚಿ ಇಗೋ ನೋಡಿರಿ ಈ ಮಶಿಇರುವ ಬಾಟ್ಲಿಯಲ್ಲಿ ಹೂವೂಗಳನು ತೋರಿಸುತ್ತೇನೆ ಎಂದು ಆ ಬಾಟ್ಲಿಗೆ ಸುಮ್ಮನೆ ಮಂತ್ರಿಸಿದಂತೆ ಮಾಡಿ ಊದ್ದ ಬೇಕು. ಆ ಮೇಲೆ ಬಾಟ್ಲಿಯ ಮೇಲಿರುವ ಕರವಸ್ತ್ರವನ್ನು ಛೂ ಮಂತ್ರ ಗಾಳಿ ಎಂದು ಅನ್ನುತ್ತ ಆ ಬಾಟ್ಲಿಯ ಮೇಲಿನ ಕರವಸ್ತ್ರವನ್ನು ತಗೆದು ಆ ಬಾಟ್ಲಿಯೊಳಗಿನ ಮಶಿಯನ್ನು ಚಲ್ಲಿ ಇಗೋ ನೋಡಿರಿ ಇದರಲ್ಲಿಯೇ ಹೂವೂಗಳನ್ನು ತರಿಸುತ್ತೇನೆ ನೋಡಿರಿ ಎಂದು ತನ್ನ ಕೈ ಚಮತ್ಕಾರ ದಿಂದ ಅದರಲ್ಲಿರುವ ತಗಡನ್ನು ಹೋಳುಮಾಡಿ ತಗೆದು ಆ ಹೂವೂಗಳನ್ನು ಸುರುವಬೇಕು.

## ಮನೆಯಲ್ಲಿ ಮೊಲಗಳು ಕಾಣಿಸುವಂತೆ ಮಾಡುವದು

ರವಿವಾರ ದಿವಸ ಹರಳಬೀಜವನ್ನು ತಂದು ಸತ್ತ ಮೊಲದ ಬಾಯಲ್ಲಿ ಇಟ್ಟು ಭೂಮಿಯಲ್ಲಿ ಹುಗಿಯಬೇಕು. ಅದರಮೇಲೆ ದಿನಾಲೂ ನೀರನ್ನು ಹಾಕುತ್ತಿರಬೇಕು ಅವು ಮೊಳೆತು ಗಿಡಗಳಾಗುತ್ತವೆ. ಆ ಹರಳಗಿಡದ ಬೀಜ ದಿಂದ ಎಣ್ಣೆಯನ್ನು ತಗೆದು ಆ ಎಣ್ಣೆಯನ್ನು ಒಂದು ಹೊಸ ಪಣತಿಯಲ್ಲಿ ಹಾಕಿ ಅದರಲ್ಲಿ ಬತ್ತಿಗಳನ್ನು ಹಾಕಿ ರಾತ್ರಿಕಾಲದಲ್ಲಿ ದಿಪವನ್ನು ಹಚ್ಚಲು ದೀಪದ ಬೆಳಕು ಎಲ್ಲಿಯವರೆಗೆ ಬಿದ್ದಿರುವದೋ ಅಲ್ಲಿಯವರೆಗೂ ಎಲ್ಲಿ ನೋಡಿದಲ್ಲಿ ಬರೇ ಮೊಲಗಳೇ ಕಾಣಿಸುತ್ತವೆ ಇದನ್ನು ನೋಡಿದವರೆಲ್ಲರಿಗೂ ಅಘಾದವಾಗಿ ಕಾಣುವದು. ದೀಪವನ್ನು ತಗೆದರೆ ಹೋಗುವದು.

## ಅರಿವೆಯನ್ನು ಸುಟ್ಟರೂ ಸುಡದಂತೆ ಮಾಡುವದು

ಅರಿವೆಗೆ ಬೆಂಕಿಯನ್ನು ಹಚ್ಚಿ ಸುಟ್ಟರೂ ಸುಡದಂತೆ ಮಾಡಬೇಕಾದರೆ ಮಾಂಜರಪಾಟನ ಅರಿವೆಯ ಒಂದು ತುಂಡನ್ನು ತಗೆದುಕೊಂಡು ಅದಕ್ಕೆ

ಹೇರಳೇಹಣ್ಣಿನ ರಸ ಮತ್ತು ಲಿಂಬಿ ಹುಳಿ ಇವೆರಡನ್ನೂ ಕೂಡಿಸಬೇಕು. ಆದರಲ್ಲಿ ಲಿಂಬೀಹುಳಿಯನ್ನು ಹೇರಳಹಣ್ಣಿನ ರಸಕ್ಕಿಂತಲೂ ಎರಡು ಭಾಗ ಹೆಚ್ಚಿಗೆ ಕೂಡಿಸಿಕೊಂಡು ಆ ರಸವನ್ನು ಚನ್ನಾಗಿ ಮಿಶ್ರ ಮಾಡಿ ಆ ಮಾಂಜರ ಪಾಟಿನ ಹೊಸ ಅರಿವೆಗೆ ಕೆಳಗೂ ಮೇಲೂ ಪೂರಾ ಚನ್ನಾಗಿ ಹಚ್ಚಿ ತೋಯಿ ಸಬೇಕು ಅದನ್ನು ಒಣಗಿಸಬೇಕು ಅದನ್ನು ತಾವು ಜಾದೂ ಮಾಡಿ ತೋರಿ ಸುವ ಕಾಲಕ್ಕೆ ಆ ಔಷದದಿಂದ ತಯಾರಾದ ಆ ಮಾಂಜರಪಾಟದ ಅರಿವೆಗೆ ಬೆಂಕಿಯನ್ನು ಹಚ್ಚಲು ಅದಕ್ಕೆ ಬೆಂಕಿಯು ಹತ್ತಿ ಉರಿಯಲಾರಂಭಿಸುವದು ಆದರೆ ಅದಕ್ಕೆ ಹಚ್ಚಿದ ಔಷಧವು ಸುಡುವದಷ್ಟೇ ಹೊರ್ತು ಅರಿವೆಯು ಸುಡುವದಿಲ್ಲ ಅದಕ್ಕೆ ಹಚ್ಚಿದ ಔಷಧವು ತೀರುವದರೊಳಗಾಗಿ ಆ ಉರಿಯನ್ನು ಆರಿಸಬೇಕು.

## ಬೇವಿನತಪ್ಪಲವನ್ನು ಚೋಳು ಮಾಡುವದು

ಬೇವಿನ ಎಲೆಗಳನ್ನು ಚೋಳು ಮಾಡಿ ತೋರಿಸಬೇಕಾದರೆ ಮೊದಲು ಮನೆಯೊಳಗಿನ ಒಂದು ಹಲ್ಲಿಯನ್ನು ಹಿಡಿದುಕೊಂಡು ಆ ಹಲ್ಲಿಯನ್ನು ಒಂದು ಮಣ್ಣಿನ ಹೊಸ ಗಡಿಗೆಯೊಳಗೆ ಹಾಕಬೇಕು. ಅದಕ್ಕೆ ಆಹಾರದ ಸಲುವಾಗಿ ದಿನಾಲೂ ಒಂದು ಚೋಳನ್ನು ಬಡಿದು ತಂದು ಹಾಕಬೇಕು. ಆ ಹಲ್ಲಿಯು ಆ ಚೋಳನ್ನು ತಿನ್ನುತ್ತದೆ ಇದರಂತೆಯೇ ಅದಕ್ಕೆ ಅನೇಕ ಚೋಳುಗಳನ್ನು ತಂದು ತಂದು ಹಾಕುತ್ತಿರಬೇಕು. ಆ ಹಲ್ಲಿಯು ಆ ಚೋಳು ಗಳನ್ನು ತಿಂದು ಬಿಟ್ಟಿರುತ್ತವೆ. ಹೀಗೆ ಆ ಹಲ್ಲಿಯು ಕೆಲವು ಚೋಳುಗಳನ್ನು ತಿಂದು ಬಿಟ್ಟನಂತರ ಆ ಹಲ್ಲಿಯು ಆ ಗಡಿಗೆಯಲ್ಲಿಯೇ ಇರೋಣದರಿಂದ ಅದು ಆದರಲ್ಲಿ ಹಾಕಿದ ಅದರ ಹಿಕ್ಕಿಯನ್ನು (ಮಲವನ್ನು) ತಗೆದುಕೊಂಡು ಅದರ ಗಂಧವನ್ನು ಮಾಡಿ ಕೈಗೆ ಹಚ್ಚಿಕೊಂಡು ಬೇವಿನಕಡ್ಡಿಯಿಂದ ಎಲೆ ಗಳನ್ನು ಹರಿದು ನೆಲಕ್ಕೆ ಒಗೆದರೆ ಆ ಎಲೆಗಳು ಚೋಳಾಗಿ ಬೀಳುವವು.

## ೨ನೇ ವಿಧ ಕೋಳಿಯ ತತ್ತಿಯನ್ನು ಹಾರಾಡಿಸುವದು

ಒಂದು ಕೋಳಿಯ ತತ್ತಿಯನ್ನು ತಗೆದುಕೊಂಡು ಬಂದು ಆ ತತ್ತಿಗೆ ಒಂದು ಬಾಜುಕ್ಕೆ ಸಣ್ಣದಾದ ಒಂದು ತೂತನ್ನು ಮಾಡಿ ಆ ತತ್ತಿಯಲ್ಲಿರುವ

ಎಲ್ಲ ರಸವನ್ನು ತಗೆದು ಸ್ವಚ್ಛವಮಾಡಬೇಕು. ಆ ತತ್ತಿಯಲ್ಲಿ ತಕ್ಕಷ್ಟು ಪಾದರಸವನ್ನು ತುಂಬಿ ಆ ತೂತನ್ನು ಬಿಗಿಯಾಗಿ ಒಳಗಿನ ಪಾದರಸವು ಬೀಳದಂತೆ ಬಂದೋಬಸ್ತಾಗಿ ಮುಚ್ಚಿ ಬಿಡಬೇಕು. ಆ ಪಾದರಸದಿಂದ ತುಂಬಿದ ಆ ಕೋಳಿ ತತ್ತಿಯು ನೋಡುವವರಿಗೆ ಸ್ವಾಭಾವಿಕವಾಗಿಯೇ ಕಾಣಿಸುತ್ತದೆ. ಅದನ್ನು ಜಾದೂ ಮಾಡಿ ತೋರಿಸುವಾಗ ಅಲ್ಲಿ ಕುಳಿತಿರುವ ಯಾವತ್ತೂರಿಗೂ ಆ ಕೋಳಿತತ್ತಿಯನ್ನು ತೋರಿಸಿ ಇಗೋ ನೋಡಿರಿ ಈ ತತ್ತಿಯನ್ನು ಕುಣಿಸುತ್ತೇನೆ ಎಂದು ಹೇಳಿ ಸ್ವಲ್ಪ ಬೆಂಕಿಯನ್ನು ತರಿಸಿ ಅದರ ಜಳಕ್ಕೆ ಹಿಡಿದರೆ ಅದರ ಜಳವು ಆ ತತ್ತಿಗೆ ಸೋಂಕಿದ ಕೂಡಲೇ ಆ ತತ್ತಿಯು ಹಾರಾಡುವದು ಇದು ಎರಡನೆಯ ವಿಧಾನವು.

## ಹಸಿ ಮಣ್ಣಿನ ಗಡಿಗೆಯಲ್ಲಿ ನೀರು ಹಾಕಿ ತೋರಿಸುವದು

ಸುಡದೇ ಇರುವ ಒಂದು ಮಣ್ಣಿನ ಗಡಿಗೆಯನ್ನು ತಗೆದುಕೊಂಡು ಬಂದು ಆ ಗಡಿಗಿ ಒಳಗೂ ಹೊರಗೂ ತಾಳರಸದ ರಸವನ್ನು ಹಚ್ಚಿ ಚನ್ನಾಗಿ ಒಣಗಿಸಬೇಕು. ಹೀಗೆ ಕೆಲವು ಸಾರೆ ರಸವನ್ನು ಹಚ್ಚಿ ಹಚ್ಚಿ ಒಣಗಿಸಿದ ಮೇಲೆ ಅದರಲ್ಲಿ ನೀರು ತುಂಬಿ ಇಟ್ಟರೆ ಆ ಹಸೀ ಗಡಿಗೆಯು ಸೋರುವದಿಲ್ಲ ಮತ್ತು ಅದು ಅರಳುವದೂ ಇಲ್ಲ.

## ನೀರನ್ನು ಹಾಲಿನಂತೆ ಮಾಡುವದು

ನೀರನ್ನು ಹಾಲಿನ ಹಾಗೆ ಮಾಡಬೇಕಾದರೆ ಹರಳುಪ್ಪನ್ನು ತಗೆದುಕೊಂಡು ಬಂದು ಅದನ್ನು ಸಣ್ಣಾಗಿ ಅರೆದು ಅದರಲ್ಲಿ ನೀರು ಹಾಕಿ ಮತ್ತೆ ಅರೆದು ಗಂಧದ ಹಾಗೆ ಮಾಡಬೇಕು. ಆ ಗಂಧವನ್ನು ಮಣ್ಣಿನ ಹೊಸ ಪಾತ್ರೆಗೆ ಹಚ್ಚಿ ಒಣಗಿಸಬೇಕು. ಹೀಗೆಯೇ ಕೆಲವೊಂದು ಸಾರೆ ಮಾಡಿ ಸಂಪೂರ್ಣ ಒಣಗಿಸಬೇಕು. ಅದು ಶುದ್ಧವಾಗಿ ಒಣಗಿದ ಮೇಲೆ ಆ ಪಾತ್ರೆಯಲ್ಲಿ ನೀರನ್ನು ಹಾಕಿ ಅಳುಗಾಡಿಸಿದರೆ ಆ ಕಲಕು ನೀರು ಹಾಲಿನಂತಾಗುವದು. ಇದು ಪಾತ್ರೆಗೆ ಹಚ್ಚಿದ ಔಷಧದ ಗುಣವೆಂದರಿಯದು.

## ಕೋಳಿಯು ತತ್ತಿಯು ಚಮತ್ಕಾರ

ಒಂದು ಪಾತ್ರೆಯನ್ನು ತೆಗೆದುಕೊಂಡು ಒಂದು ಅದರಲ್ಲಿ ನೀರು ಹಾಕಿಕೊಂಡು ಮತ್ತಿ ಅದರಲ್ಲಿ ಉಪ್ಪನ್ನು ಹಾಕಿ ಎಲ್ಲವೂ ಕರಗುವಂತೆ ಕೈಯಾಡಿಸಿ ಉಪ್ಪಿನ ನೀರನ್ನು ಮಾಡಿ ಆ ಉಪ್ಪಿನ ನೀರಿನಲ್ಲಿ ಒಂದು ಕೋಳಿಯು ತತ್ತಿಯನ್ನು ತಂದು ಆ ಉಪ್ಪಿನ ನೀರಿನಲ್ಲಿ ಹಾಕಿದರೆ ತತ್ತಿಯು ಆ ಜಾದೂಗಾರನು ಅಂದಂತೆ ಥೈತಾ ಥೈತಾ ಎಂದು ಅಂದ ಹಾಗೆ ಆ ತತ್ತಿಯು ಕುಣಿದಾಡಲಾರಂಭಿರುವದು.

## ಹಳದೀ ಅಕ್ಷರ ಮಾಡುವದು

ಒಂದು ಬಿಳೀ ಹಾಳಿಯನ್ನು ತೆಗೆದುಕೊಂಡು ಅದರೆ ಮೇಲೆ ಬರಿಯಬೇಕಾದರೆ ಔಷಧ ಉಪಾಯ ಮೈಲತುತ್ತಿ ಮತ್ತು ಸಿಟ್ರೆಟ್ ಅಮೋನಿಯಾ ಇವೆರಡನ್ನೂ ಸಮನಾಗಿ ಕೂಡಿಸಿ ಒಂದು ಗ್ಲಾಸಿನಲ್ಲಿ ಹಾಕಿ ಇಟ್ಟುಕೊಂಡು ಅದರಿಂದ ಆ ಬಿಳಿ ಕಾಗದದ ಮೇಲೆ ಏನಾದರೂ ಬರೆಯಬೇಕು. ಆ ಬರೆದ ಕಾಗದವನ್ನು ನೋಡಿದರೆ ಅದರ ಮೇಲೆ ಬರೆದದ್ದು ಏನೂ ಕಾಣಿಸುವದಿಲ್ಲ ಅದನ್ನು ಬೆಂಕಿಯು ಜಳಕ್ಕೆ ಹಿಡಿದು ಜಳವನ್ನು ಬಡಿಸಿದರೆ ಆ ಬೆಂಕಿಯು ಉಷ್ಣತೆಗೆ ಆ ಬಿಳೀ ಕಾಗದದಲ್ಲಿ ಬರೆದಿರುವ ಅಕ್ಷರಗಳೆಲ್ಲವೂ ಹಳದಿ ಅಕ್ಷರಗಳಾಗಿ ಕಾಣಿಸುತ್ತಿರುವವು.

## ಮನೆಯಲ್ಲಿ ಇಣಚಿಗಳು ಕಾಣುವಂತೆ ಮಾಡುವದು

ಆದಿತ್ಯವಾರ ದಿವಸ ಅಮವಾಸಿಯಿದ್ದಾಗ ಆ ದಿವಸ ಸತ್ತ ಇಣಚಿಯ ಬಾಯೊಳಗೆ ಹತ್ತಿಯು ಕಾಳ ಬೀಜಗಳನ್ನು ಇಟ್ಟು ಭೂಮಿಯಲ್ಲಿ ಅದನ್ನು ಹೂಗಿಯಬೇಕು. ಅದಕ್ಕೆ ದಿನಾಲೂ ತಕ್ಕಷ್ಟು ನೀರನ್ನು ಹಾಕುತ್ತಿರಬೇಕು. ಅವು ಮೊಳೆತು ಗಿಡಗಳಾದ ಮೇಲೆ ಆ ಗಿಡದ ಹತ್ತಿಯನ್ನು ತೆಗೆದುಕೊಂಡು ಬತ್ತಿಗಳನ್ನು ಮಾಡಿ ಇಟ್ಟುಕೊಳ್ಳಬೇಕು ಮತ್ತು ಜಾದೂ ಮಾಡಿ ತೋರಿ

ಸುವ ಕಾಲಕ್ಕೆ ಒಂದು ಹೊಸ ಪಣತಿಯನ್ನು ತೆಗೆದುಕೊಂಡುಬಂದು ಅದರಲ್ಲಿ ಕುಸುಬೆಯ ಎಣ್ಣೆಯನ್ನು ಹಾಕಿ ಅದರಲ್ಲಿ ಮೇಲಿನ ಬತ್ತಿಗಳನ್ನು ಹಾಕಿ, ರಾತ್ರಿ ದೀಪವನ್ನು ಹಚ್ಚಲು ಬರೇ ಇಣಚಿಗಳೇ ಕಾಣಿಸಲಾರಂಭಿಸುವವು.

## ಬಿಳೀ ಅರಿವೆಯನ್ನು ಕೆಂಪು ಮಾಡುವದು

ಒಂದು ಬಿಳೀ ಅರಿವೆಯನ್ನು ತಕ್ಕೊಂಡು ಚುಕುಂದವ ಬೇರಿನ ರಸವನ್ನು ಒಂದು ಕಾಜಿನ ಪಾತ್ರೆಯಲ್ಲಿ ಹಾಕಬೇಕು. ಅದು ಮೊದಲು ಕೆಂಪಗಾಗಿರುವದು. ಅದರಲ್ಲಿ ಸರಿಯಾಗಿ ಹೊಸ ಸುಣ್ಣದ ನೀರನ್ನು ಹಾಕಿದರೆ ಅದು ಸುಣ್ಣದ ನೀರಿನಂತೆ ಬೆಳ್ಳಗಾಗುವದು. ಅದರಲ್ಲಿ ಮೇಲಿನ ಬಿಳೀ ಅರಿವೆಯನ್ನು ಚನ್ನಾಗಿ ಅದರಲ್ಲಿ ಎದ್ದಿ ಎದ್ದಿ ನೆನೆಯಿಸಬೇಕು. ಅವಾಗ್ಯೂ ಅದರ ಬಣ್ಣ ಬದಲಾಯಿಸುವದಿಲ್ಲ. ಅದನ್ನು ಒಣಗಿಸಿದರೆ ಮಾತ್ರ ಅದು ಕೇವಲ ಕೆಂಪು ಬಣ್ಣದ್ದಾಗುವದು.

## ರಾಕ್ಷಸನಂತೆ ಕಾಣುವ ಹಾಗೆ ಮಾಡುವದು

೧ ಹಂದಿಯ ನೆಣ ೨ ಕತ್ತಿಯ ನೆಣ ೩ ಅಲಿವಾಣದ ಹಕ್ಕಿಯ ನೆಣ ಈ ಮೂರನ್ನು ಸರಿಯಾಗಿ ತೆಗೆದುಕೊಂಡು ಮಿಶ್ರಣವನ್ನು ಮಾಡಿ ಆ ಮಿಶ್ರಣವನ್ನು ಮಣಶಿಲೆಯನ್ನು ಹಾಕಿ ಕೂಡಿಸಬೇಕು. ಇದನ್ನು ಒಂದು ಡಬ್ಬಿಯಲ್ಲಿ ಹಾಕಿ ಗೊತ್ತಿನಲ್ಲಿ ಇಟ್ಟುಕೊಳ್ಳಬೇಕು. ಲಿಂಗದೊಂಡಿಯ ಬೀಜವನ್ನು ತಂದು ಅದನ್ನು ಚನ್ನಾಗಿ ಒಣಗಿಸಿ ಆ ಬೀಜದ ಎಣ್ಣೆಯನ್ನು ತೆಗೆದುಕೊಂಡು ಆ ಎಣ್ಣೆಯನ್ನು ಎಳ್ಳೆಣ್ಣೆಯಲ್ಲಿ ಕೂಡಿಸಿ ಒಂದು ವಾರದ ವರೆಗೂ ಸೂರ್ಯ ಪುಟವನ್ನು ಕೊಟ್ಟು ಅನಂತರ ಆ ಎಣ್ಣೆಯಲ್ಲಿ ಮೇಲೆ ತಯಾರಿಸಿದ ನೆಣವನ್ನು ಆ ಎಣ್ಣೆಯಲ್ಲಿ ಕಲಸಿ ಹಣೆಯಲ್ಲಿ ತಿಲಕವನ್ನು ಹಚ್ಚಿಕೊಂಡರೆ ಆ ತಿಲಕವು ಹಣೆಯಲ್ಲಿ ಇರುವ ವರೆಗೂ ತಾನು ಎಲ್ಲರಿಗೂ ರಾಕ್ಷಸನ ಹಾಗೆ ಕಾಣುವನು. ಚಿಕ್ಕವರು ನೋಡಿ ಬೆದರಬಹುದು. ಅಂಥ ಪ್ರಸಂಗ ಬಿದ್ದರೆ ತಕ್ಷಣಕ್ಕೆ ಆ ತಿಲಕವನ್ನು ಒರೆಸಿಕೊಂಡು ಬಿಡಬೇಕು.

## ಆಟಗಾರನ ನೃತ್ಯವನ್ನು ನಿಲ್ಲಿಸುವದು

ಒಂದು ಸಮಯದಲ್ಲಿ ಆಟವಾಡುತ್ತಿರುವ ಆಟಗಾರನ ನಾಟ್ಯವನ್ನು (ನೃತ್ಯವನ್ನು) ನಿಲ್ಲಿಸಬೇಕಾದರೆ ಒಂದು ಕಲ್ಲಾವೆಯನ್ನು ತಂದು ಅದಕೆ ಆಹಾರದ ಸಲುವಾಗಿ ತಾಳಕವನ್ನು ತಗೆದುಕೊಂಡುಬಂದು ಅದನ್ನು ಸಣ್ಣಾಗಿ ಅರೆದು ಪುಡಿಯನ್ನು ಮಾಡಬೇಕು. ಆ ಆವೆಯನ್ನು ಒಂದೇ ಸ್ಥಳದಲ್ಲಿ ಇರುವಂತೆ ಅದಕ್ಕೊಂದು ಸ್ಥಾನವನ್ನು ಮಾಡಿ ಅದು ಯಾವಾಗಲೂ ಅಲ್ಲಿಯೇ ಇರುವಂತೆ ವ್ಯವಸ್ಥೆಯನ್ನು ಮಾಡಬೇಕು ಮಾಡಿದ ನಂತರ ಅದಕ್ಕೆ ಆಹಾರದ ಸಲುವಾಗಿ ಮೇಲೆ ತಯಾರಿಸಲ್ಪಟ್ಟ ಆ ತಾಳಕದ ಪುಡಿಯನ್ನು ಅದಕ್ಕೆ ದಿನಾಲೂ ಅಷ್ಟಷ್ಟೇ ಹಾಕುತ್ತಿರಬೇಕು. ಅದನ್ನು ತಿಂದೊಡನೆಯೇ ಮತ್ತು ಮೇಲಿಂದ ಮೇಲೆ ಹಾಕುತ್ತಿರಬೇಕು. ಅದು ಅದನ್ನು ತಿಂದು ತಿಂದು ಹಾಕಿದ ಆದ ಮಲವನ್ನು ತಗೆದುಕೊಂಡು ಇಟ್ಟುಕೊಳ್ಳಬೇಕು. ಆ ಮಲವನ್ನು ಕೈಗೆ ಹಚ್ಚಿಕೊಂಡು ಆಟವಾಡುವ ಆಟಗಾರರಿಗೆ ತನ್ನ ಕೈಮುಷ್ಠಿ ತೋರಿಸಲು ಅವರ ನಾಟ್ಯ ನಿಂತು ಹೋಗುವದು.

## ಕಾದ ಸರಪಳಿಯನ್ನು ಕೈಯಿಂದ ಹಿಡಿಯುವದು

ಒಂದು ಸರಪಳಿಯನ್ನು ತಗೆದುಕೊಂಡು ಆ ಸರಪಳಿಯನ್ನು ಕೆಂಪಗೆ ಕಾಯಿಸಿ ಅದನ್ನು ಕೈಯಿಂದ ಹಿಡಿಯಬೇಕಾದರೆ ಮೊದಲು ಅದಕೆ ಹಚ್ಚುವ ಔಷಧವನ್ನು ತಯಾರ ಮಾಡಿಕೊಳ್ಳಬೇಕು. ಅದು ಯಾವದೆಂದರೆ ೧ಕೋಳಿ ತತ್ತಿಯ ರಸ, ೨ ತಾಳಸರದ ರಸ ೩ ಜೇಷ್ಟಮದದ ರಸ ಈ ಮೂರು ರಸಗಳನ್ನು ಕೂಡಿಸಿ ಮಿಶ್ರಣವನ್ನು ಮಾಡಿ ಆ ಮಿಶ್ರಣವನ್ನು ಕೈಗೆ ಸರಿಯಾಗಿ ಒಳಗೂ ಹೊರಗೂ ಹಚ್ಚಿಕೊಂಡು ಚನ್ನಾಗಿ ಒಣಗಿಸಬೇಕು. ತಾವು ಜಾದೂ ಮಾಡಿ ತೋರಿಸುವ ಕಾಲಕ್ಕಿಂತಲೂ ಮೊದಲು ಮನೆಯಲ್ಲಿ ಅದರ ಪ್ರಯೋಗವನ್ನು ಮಾಡಿ ನೋಡಿಕೊಂಡು ಅದರ ಭಯವನ್ನು ನಿವಾರಣ ಮಾಡಿಕೊಂಡು ನಂತರ ತಾವು ಜಾದೂ ಮಾಡುವದಕ್ಕೆ ಆ ಸುಡುವ ಸರ

ಪಣಿಯನ್ನು ಚೆನ್ನಾಗಿ ಮೆತ್ತೊಮ್ಮೆ ಕಾಸಿ ಅದರ ಮೇಲೆ ಎಣ್ಣಿಯನ್ನು ಹಾಕಿ ಔಷಧದಿಂದ ಕೂಡಿದ ಕೈಯಿಂದ ಆ ಸರಪಳಿಯನ್ನು ಹಿಡಿದು ಜಗ್ಗಬಹುದು.

## ಅರಿವೆಯು ಸುಡದಂತೆ ಮಾಡುವದು

ಒಂದು ದಪ್ಪವಾದ ಮಾಂಜರ ಪಾಟಿನ ಹೊಸ ಅರಿವೆಯನ್ನು ತಗೆದು ಕೊಂಡು ಅದಕ್ಕೆ ವಂದೆಲಗಿನ ತಪ್ಪಲವನ್ನು ತಂದು ಅದನ್ನು ಚೆನ್ನಾಗಿ ಅರೆದು ಅದರ ರಸವನ್ನು ತಗೆದುಕೊಂಡು ಆ ರಸದಲ್ಲಿ ಕರ್ಪೂರವನ್ನು ಹಾಕಿ ಗಂಧದ ಹಾಗೆ ಅರೆದು ಆ ಗಂಧವನ್ನು ಆ ಹೊಸ ಅರಿವೆಗೆ ಹಚ್ಚಿ ಒಣಗಿಸಬೇಕು. ಇದರಂತೆಯೇ ಕೆಲವು ಸಾರೆ ಮಾಡಿಕೊಂಡು ಅರಿವೆಯನ್ನು ಸಂಗ್ರಹಿಸಿ ಇಟ್ಟು ಕೊಳ್ಳಬೇಕು. ತಾವು ಜಾದೂ ಮಾಡಿ ತೋರಿಸುವಾಗ ಆ ಸಮಯದಲ್ಲಿ ಆ ಔಷಧದಿಂದ ತಯಾರ ಮಾಡಿದ ಅರಿವೆಯನ್ನು ನೆಲದ ಮೇಲೆ ಹಾಸಿ ಅದರ ಮೇಲೆ ಒಲಿ ಹೂಡಿ ಅದರಲ್ಲಿ ಬೆಂಕಿಯನ್ನು ಹಾಕಿ ಅನ್ನವನ್ನು ಮಾಡಿ ಕೊಂಡರೂ ಆ ಕೆಳಗಿನ ಅರಿವೆಯನ್ನು ತೆಗೆದು ನೋಡಲು ಆ ಅರಿವೆಯು ಸುಟ್ಟಿರುವದಿಲ್ಲ.

ಸೂಚನೆ— ಈ ಪ್ರಕಾರವಾಗಿ ತಾವು ಮಾಡತಕ್ಕ ಎಲ್ಲ ಜಾದೂ ಆಟಗ ಳನ್ನು ಮೊದಲು ತಮ್ಮ ಮನೆಯಲ್ಲಿ ಮಾಡಿ ನೋಡಿಕೊಂಡು ಅನುಭವ ತಗೆದುಕೊಂಡು ನಂತರ ಹೊರಗೆ ಧೈರ್ಯದಿಂದ ಮಾಡಿ ತೋರಿಸಬೇಕು. ಏಕಾ ಏಕಿ ಹೊರಗೆ ಜನರಲ್ಲಿ ಮಾಡಿ ತೋರಿಸಲಿಕ್ಕೆ ಹೋಗಬಾರದು ಮೊದಲು ಅನುಭವ ಮಾಡಿಕೊಂಡು ಆ ಮೇಲೆ ಹೊರಗೆ ಆಟವನ್ನು ಹೂಡಬೇಕು.

## ಮನೆಯಲ್ಲಿ ನಾಯಿಗಳು ಕಾಣುವಂತೆ ಮಾಡುವದು

ಆದಿತ್ಯವಾರ ದಿವಸ ಕೃತಿಕಾ ನಕ್ಷತ್ರವಿದ್ದ ದಿವಸ ಸತ್ತ ನಾಯಿಯನ್ನು ತಂದು ಅದರ ಬಾಯಲ್ಲಿ ಕರೇ ಹತ್ತಿಯ ಕಾಳನ್ನು ಆ ನಾಯಿಯ ಬಾಯಲ್ಲಿ

ಇಟ್ಟು ಅದನ್ನು ಹುಗಿಯಬೇಕು. ಅದಕ್ಕೆ ದಿನಾಲು ನೀರು ಹಾಕುತ್ತಿರ ಬೇಕು. ಅವು ಗಿಡವಾಗಿ ಬೆಳೆದು ದೊಡ್ಡವಾದಾಗ ಅದರ ಹತ್ತಿಯನ್ನು ಬತ್ತಿಯನ್ನು ಮಾಡಿ ಒಂದು ಪಣತಿಯಲ್ಲಿ ಹಾಕಿ. ಅದರಲ್ಲಿ ಎಣ್ಣೆಯನ್ನು ಹಾಕಿ ದೀಪವನ್ನು ಹಚ್ಚಿದರೆ ಮನೆತುಂಬ ಎಲ್ಲಾ ಕಡೆಗೂ ಬರೇ ನಾಯಿಗಳೇ ಕಾಣುತ್ತವೆ ಆಶ್ಚರ್ಯವು—

## ಮನುಷ್ಯನು ಬೇರೆಬೇರೆಯಾಗಿ ಕಾಣುವದು

ಮನುಷ್ಯನ ಅವಯುವಗಳು ಬೇರೆ ಬೇರೆಯಾಗಿ ಕಾಣಿಸುವಂತೆ ಮಾಡ ಬೇಕಾದರೆ ನವಲಿನ ಪಕ್ಷಿಯನ್ನು ಹುಡುಕಿಕೊಂಡು ತಂದು ಅದನ್ನು ಚನ್ನಾಗಿ ಸಾಕಬೇಕು. ಅದನ್ನು ಒಂದು ಸ್ಥಳದಲ್ಲಿ ಭದ್ರವಾಗಿರಿಸಿ ಬೇಕಾಗುವ ಆಹಾರ ಹುಳ ಹುಪ್ಪಡಿ ಮೊದಲಾದದ್ದನ್ನು ಅದಕ್ಕೆ ಆಹಾರವನ್ನಾಗಿ ಕೊಟ್ಟು ಅದನ್ನು ಸಲಹಬೇಕು. ಆ ನವಿಲು ಹಾಕಿದ ಹಿಕ್ಕೆಯನ್ನು (ಮಲವನ್ನು) ಸಂಗ್ರಹಿಸಿ ತಗೆದುಕೊಳ್ಳಬೇಕು. ಮತ್ತು ಆಕಳ ಶಗಣಿ, ಮೃತ್ತಿಕೆಯನ್ನು ಕೂಡಿಸಿ ಆ ನವಿಲಿನ ಹಿಕ್ಕೆಯನ್ನು ಸಹ ಅದರಲ್ಲಿ ಹಾಕಿ ಸಮರಸ ಮಾಡಿ ಮೈಗೆ ಎಲ್ಲಾ ಕಡೆಗೂ ಹಚ್ಚಿಕೊಂಡರೆ ಆತನನ್ನು ನೋಡುವವರಿಗೆಲ್ಲರಿಗೂ ಅವನ ಶರೀರವು ತುಂಡು ತುಂಡಾಗಿ ಅಥವಾ ಬೇರೆ ಬೇರೆಯಾಗಿ ಕಾಣಿಸತೊಡಗುವದು. ಆಶ್ಚರ್ಯ.

## ಹೂವು ಕಾಯಿ ಸಹಿತ ಗಿಡ ಹುಟ್ಟಿಸುವದು

ಆದಿತ್ಯವಾರ ಪುಷ್ಯಾ ನಕ್ಷತ್ರ ಬಂಡಾಗ ಅಂಕೋಲೆಯ ಗಿಡದ ಬೀಜ ಗಳನ್ನು ತಂದು ಅಗ್ನಿಯಿಂದ ಪುಟವನ್ನು ಕೊಟ್ಟು ಅದರ ಎಣ್ಣೆಯನ್ನು ತಗೆಯಬೇಕು. ಅಥವಾ ಆ ಬೀಜದ ಎಣ್ಣೆಯನ್ನು ಬೇರೆ ರೀತಿಯಿಂದ ತಗೆದರೂ ಅಡ್ಡಿಯಿಲ್ಲ. ಆ ಅಂಕೋಲೆಯ ಬೀಜದ ಯಣ್ಣೆಯಲ್ಲಿ ಒಂದು ಮಾವಿನ ಬೀಜವನ್ನು ತಗೆದುಕೊಂಡು ಬಂದು ,ಆ ಮಾವಿನ ಬೀಜವನ್ನು ಆ

ಅಂಕೋಲೆಯ ಯಣ್ಣೆಯಲ್ಲಿ ನೆನೆಯಿಸಿಕೊಂಡು ತಯಾರುಮಾಡಿಕೊಂಡು ಭೂಮಿಯಲ್ಲಿ ತೆಗ್ಗು ತಗೆದು ಹುಗಿಯಬೇಕು. ಅದಕ್ಕೆ ನೀರು ಹಾಕಿದ್ದರೆ ಅದು ಕಾಯಿ ಹೂವು ಸಹಿತ ಗಿಡವಾಗುವದು.

## ಟೆಗರು ಕಾಣುವಂತೆ ಮಾಡುವದು

ಆದಿತ್ಯವಾರದಿವಸ ಸತ್ತ ಟೆಗರಿನ ಬಾಯೊಳಗೆ ವಿಲಾಯತಿ ಹತ್ತಿಯ ಬೀಜದ ಕಾಳುಗಳನ್ನು ಹಾಕಿ ಅದನ್ನು ನೆಲದಲ್ಲಿ ತೆಗ್ಗು ತಗೆದು ಹುಗಿಯಬೇಕು ಅದಕ್ಕೆ ದಿನಾಲೂ ನೀರನ್ನು ಹಾಕುತ್ತಿರಬೇಕು. ಆ ಬೀಜಗಳು ಮೊಳೆತು ಗಿಡಗಳಾಗುವವು ಆ ಗಿಡದಿಂದ ಬಂದ ಹತ್ತಿಯನ್ನು ತೆಗೆದುಕೊಂಡು ಅದ-ರಿಂದ ಬತ್ತಿಯನ್ನು ಮಾಡಿಕೊಂಡು ಇಟ್ಟು ಒಂದು ಹೊಸ ಪಣತಿಯನ್ನು ತಗೆದುಕೊಂಡು ಬಂದು ಅದರಲ್ಲಿ ಕುಸುಬೆಯ ಯಣ್ಣೆಯನ್ನು ಹಾಕಿ ರಾತ್ರಿ ದೀಪವನ್ನು ಹಚ್ಚಬೇಕು. ಅದರ ಬೆಳಕು ಬಿದ್ದಲ್ಲಿಯವರೆಗೂ ಟೆಗರುಗಳೇ ಕಾಣಿಸುವವು ದೀಪವನ್ನು ತಗೆದರೆ ಬಯಲಾಗುವದು.

## ತನ್ನ ಸಾಮರ್ಥಿಕೆಯನ್ನು ತೋರಿಸುವದು

ರವಿವಾರ ದಿವಸ ಪುಷ್ಯಾನಕ್ಷತ್ರಯಿದ್ದಾಗ ಸೂರ್ಯೋದಯಕ್ಕೆ ಆ ಗಿಡದ ಬಳಿಗೆ ಹೋಗಿ ಅಂದರೆ ಅಂಕೋಲೆಯ ಗಿಡದ ಬಳಿಗೆ ಹೋಗಿ ಆ ಅಂಕೋಲೆಯ ಗಿಡವನ್ನು ವಿದಾನೋಕ್ತವಾಗಿ ಪೂಜೆಯನ್ನು ಮಾಡಬೇಕು ಎಲ್ಲ ಪೂಜೆಯು ಮುಗಿದ ನಂತರ ಆ ಗಿಡದ ಕಾಯಿಗಳನ್ನು ಹರೆದುಕೊಂಡು ಬಂದು ಅದರೊಳಗಿನ ಬೀಜವನ್ನು ಕಡೆಗೆ ತಗೆದುಕೊಂಡು ಆ ಬೀಜಗಳನ್ನು ಸತ್ತ ಕುದುರೆಯ ಬಾಯೊಳಗೆ ಆ ಬೀಜಗಳನ್ನು ಹಾಕಿ ಇಟ್ಟು ಬಿಟ್ಟು ಕೊಟ್ಟು ಹಿಂದಿನಿಂದ ಆ ಬೀಜಗಳನ್ನು ಕಡೆಗೆ ತೆಗೆದುಕೊಂಡು ಭೂಮಿಯಲ್ಲಿ ಮಡಿಯನ್ನು ಮಾಡಿ ಆ ಮಡಿಯಲ್ಲಿ ಆ ಬೀಜಗಳನ್ನು ಹಾಕಿ ಮೇಲೆ ದಿನಾಲೂ ನೀರನ್ನು ಹಾಕುತ್ತಾ ಹೋಗಬೇಕು. ಆ ಬೀಜಗಳು ಮೊಳೆತು

ಸಸಿಗಳಾದ ಹಾಗೆ ನೀರು ಹಾಕುತ್ತ ಆ ಗಿಡಗಳನ್ನು ಬೆಳೆಸಬೇಕು. ಆ ಗಿಡದೊಳಗೆ ಆದ ಕಾಯಿಗಳೊಳಗಿನ ಬೀಜಗಳನ್ನು ತಗೆದುಕೊಂಡು ತ್ರಿಲೋಹದ ತಗಡಿನಲ್ಲಿಯಿಟ್ಟು ಅದನ್ನು ಬಾಯಲ್ಲಿಟ್ಟುಕೊಂಡರೆ ಅವನಿಗೆ ಬಹಳ ಸಾಮರ್ಥ್ಯವು ಬರುವುದು.

## ಸೂರ್ಯನ ಪ್ರಕಾಶ ಮಂದವಾಗಿ ಕಾಣುವಿಕೆ

ಸೂರ್ಯನ ತೇಜಸ್ಸು ಮಂದವಾಗುವಂತೆ ಮಾಡಬೇಕಾದರೆ ಒಂದು ಡೊಣ್ಣೀಕಾಟವನ್ನು ಹಿಡಿದುಕೊಂಡು ಬಂದು ಅದರ ರಕ್ತವನ್ನು ತಗೆದು ಆ ರಕ್ತವನ್ನು ಕನ್ನಡಿಗೆ ಲೇಪನವನ್ನು ಮಾಡಿ ಚನ್ನಾಗಿ ಒಣಗಿಸಬೇಕು. ಆ ಕನ್ನಡಿಯನ್ನು ಸೂರ್ಯನ ಬಿಸಿಲಿನಲ್ಲಿ ಆ ಕನ್ನಡಿಯನ್ನು ತಲೆಯ ಮೇಲೆ ಇಟ್ಟುಕೊಂಡು ಸೂರ್ಯನನ್ನು ನೋಡಿದರೆ ಆ ಸೂರ್ಯನ ಪ್ರಕಾಶವು ಮಂದವಾಗಿ ಕಾಣುವದು. ಆ ಸೂರ್ಯನ ಉಗ್ರಸ್ಥಿತಿಯು ಹೋಗಿ ಸೌಮ್ಯ ಸ್ಥಿತಿಯು ಪ್ರಾಪ್ತವಾಗುವದು.

## ವಿಚಿತ್ರವಾಗಿ ಕಾಣುವಿಕೆ

ಮನುಷ್ಯನು ಚಿತ್ರವಿಚಿತ್ರವಾಗಿ ಕಾಣುವಂತೆ ಮಾಡಬೇಕಾದರೆ ಮೊದಲು ರವಿವಾರ ದಿವಸ ಅಮವಾಸಿಯಿದ್ದಾಗ ಮುತ್ತಲಗಿಡದ ಹೂವುಗಳನ್ನು ತಂದುಯಿಟ್ಟುಕೊಂಡು ನಂತರ ಹಿರೇಮದ್ದಿನಗಡ್ಡೆ, ಮೆಣಸಿಲೆ ಈ ಮೂರನ್ನು ಕೂಡಿಸಿ ಅರೆದು ಗಂಧವನ್ನು ಮಾಡಿ ಆ ತಿಲಕವನ್ನು(ಗಂಧವನ್ನು) ಯಾವನು ಹಣಿಯಲ್ಲಿ ಹಚ್ಚಿಕೊಳ್ಳುವನೋ ಆತನು ನೋಡಿದವರಿಗೆ ಚಿತ್ರ ವಿಚಿತ್ರವಾಗಿ ಕಾಣುತ್ತಾಯಿರುವನು. ಈತನನ್ನು ನೋಡಿದವರೆಲ್ಲರೂ ಭಯ ಗ್ರಹಸ್ಥರಾಗುವರು. ಹಣೆಯೊಳಗಿನ ತಿಲಕವನ್ನು ಅಳಕಿಸಿಕೊಂಡರೆ ಮೊದಲಿನಂತೆ ಕಾಣಲಾರಂಭಿಸುವನು.

ಸೂಚನೆ:— ಈ ಎಲ್ಲ ವಿಷಯಗಳನ್ನು ಮೊದಲು ಮನೆಯಲ್ಲಿ ಮಾಡಿ ನೋಡಿಕೊಂಡನಂತರ ಹೊರಗೆ ಮಾಡಿ ತೋರಿಸಲಿಕ್ಕೆ ಪ್ರಾರಂಭ ಮಾಡ್ಬೇಕು ಎಕಾಏಕಿ ಮಾಡಬಾರದು.



ಶ್ರೀ ಶಿವಶಕ್ತ್ಯೈ ನಮಃ

# ಯಂತ್ರ ವಿಧಾನವು

ಯಂತ್ರಗಳನ್ನು ಬರೆಯತಕ್ಕ ಸಾಧನಾಪೇಕ್ಷೆಯುಳ್ಳವರು ಶ್ರೀ ಸದ್ಗುರು ವಿನಿಂದ ಕೃಪೆಯನ್ನು ಪಡೆದುಕೊಂಡು ದಿನಾಲೂ ಸ್ನಾನ ಸಂಧ್ಯಾ ವಂದನೆ ಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ಮಾಡಿಕೊಳ್ಳುವಂತಸಾಗಿರ ಬೇಕು. ಅಂದರೆ ತಾನು ಬರೆದುಕೊಡುವ ಯಂತ್ರಗಳು ಫಲಪ್ರದವಾಗಿ ಪರಿಣಮಿಸುವವು.

ಹೀಗಿರದೆ ತಮ್ಮ ಇಚ್ಛೆಯ ಪ್ರಕಾರ ತಮ್ಮ ಮನಸ್ಸಿಗೆ ಬಂದಂತೆ ನಡೆದು ಪುಸ್ತಕದಲ್ಲಿ ಇದ್ದದ್ದನ್ನು ನೋಡಿಕೊಂಡು ಬರೆದು ವಿಧಿವಿಧಾನೋಕ್ತವಿಲ್ಲದೆ ಕೊಟ್ಟರೆ ಅದು ಫಲಕಾರಿಯಾಗಲಾರದು. ಇದನ್ನರಿತು ಕಟ್ಟಳೆಯಂತೆ ನಡೆದು ಯಂತ್ರಗಳನ್ನು ಬರೆದು ಕೊಟ್ಟರೆ ಅದು ಆಗಿಂದಾಗಲೇ ಗುಣಕಾರಿ ಯಾಗುತ್ತದೆ. ಇದು ಸಿದ್ಧಾಂತವಾದದ್ದು.

ಕ್ರಮ ತಪ್ಪಿ ಮನಸ್ಸಿಗೆ ಬಂದಂತೆ ನಡೆದು ಪೂಜಾವಿಧಿ ವಿಧಾನೋಕ್ತ ವಿಲ್ಲದೆ ಬರೆದು ಕೊಟ್ಟರೆ ಅದು ಫಲವಾಗುವದಿಲ್ಲ. ಆದ್ದರಿಂದ ಮೇಲೆ ಬರೆದ ಪ್ರಕಾರ ಸಾಧಿಸಿಕೊಂಡು ಯಂತ್ರಗಳನ್ನು ಬರೆಯಿರಿ. ಅಂದರೆ ನಿಮಗೆ ಕೀರ್ತಿ ಯುಂಟಾಗುವದಲ್ಲದೆ ಯಂತ್ರಗಳಿಗೆ ಶೋಭೆಯುಂಟಾಗಿ ಕಟ್ಟಿಕೊಂಡವರ ಕಷ್ಟ ನಷ್ಟ ದುರ್ಮರಣಾದಿ ಕಂಟಕಗಳು ಸಹ ಪರಿಹಾರವಾಗುವವು.

ಕೆಲವರು ಯಂತ್ರಗಳು ಸುಳ್ಳೆಂದು ಅನ್ನುವರು ಯಂತ್ರಗಳು ಸುಳ್ಳಲ್ಲ ನಿಜವಾಗಿ ಸತ್ಯದಿಂದ ಬರೆದು ನಂಬಿಗೆಯಿಂದ ಕಟ್ಟಿಕೊಂಡರೆ ಅದು ಆಗಿಂದಾ ಗಲೇ ಫಲಕಾರಿಯಾಗುವದು. ಸಾಂಬನೊಲಿಯುವದಕ್ಕೆ ನಂಬಿಗೆಯೇ ಮುಖ್ಯ ಕಾರಣವಾಗಿರುವದು ಎಂಬಂತೆ ನಂಬಿಗೆಯುಳ್ಳ ಜೋಳಿಗೆ ಏಳು

ದಿನ ಹೊನ್ನ ಮಳೆಯನ್ನು ಸುರಿಸಿದನು. ಆಗಾಗಿ ನಂಬಿಅಣ್ಣನಿಗೆ ನಿತ್ಯ ಪಡಿ ಹೊನ್ನನ್ನು ಕೊಟ್ಟನು, ಬಸವದಂಡೇಶ್ವರಗೆ ಮೇಲಾದ ಪಂಚಪರುಷವನು ಕೊಟ್ಟನು ಇದೆಲ್ಲವೂ ನಂಬಿಗೆಯ ಫಲವೆಂದೇ ಹೇಳಬೇಕಲ್ಲದೆ ಬೇರೆ ಮತ್ತೇನೂ ಇಲ್ಲ.

ನಂಬಿಗೆ ಎಂಬುವದು । ಶಂಭುವಿನ ಅರಮನೆಯು। ಹುಂಬಹುಸಿಕರು
ಆರಾದರಾಗಲಿ । ನಂಬಿದರೆ ವುಂಬುವರು । ಪಲಪದವ ನಿಜಶರಣ ॥

ಎಂಬಂತೆ ನಂಬಿಗೆಯಿಂದ ಈ ಯಂತ್ರಗಳನ್ನು ಬರೆದು ಕಟ್ಟಿಕೊಂಡರೆ ಅದು ಭಂಗಾರಕ್ಕೆ ಬಂಣ ಹಾಕಿದಂತೆ ಸ್ವಲ್ಪ ವೆಚ್ಚದಲ್ಲಿ ತಮ್ಮ ಅನೇಕ ದೊಡ್ಡ ದೊಡ್ಡ ಕಾರ್ಯಗಳಾಗುವವಲ್ಲದೆ, ಕಂಟಕಾದಿಗಳು, ರೋಗಭೂತ, ಪ್ರೇತ, ಪಿಶಾಚಿಗಳ ಎಲ್ಲ ಭಯವೂ ಪರಿಹಾರವಾಗಿ ಚಿಕ್ಕ ವಯಸ್ಸಿನಲ್ಲಿ ಆಗುವ ಪ್ರಾಣಹಾನಿಗಳು (ಅಪಮೃತ್ಯು) ಸಹ ಪರಿಹಾರವಾಗುವವು.

ಆದಕಾರಣ ಪ್ರಸಂಗಾನುಸಾರ ಸರ್ವರೂ ನಂಬಿಗೆಯಿಂದ ಈ ಯಂತ್ರಗಳನ್ನು ಉಪಯೋಗಮಾಡಿಕೊಂಡು ಸುಖವನ್ನು ಹೊಂದಬೇಕು. ಅಪನಂಬಿಗೆಯನ್ನು ಮಾಡಿಬಿಟ್ಟು ಕಷ್ಟ ನಷ್ಟಗಳಿಗೆ ಗುರಿಯಾಗಬೇಡಿರಿ. ವೈದ್ಯನು ರೋಗವನ್ನು ಕಳೆಯಬಲ್ಲನಲ್ಲದೆ ಹೋಗುವ ಪ್ರಾಣವನ್ನು ನಿಲ್ಲಿಸಲಾರನು. ಈ ಯಂತ್ರಗಳು- ಆ ವೈದ್ಯನಿಂದ ಆಗದ ಕಾರ್ಯಗಳನ್ನು ಮಾಡಬಲ್ಲವು. ಇದನ್ನರಿತು ನಂಬಿಗೆಯಿಟ್ಟು ಉಪಯೋಗ ಮಾಡಿಕೊಂಡು ಆರೋಗ್ಯ ಆಯುಷ್ಯವಂತರಾಗಿ ಬಾಳಿರಿ.

## ಸರ್ವಗ್ರಹಬಿಡುವ ಯಂತ್ರ

| | | | |
|---|---|---|---|
| ಲಂ | ವಂ | ಲಂ | ವಂ |
| ವಂ | ವಂ | ವಂ | ವಂ |
| ಲಂ | ವಂ | ಲಂ | ವಂ |
| ವಂ | ವಂ | ವಂ | ಲಂ |

ಈ ಯಂತ್ರವನ್ನು ಬರೆದು ಅಷ್ಟವಿದಾರ್ಚನೆಯಿಂದ ಪೂಜಿಸಿ ಗ್ರಹಿಸಿದವರಿಗೆ ಕಟ್ಟಲು ಗ್ರಹಗಳು ಬಿಟ್ಟು ಹೋಗುವವು.

## ಹೋದ ಕಳವು ಸಿಗುವ ಯಂತ್ರ

| | | | |
|---|---|---|---|
| ಜಂ | ಥಂ | ಮಂ | ಔಂ |
| ಪಂ | ಚಂ | ತಾಂ | ಐ |
| ನಂ | ವಂ | ಔಂ | ಹ್ರೀಂ |
| ಔಂ | ಕಂ | ಲಂ | ಕ್ಲೀಂ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಶುಚಿರ್ಭೂತರಾಗಿ ಬರೆದು ಷೋಡಶೋಪಚಾರದಿಂದ ಪೂಜಿಸಿ ಈ ಯಂತ್ರವನ್ನು ಓಂ ನಮಃ ಎಂಬ ಮಂತ್ರದಿಂದ ೧೦೮ ಸಾರಿ ಮಂತ್ರಿಸಿ ಶ್ರೀ ಗುರುಧ್ಯಾನದಿಂದ ಕಟ್ಟಿಕೊಳ್ಳಬೇಕು.

ಈ ಯಂತ್ರದ ಫಲವು- ಕಳುವು ಸಿಗುವದು, ರೋಗಿಗೆ ಕಟ್ಟಲು ಮುಕ್ಕಳಾಗುವವು.

## ಸರ್ವ ಬಾಲಗ್ರಹ ಯಂತ್ರವು

| | | | | |
|---|---|---|---|---|
| ೩ | ೭ | ವಾಂ | ೯ | ೧೭ |
| ೫ | ೨೨ | ನಂ | ೧೭ | ೪ |
| ೮ | ೧೯ | ಯಂ | ೫೩ | ೨೧ |
| ೧೪ | ೭ | ಮಂ | ೪೩ | ೨೫ |
| ೨ | ೪ | ಶಿಂ | ೬ | [illegible] |

ಈ ಯಂತ್ರವನ್ನು ಮಡಿ ಹುಡಿಯಿಂದ ಭುಜಪತ್ರಿಯ ಮೇಲೆ ಚಂದನ ಗಂಧದಿಂದ ಬರೆದು ಧೂಪ ದೀಪ ಮೊದಲಾದ ವಿಧಾನೋಕ್ತವಾಗಿ ಪೂಜೆಯನ್ನು ಮಾಡಿ ಒಂದು ಟೆಂಗಿನ ಕಾಯಿಯನ್ನು ಒಡೆದು ಗ್ರಹ ಹಿಡಿದವರಿಗೆ ಕಟ್ಟಲು ಸರ್ವ ಗ್ರಹಗಳೂ ಬಿಟ್ಟು ಹೋಗುವವು. ಮತ್ತು ಸರ್ವರೋಗಗಳೂ ಸಹಪರಿವಾರಹಾಗುವವು. ಇದು ಸಿದ್ಧಾಂತವು. ಮನಗಂಡದ್ದು.

## ಸರ್ವ ಗ್ರಹವುಚ್ಚಾಟನ

| | | |
|---|---|---|
| ಶ್ರ | ೦ | ಶ್ರ |
| ೦ | ಶ್ರ್ರ | ೦ |
| ಶ್ರ | ೦ | ಶ್ರ |

ಈ ಯಂತ್ರವನ್ನು ಭುಜಪತ್ರಿಯ ಮೇಲೆ ಬರೆದು ಅಷ್ಟವಿಧಾರ್ಚನೆಯಿಂದ ಪೂಜಿಸಿ ಧರಿಸಿಕೊಳ್ಳಲು ಸರ್ವಗ್ರಹವುಚ್ಚಾಟನವು.

## ಬೇಗ ಹಡಿಯಲಿಕ್ಕೆ ಯಂತ್ರ

| | | | |
|---|---|---|---|
| ೯ | ೭ | ೩ | ೮ |
| ೫ | ೧ | ೧೫ | ೬ |
| ೧೭ | ೧೩ | ೧೯ | ೪ |
| ೫೩ | ೫೭ | ೫೯ | ೨ |

ಈ ಯಂತ್ರವನ್ನು ತಾಡವಾಲಿಯ ಮೇಲೆ ಚಂದನ ಗಂಧದಿಂದ ಬರೆದು ಅಷ್ಟ ವಿಧಾರ್ಚನೆಯಿಂದ ಪೂಜಿಸಿ ಹಡಿಯಲಾರದವರ ಮೈಮೇಲೆ ತಳಿಯಲು ಬೇಗನೆ ಹಡೆಯುವರು.

## ಅರದೆಲೆಯ ಯಂತ್ರವು

| | | |
|---|---|---|
| ಹ್ರೀ | ೦ | ಹ್ರೀ |
| ಹ್ರಾಂ | ೦ | ಹ್ರಾಂ |

ಈ ಯಂತ್ರವನ್ನು ಕಾಗದದ ಮೇಲೆ ಬರೆದು ವಿಧಾನೋಕ್ತವಾಗಿ ಪೂಜಿಸಿ ಕೆಂಪು ದಾರದಿಂದ ಕಟ್ಟಲು ಅದರಿಂದ ಅರದೆಲೆ ಹೋಗುವದು.

## ನಾಯಿ ಕಡಿಯಬಾರದೆಂಬುದಕ್ಕೆ ಯಂತ್ರ




ಈ ಯಂತ್ರವನ್ನು ಕಾಗದದ ಮೇಲೆ ಬರೆದು ವಿಧಾನೋಕ್ತವಾಗಿ ಪೂಜೆಯನ್ನು ಮಾಡಿ ತನ್ನ ಹತ್ತಿರ ಇಟ್ಟುಕೊಂಡು ಪ್ರಸಂಗಾನುಸಾರ ಅಂಥ ಪ್ರಸಂಗ ಬಂದರೆ ಆ ಕಡಿಯುವ ನಾಯಿಗೆ ಅದನ್ನು ತೋರಿಸಲು ಅದು ಕಚ್ಚಲಾರದು.

## ಅಳುವ ಮಕ್ಕಳಿಗೆ ಕಟ್ಟುವ ಯಂತ್ರ

| | | | |
|---|---|---|---|
| ಕ್ಷ | ರಂ | ಓಂ | ರಂ |
| ಓಂ | ಹ್ರಿಂ | ಹ್ರಿಂ | ಹ್ರುಂ |
| ಹ್ರೆಂ | ಹ್ರೈಂ | ಹ್ರೊಂ | ಹ್ರಂ |
| ಹ್ರಂ | ರಂ | ರಂ | ರಃಂ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿಧಾರ್ಚನೆಯಿಂದ ಪೂಜಿಸಿ ಗುಗ್ಗಳಧೂಪದ ಹೊಗೆಯನ್ನು ಬಡೆಯಿಸಿ ಅಳುವ ಮಕ್ಕಳಿಗೆ ಕಟ್ಟಲು ಅಳುವದು ಸುಮ್ಮನಾಗುವದು ಶಾಂತಿಯು

## ಹುಡುಗು ಜನರ ಬಾಯಿ ಕಟ್ಟುವ ಯಂತ್ರ

| | | | | |
|---|---|---|---|---|
| ೬ | ೧೬ | ೨೦ | ೪ | ೮ |
| ೧೮ | ೫ | ೭ | ೨೬ | ೩೫ |
| ೩ | ೯ | ೧೬ | ೧೧ | ೧೪ |
| ೨೩ | ೧೩ | ೨೯ | ೩೦ | ೬ |
| ೫೨ | ೫೬ | ೫೯ | ೪೯ | ೪೬ |

ಈ ಯಂತ್ರವನ್ನು ತಾಂಬ್ರದ ತಗಡಿನ ಮೇಲೆ ಆದಿತ್ಯವಾರ ಅಮಾವಾಸಿಯ ದಿವಸ ಬರೆದು ಷೋಡಶೋಪಚಾರದಿಂದ ಪೂಜಿಸಿ ಗುಗ್ಗಳ ಧೂಪದ ಹೊಗೆಯನ್ನು ಹಾಕಿ ಒಂದು ಕಾಯಿ ಒಡೆದು ಇರಿಸಲು ಹುಡುಗು ಜನರು ಬಾರರು.

## ಬಾಲಗ್ರಹ ನಿವಾರಣ ಯಂತ್ರ




ಇದು ಬಾಲಗ್ರಹ ಯಂತ್ರವು ಈ ಯಂತ್ರವನ್ನು ಚಿನ್ನದ ತಗಡಿನಲ್ಲಿ ಬರೆದು ಅಷ್ಟವಿಧಾರ್ಚನೆಯಿಂದ ಪೂಜೆಯನ್ನು ಮಾಡಿ ಬಾಲಕರಿಗೆ ಧರಿಸಲು ಆ ಬಾಲಕರಿಗೆ ಬಾಲಗ್ರಹ ಎಂದೂ ತಗಲುವದಿಲ್ಲ.

| | | | | |
|---|---|---|---|---|
| ಕ | ರ | ಬಂ | ಲ | ವ |
| ಶ | ಓಂ | ವ | ರು | ಲ |
| ವಿ | ರ | ಲೆ | ರ | ತಿ |
| ಬ | ಮ | ರ | ಲ | ವ |
| ದೆ | ವ | ದ | ತ್ರ | ಸ್ಯ |

## ಕನಸು ಬೀಳುವವರಿಗೆ ಯಂತ್ರ

ಈ ಯಂತ್ರವನ್ನು ತಾವ್ರದ ತಗಡಿನ ಮೇಲೆ ರವಿವಾರ ದಿವಸ ಬರೆದು ವಿಧಾನೋಕ್ತವಾಗಿ ಧೂಪ ದೀಪಗಳಿಂದ ಪೂಜಿಸಿ ಒಂದು ಟೆಂಗಿನಕಾಯಿಯನ್ನು ಒಡೆದು ಶನಿವಾರವನ್ನು ಮಾಡಿ ಕಟ್ಟಲು ಕನಸು ಬೀಳುವದು ನಿಲ್ಲುವದು.




## ಗ್ರಹ ವುಚ್ಚಾಟನ ಯಂತ್ರ

ಈ ಯಂತ್ರವನ್ನು ತಾವ್ರದ ತಗಡಿನ ಮೇಲೆ ಬರೆದು ಅಷ್ಟವಿಧಾರ್ಚನೆಯಿಂದ ಪೂಜಿಸಿ ಕಟ್ಟಲು ಸರ್ವಗ್ರಹಗಳು ಬಿಟ್ಟು ಹೋಗುವವು. ಯಂತ್ರ ಓಂವೀರ ಉಚಾಟಣ ಸವಃ ಎಂದು ೧೦೮ ಸಾರೆ ಮಂತ್ರಿಸಿ ಕಟ್ಟಲು ಸರ್ವಗ್ರಹ ಬಿಟ್ಟು ಹೋಗುವವು ಸಿದ್ಧಾಂತವು.

| | | | |
|---|---|---|---|
| ಉ | ರಂ | ಲಂ | ಉ |
| ಅ | ಇ | ಆ | ಈ |
| ಉ | ಲಂ | ರಂ | ಉ |
| ದೇ | ವ | ದ | ತ್ರ |

## ಗ್ರಹ ಸೋಂಕದಯಂತ್ರ

ಈ ಯಂತ್ರವನ್ನು ತಾವ್ರದ ತಗಡಿನ ಮೇಲೆ ಆದಿತ್ಯವಾರ ದಿವಸ ಬರೆದು ವಿಧಾನೋಕ್ತಾಪಾಗಿ ಪೂಜೆಯನ್ನು ಮಾಡಿ ಮನಿಯ ಬಾಗಿಲದಲ್ಲಿ ಕಟ್ಟಲು ಯಾವ ಗ್ರಹವೂ ಹೊಂದಲರಿಯವು ಸಿದ್ಧಾಂತವು

## ವ್ಯಾಪಾರದಲ್ಲಿ ಜಯಕೊಡುವ ಯಂತ್ರ

| | | |
|---|---|---|
| ಬ್ರ | ದ್ರೈ | ಬೆ |
| ಜ | ದೇವದತ್ತಸ್ಯ | ಪ್ಲೋ |
| ಪ | ವೆ | ಜ್ಯೈ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿಧಾರ್ಚನೆ ಯಿಂದ ಪೂಜಿಸಿ ಗುರುದೇವತಾದಿಗಳನ್ನು ರವಿವಾರ ದಿವಸ ತಯಾರಿಸಿ ತನ್ನ ಳಿಯಲ್ಲಿ ಇಟ್ಟುಕೊಂಡರೆ ವ್ಯಾಪಾರದಲ್ಲಿ ಜಯವಾಗುವದು ಇದನ್ನು ನಿತ್ಯ ಲ್ಲಿಯೂ ಪೂಜಿಸತಕ್ಕದ್ದು ಪೂಜಿಸದೆ ಬಿಟ್ಟರೆ ಹುಶಿಯಾಗುವದು ಜೋಕೆ ಯಿಂದ ಇರಿಸಿಕೊಳ್ಳತಕ್ಕದ್ದು

## ಸರ್ವಕಾರ್ಯಸಿದ್ಧಿ ಯಂತ್ರ




ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಆದಿತ್ಯವಾರ ಅಮ- ವಾಶಿಯ ದಿವಸ ಶುಚಿರ್ಭೂತನಾಗಿದ್ದು ಬರೆದು ಶೋಡಶೋಪಚಾರದಿಂದ ಇದನ್ನು ಪೂಜಿಸಿ ಒಂದು ಟೆಂಗಿನಕಾಯಿಯನ್ನು ವಡೆದು ಕಟ್ಟಿಕೊಳ್ಳಲು ಸರ್ವಕಾರ್ಯ ಶಿದ್ಧಿಯಾಗುವದು.

## ಸ್ತ್ರೀ ವಶ್ಯಾದ ಯಂತ್ರ

| | | | |
|---|---|---|---|
| ಶ್ರೀ | ಶ್ರೀ | ಶ್ರೀ | ಶ್ರೀ |
| ದೆ | ವ | ದ | ತ್ತ |
| ಕ್ಷ | ಕ್ಷ | ಕ್ಷ | ಕ್ಷ |

ಈ ಯಂತ್ರವನ್ನು ಬೂದಿಯಲ್ಲಿ ಬರೆದು ತನಗೆ ಯಾವ ಸ್ತ್ರೀಯಳು ಬೇಕಾಗಿರುವಳೋ ಆ ಸ್ತ್ರೀಯಳ ಹೆಸರಿನಿಂದ ದೇವದತ್ತಾ್ಯಸ್ಯ ಎಂದು ಹನ್ನೊಂದು ಬಾರಿ ಮಂತ್ರಿಸಿ ಆಕೆಯ ಮೇಲೆ ಚಲ್ಲಲು ವಶ್ಯವು.

## ಹೆಂಡತಿ ವಲೆಯುವ ಯಂತ್ರ

| | | | |
|---|---|---|---|
| ಹ್ರಿಂ | ಹ್ರಾಂ | ಹ್ರಿಂ | ಹುಂ |
| ಹ್ರೌಂ | ಹ್ರೌಂ | ಹ್ರಂ | ಹ್ರಃ |
| ಹ್ರಂ | ಹ್ರಾಂ | ಹ್ರಿಂ | ಹುಂ |
| ಹ್ರೂಂ | ಹ್ರೆಂ | ಹ್ರೈಂ | ಹ್ರ |
| ಇಲ್ಲಿ ಹೆಸರು ಬರೆಯಬೇಕು | | | |

ತನ್ನ ಹೆಂಡತಿಯು ತನಗೆ ಅನುಕೂಲವಾಗಿದ್ದರೆ ಅಡ್ಡಿಯಿಲ್ಲ ತನಗೆ ಅನುಕೂಲ ಇರದಿದ್ದರೆ ಮಾತ್ರ ಈ ಯಂತ್ರವನ್ನು ತಾಂಬ್ರದ ತಗಡಿನಲ್ಲಿ ಆದಿತ್ಯವಾರ ಅವುವಾಸಿಯ ದಿವಸ ಬರೆದು ಅಷ್ಟವಿಧಾರ್ಚನೆಯಿಂದ ಅದನ್ನು ಪೂಜಿಸಿ ಕಟ್ಟಿಕೊಂಡರೆ ತನಗೆ ಅನುಕೂಲವಾಗಿ ಇರುವಳೆಂದು ತಿಳಿಯಬೇಕು.

## ಮಕ್ಕಳ ಜ್ವರಕ್ಕೆ ಯಂತ್ರ

| | | |
|---|---|---|
| ಕ್ಷಂ | ರಂ | ಕ್ಷಂ |
| ರಂ | ರಂ | ರಂ |
| ಕ್ಷಂ | ರಂ | ಕ್ಷಂ |

ಈ ಯಂತ್ರವನ್ನು ಕಾಗದದ ಮೇಲೆ ಬರೆದು ಅಷ್ಟವಿಧಾರ್ಚನೆಯಿಂದ ಅದನ್ನು ಪೂಜೆಯನ್ನು ಮಾಡಿ ಕಟ್ಟಲು ಮಕ್ಕಳ ಜ್ವರ ಪರಿಹಾರವಾಗುವವು.

| | | | |
|---|---|---|---|
| ೬ | ೧೨ | ೩ | ೯ |
| ೧೩ | ೧೫ | ೪ | ೧೮ |
| ೨ | ೧ | ೭ | ೬ |

## ಮಕ್ಕಳ ಶಾಂತಿಗೆ ಯಂತ್ರ

ಈ ಯಂತ್ರವನ್ನು ಕಾಗದದ ಮೇಲೆ ಬರೆದು ಅಷ್ಟವಿಧಾರ್ಚನೆಯಿಂದ ಅದನ್ನು ಪೂಜೆಯನ್ನು ಮಾಡಿ ರವಿವಾರ ದಿವಸ ಕಟ್ಟಲು ಶಾಂತಿ ಕಾರಿಕೊಳ್ಳುವದು ಪರಿಹಾರವಾಗುವದು.



## ನಾಯಿಯ ಬಾಯಿ ಕಟ್ಟು

ಈ ಯಂತ್ರವನ್ನು ಬರೆದುಕಟ್ಟಲು ನಾಯಿಯಬಾಯಿ ಕಟ್ಟುವದುಇದನ್ನು ಕಾಗದಧ ಮೇಲೆ ಬರೆದುಕಟ್ಟುವದು

| | | | | |
|---|---|---|---|---|
| ಅ | ಆ | ಅ | ಹಂ | ಮುಂ |
| ಹ್ರಾಂ | | ಹ್ರೊಂ | | ಪ್ರೆಂ |
| | | ನಾ | ಸಿ | |

## ಹಾವು ಜರಿ ಹೋಗುವ ಯಂತ್ರ

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ಆದಿತ್ಯವಾರ ದಿವಸ ಬರೆದು ಅಷ್ಟ ವಿದಾರ್ಚನೆಯಿಂದ ಪೂಜಿಸಿ ಮನೆಯಲ್ಲಿ ಇರಿಸಲು ಜರಿ ಹಾವು ಮೊದಲಾದ ಜೀವತಂತುಗಳು, ಹೋಗುವವು.




## ಜ್ವರ ನಿವಾರಣ ಯಂತ್ರ

ಈ ಯಂತ್ರವನ್ನು ಕಾಗದದ ಮೇಲೆ ಬರೆದು ಪೂಜಿಸಿ ಮಕ್ಕಳಿಗೆ ಕಟ್ಟಲು ಸುಳಜ್ವರ ಹೋಗುವವು.

## ಬೆಂಕೆ ಬಾರದಂತೆ ಮಾಡುವ ಯಂತ

| | | |
|---|---|---|
| ಗ | ಇ | ಬಂ |
| ವ್ವ | ಕಂ | ವ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಆದಿತ್ಯವಾರ ದಿವಸ ಬರೆದು ಕಡೆಯುವ ಕಂಬಕ್ಕೆ ಕಟ್ಟಲು ಬೆಂಕೆ ಬರುವದಿಲ್ಲ.

## ಸ್ತ್ರೀ ವಶದ ಯಂತ್ರ

| ಪುರುಷನ ಹೆಸರು | | |
|---|---|---|
| ಸ್ರಿ | ಹ್ರಿಂ | ಹ್ರಿಂ |
| ಹ್ರಿಂ | ಹ್ರಿಂ | ಹ್ರಿಂ |
| ಸ್ರಿ | ಸ್ರಿ | ಸ್ರಿ |
| ಸ್ತ್ರೀಯಳ ಹೆಸರು | | |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಆದಿತ್ಯವಾರ ದಿವಸ ಬರೆದು ವಿಧಾನೋಕ್ತ ವಾಗಿ ಅದನ್ನು ಪೂಜಿಸಿ ಪುರುಷನ ಹೆಸರನ್ನು ಮೇಲೆ ಬರೆದು ಸ್ತ್ರೀಯಳ ಹೆಸರನ್ನು ಕೆಳಗೆ ಬರೆದು ಕಟ್ಟಿಕೊಂಡರೆ ಸ್ತ್ರೀ ವಶವು.

## ದನದ ಬಾಯಿ ರೋಗನಿವಾರಣ ಯಂತ್ರ

| | | |
|---|---|---|
| ರಂ | ಓಂ | ರಂ |
| ಓಂ | ಜಿಂ ಕ ದೆ ಥೆ<br>ಜ ಹೆಂ ಡೆ | ಓಂ |
| ರಂ | ಓಂ | ರಂ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಆದಿತ್ಯವಾರ ದಿವಸ ಬರೆದು ವಿದಾನೋಕ್ತ ಪೂಜಿಸಿ ಶುಚಿರ್ಭೂತ ನಾಗಿ ಕಟ್ಟಲು ದನದ ಬಾಯಿ ರೋಗವು ಪರಿಹಾರವಾಗುವದು.

## ರಾಜ ವಶದ ಯಂತ್ರ

| | | |
|---|---|---|
| ಓಂ | ಹ್ರೀಂ | ಓಂ |
| | ಹ್ರಿಂ | |
| ಓಂ | ಹ್ರೀಂ | ಓಂ |

ಈ ಯಂತ್ರವನ್ನು ಕಾಗದದ ಮೇಲೆ ಆದಿತ್ಯವಾರ ದಿವಸ ಬರೆದ್ದು ವಿಧಾನೋಕ್ತವಾಗಿ ಪೂಜಿಸಿ ತನ್ನ ಬಳಿಯಲ್ಲಿ ಇಟ್ಟುಕೊಂಡು ರಾಜ ದರ್ಶನಕ್ಕೆ ಹೋಗಲು ತನಗೆ ವಶವಾಗುವದು.

## ನವಗ್ರಹ ಯಂತ್ರವು

| | | | | |
|---|---|---|---|---|
| ನಂ | ೬ | ೧ | ೮ | ಯ |
| ಮ | ೭ | ೫ | ೩ | ವಾ |
| ಸ್ವ | ೨ | ೯ | ೪ | ಶಿ |

ಈ ಯಂತ್ರವನ್ನು ಬೆಳ್ಳಿಯ ತಗಡಿನ ಮೇಲೆ ಬರೆದು ಅಷ್ಟವಿದಾರ್ಚನೆಯಿಂದ ಪೂಜಿಸಿ ಶಿಶುಗಳಿಗೆ ಧರಿಸಲು ನವಗ್ರಹ ಶಾಂತಿಯಾಗುವದು. ಇದನ್ನು ಕೊರಳೊಳಗಿನ ಅಸಲಿಯಲ್ಲಿ ಹಾಕಿದರೂ ಒಳ್ಳೆದು.

## ಗರ್ಭಧಾರಣ ಯಂತ್ರ

| | | | | |
|---|---|---|---|---|
| ಓಂ | ವಾಂ | ನಂ | ಓಂ | ಶಿಂ |
| ಶಿಂ | ಮಂ | ಯಂ | ಶಿಂ | ಯ |
| ಯಂ | ವಾಂ | ವಾಂ | ಮಂ | ನಂ |
| ಮಂ | ಓಂ | ನಂ | ಮಂ | ಶಿಂ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಆದಿತ್ಯವಾರ ದಿವಸ ಬರೆದು ದಶೋಪಚಾರದಿಂದ ಅದನ್ನು ಪೂಜಿಸಿ ಭಕ್ತಿಪೂರ್ವಕವಾಗಿ ನಂಬಿಗೆಯಿಂದ ಅದಕ್ಕೆ ಒಂದು ಕಾಯನ್ನು ವಡೆದು ಧರಿಸಿಕೊಳ್ಳಬೇಕು. ಮತ್ತು ಇದನ್ನು ದಿನಾಲೂ ಪೂಜಿಸುತ್ತಿರಬೇಕು. ಗರ್ಭಧಾರಣೆ ಆಗುವದು.

## ಮತ್ತೊಂದು ಪ್ರಕಾರಯಂತ್ರ

| | | | | |
|---|---|---|---|---|
| ಓಂ | ಶಿಂ | ಯಂ | ಮಂ | ಮಂ |
| ವಾಂ | ಶಿಂ | ಯಂ | ಮಂ | ನಂ |
| ನಂ | ವಾಂ | ಓಂ | ಮಂ | ವಾಂ |
| ನಂ | ನಂ | ಶಿಂ | ಯಂ | ಓಂ |

ಈ ಯಂತ್ರವನ್ನು ಗುರುವಾರ ದಿವಸ ಮಡಿಹೂಡಿಯಿಂದ ಶ್ರೀ ಗುರುಧ್ಯಾನ ಯುಕ್ತನಾಗಿ-ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಪೂಜಿಸಿ ಭಕ್ತಿಪೂರ್ವಕವಾಗಿ ಧರಿಸಿಕೊಳ್ಳಬೇಕು. ನಿಮ್ಮ ನಂಬುಗೆಯು ಹೇಗೆ ಇರುವದೊ ಹಾಗೆ ಗರ್ಭಧಾರಣೆಯಾಗುವದು.

## ಇನ್ನೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ಕ್ಷಂ | ರಂ | ಬ್ರಂ | ಲಂ | ಹ್ರಿಂ |
| ಶ್ರೀಂ | ಲಾಂ | ಕ್ಷಾಂ | ಹ್ರುಂ | ಠಂ |
| ಹ್ರಾಂ | ಹ್ರಿಂ | ಹ್ರೂಂ | ಹ್ರೆಂ | ಹ್ರಂ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿದಾರ್ಚನೆಯಿಂದ ಪೂಜಿಸಿ ಗರ್ಭಧಾರಣೆಯಾಗದ ಸ್ತ್ರೀಯರಿಗೆ ಧರಿಸಲು ಗರ್ಭಧಾರಣೆಯಾಗುವದು ಈ ಮೂರು ಯಂತ್ರಗಳನ್ನು ಜೋಕೆಯಿಂದ ಕಟ್ಟಿಕೊಳ್ಳಬೇಕು.

## ಇನ್ನೊಂದು ಪ್ರಕಾರದ ಯಂತ್ರ

| | | | |
|---|---|---|---|
| ದೆ | ದ | ದೆ | ತ್ರ |
| ವ | ದೆ | ದ | ತ್ರ |
| ವ | ದ | ತ | ವ |
| ತ್ರ | ದ | ವ | ದೆ |
| ಇಲ್ಲಿ ಹೆಸರು ಬರೆಯಿರಿ | | | |

ಈ ಯಂತ್ರವನ್ನು ತಾಂಬ್ರದ ತಗಡಿನ ಮೇಲೆ ರವಿವಾರ ದಿವಸ ಬರೆದು ದಶೋಪಚಾರದಿಂದ ಪೂಜಿಸಿ ಕೆಂಪುದಾರದಿಂದ ಗರ್ಭಧಾರಣೆಯಾಗದ ಸ್ತ್ರೀಯರಿಗೆ ಧರಿಸಲು ಜಾಗ್ರತೆ ಗರ್ಭಧಾರಣೆಯಾಗುವದು ಇದನ್ನು ಭಕ್ತಿಯಿಂದ ಪೂರ್ವಕವಾಗಿ ಜೋಕೆಯಿಂದ ಕಟ್ಟಿಕೊಳ್ಳಬೇಕು.

## ಮನೆಯಲ್ಲಿ ಇಲಿ-ಹೆಗ್ಗಣ ಹೆಚ್ಚಾದರೆ ಯಂತ್ರ

| | | | |
|---|---|---|---|
| ೫೬ | ೧೪ | ೩೭ | ೬೩ |
| ೧೨ | ೨೬ | ೯ | ೫೨ |
| ೫೫ | ೪೫ | ೩೫ | ೨೫ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿದಾರ್ಚನೆಯಿಂದ ಅದನ್ನು ಪೂಜಿಸಿ ಮನೆಯಲ್ಲಿ ಇರಿಸಲು ಇಲಿ-ಹೆಗ್ಗಣ ಹೋಗುವವು.

## ಮನೆಯಲ್ಲಿ ಹಾವು ಸೇರಿದ್ದರೆ ಯಂತ್ರ

| | | | |
|---|---|---|---|
| ಆ | ಕ | ನಿ | ಜಂ |
| ನ | ಆ | ಕ | ನಿ |
| ಮ | ಸ್ತಿ | ಮು | ನಮ |
| ತೆ | ರಾ | ಮು | ಸ್ತಿ |

ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ಆದಿತ್ಯವಾರ ದಿವಸ ಇದನ್ನು ಮನೆಯಲ್ಲಿ ಇರಿಸಲು ಸೇರಿದ್ದ ಹಾವು ಬಿಟ್ಟು ಹೋಗುವವು.

## ಕಣ್ಣು ಬೇನೆಯ ಯಂತ್ರ

| | | |
|---|---|---|
| ೭ | ೩ | ೧೨ |
| ೯ | ೫ | ೨ |
| ೬ | ೪ | ೧ |

ಈ ಯಂತ್ರವನ್ನು ಕಾಗದದ ಮೇಲೆ ಬರೆದು ಧೂಪದೀಪಗಳಿಂದ ಪೂಜಿಸಿ ಕಟ್ಟಲು ಕಣ್ಣಿನ ಬೇನೆಯು ಪರಿಹಾರವಾಗುವದು.

## ಜ್ವರದ ಯಂತ್ರ




ಈ ಯಂತ್ರವನ್ನು ಕಾಗಗದ ಮೇಲೆ ಬರೆದು ಅಷ್ಟೋಪಚಾರದಿಂದ ಪೂಜಿಸಿ ಕರೇಪಾರದಿಂದ ಜ್ವರಬಂದ ಕೂಸಿಗೆ ಕಟ್ಟಲು ಸರ್ವ ಜ್ವರಗಳು ನಾಶವಾಗುವವು.

| | | | |
|---|---|---|---|
| ದೆ | ದ | ಖ | ವ |
| ಕೂಸಿನ ಹೆಸರು | | | |
| ವ | ತ್ರ | ದೆ | ದ |

## ಮತ್ತೊಂದು ಪ್ರಕಾರದ ಯಂತ್ರ

ಈ ಯಂತ್ರವನ್ನು ತಾಂಬ್ರದ ತಗಡಿನ ಮೇಲೆ ಬರೆದು ವಿಧಾನನೋಕ್ತವಾಗಿ ಪೂಜಿಸಿ ಜ್ವರ ಬಂದ ಕೂಸಿಗೆ ಧರಿಸಲು ಸರ್ವ ಜ್ವರ ನಿವಾರಣವಾಗುವವು.

| | | | |
|---|---|---|---|
| ೬ | ೨ | ೧೩ | ೫೫ |
| ೯ | ೭ | ೨೩ | ೪೫ |
| ೪ | ೫ | ೩೩ | ೩೫ |
| ೩ | ೧ | ೪೩ | ೨೫ |

## ಮೊಲೆಯನುಣ್ಣದ ಕೂಸಿಗೆಯಂತ್ರ

ಈ ಯಂತ್ರವನ್ನು ಮೊಲೆಯನುಣ್ಣದ ಕೂಸಿಗೆ ಕಾಗದದ ಮೇಲೆ ಕೆಂಪು ಮಸಿಯಿಂದ ಬರೆದು ಹಸರು ದಾರದಿಂದ ಅದನ್ನು ಕಟ್ಟಬೇಕು. ಅಂದರೆ ಕೂಸು ಮೊಲೆಯನುಣ್ಣುವದು.

## ಸರ್ವ ಗ್ರಹ ಉಚ್ಚಾಟಣ ಯಂತ್ರ

| | | | | | | |
|---|---|---|---|---|---|---|
| ಕ | ಳಿ | ಸ | ನ | ಯ | ಕ | ಳಿ |
| ಸ | ನ | ಯ | ಕ | ಳಿ | ಸ | ನ |
| ಯ | ಕ | ಳಿ | ಸ | ನ | ಯ | ಕ |
| ಳಿ | ಸ | ನ | ಯ | ಕ | ಳಿ | ಸ |
| ನ | ಯ | ಕ | ಳಿ | ಸ | ನ | ಯ |

ಇದು ಗ್ರಹ ಉಚ್ಚಾಟನ ಯಂತ್ರವು. ಇದನ್ನು ಗ್ರಹ ಹಿಡಿದವರಿಗೆ ಶುಚಿರ್ಭೂತರಾಗಿ ತಾಮ್ರದ ತಗಡಿನ ಮೇಲೆ ಬರೆದು ಅಷ್ಟೋಪಚಾರದಿಂದ ದಕ್ಷಿಣೆ ಸಹಿತವಾಗಿ ಪೂಜಿಸಿ ಐದು ಬಂಣದ ದಾರದಿಂದ ಗ್ರಹ ಹಿಡಿದವರಿಗೆ ಕಟ್ಟಲು ಸರ್ವಗ್ರಹಗಳು ಬಿಟ್ಟು ಹೋಗುವವು. ಅನುಭವಸಿದ್ಧ ವಾದ ಸಿದ್ಧಾಂತವು.

## ಅಳುವ ಮಕ್ಕಳಿಗೆ ಕಟ್ಟುವ ಯಂತ್ರ

| | | |
|---|---|---|
| ಓಂ | ತ್ರಾಂ | ಓಂ |
| ಓಂ | ತ್ರಾಂ | ಓಂ |
| ತ್ರಾಂ | ಓಂ | ತ್ರಾಂ |

ಈ ಯಂತ್ರವನ್ನು ಅಳುವ ಮಕ್ಕಳಿಗೆ ಕಟ್ಟುವದು. ಇದನ್ನು ಕಾಗದದ ಮೇಲೆ ಬರೆದು ಧೂಪವಹಾಕಿ ಕರೇದಾರದಿಂದ ಅಥವಾ ಹಸರು ದಾರದಿಂದ ಗುರುಧ್ಯಾನ ಮಾತ್ರದಿಂದ ಕಟ್ಟಲು ಬಹಳ ಅಳುತ್ತಿದ್ದ ಕೂಸುಗಳುಸುಮ್ಮನಾಗುವವು

## ಸರ್ವ ರಕ್ಷಾ ಯಂತ್ರವು

| | | | |
|---|---|---|---|
| ಹ | ದ್ರ | ಕ್ಷೆ | ಹ |
| ದೇವ | ಕ್ಷ | ಕ್ಷಂ | ದತ್ತ |

ಇದು ಸರ್ಪ ರಕ್ಷಾಯಂತ್ರವು. ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ವಿಧಿ ವಿಧಾನೋಕ್ತ ವಾಗಿ ಪೂಜಿಸಿ ಗುಗ್ಗಳದ ಧೂಪ ವನ್ನು ಹಾಕಿ ಕೆಂಪು ಬಿಳಿದಾರದಿಂದ ಆ ಯಂತ್ರವನ್ನು ತೊಟ್ಟಿಲಿಗೆ ಕಟ್ಟಲು ಒಳ್ಳೇದು. ಸರ್ವರಕ್ಷೆಯು.

## ಮತ್ತೊಂದು ಸರ್ವ ರಕ್ಷಾ ಯಂತ್ರ

| | | |
|---|---|---|
| ಅ | ಓಂ | ಅ |
| ಆ | ಖ | ಆ |

ಈ ಯಂತ್ರವನ್ನು ತಾಮ್ರದ ತಗಡಿನಲ್ಲಿ ಬರೆದು ಪೂಜಿಸಿ ಕಟ್ಟಿಕೊಳ್ಳಲು ಸರ್ವ ರಕ್ಷೆಯು. ಇದನ್ನು ಜೋಕೆಯಿಂದ ಕಟ್ಟುವದು.

## ನವಗ್ರಹದ ಯಂತ್ರವು

| | | |
|---|---|---|
| ೪ | ೯ | ೨ |
| ೩ | ೫ | ೭ |
| ೮ | ೧ | ೬ |

ಈದು ನವಗ್ರಹದ ಯಂತ್ರವು. ಇದನ್ನು ಬೆಳ್ಳಿಯ ತಗಡಿನಲ್ಲಿ ಬರೆದು ಹುಡುಗರ ಕೊರಳೊಳಗಿನ ಅಸಲಿಯೊಳಗೆ ಹಾಕಬೇಕು. ಇಲ್ಲವೆ ಕರೇದಾರದಿಂದ ಕೊರಳಲ್ಲಿ ಕಟ್ಟಬೇಕು. ಅಂದರೆ ಹುಡುಗರಿಗೆ ಗ್ರಹಗಳ ಬಾಧೆಯಾಗಲಾರದು

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೫೫ | ೭೫ | ೯೫ | ೮೫ | ೨೫ |
| ೩೫ | ೪೫ | ೬೫ | ೪೫ | ೩೫ |
| ೬೫ | ೧೫ | ೩೫ | ೭೫ | ೬೫ |
| ೩೫ | ೫೫ | ೧೫ | ೬೫ | ೨೫ |
| ೪೫ | ೨೫ | ೭೫ | ೫೫ | ೧೫ |

ಈ ಯಂತ್ರವು ಮೃತ್ಯುಂಜಯ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟೋಪಚಾರ ದಿಂದ ಅದನ್ನು ಪೂಜಿಸಿ ದೂಪದ ಹೊಗೆಯಿಂದ ತಯಾರಿಸಿ ಮಂದು ಟಿಂಗಿಸಕಾಯಿಯನ್ನು ಪಡೆದು ಜೋಕೆಯಿಂದಉಪಯೋಗ ಮಾಡಿ ಕೊಳ್ಳಬೇಕು.

## ತನು ಪೌರುಷದ ಯಂತ್ರವು

| | | | | | |
|---|---|---|---|---|---|
| ಹ | ಷF | ಹ | ಷF | ಹ | ಷF |
| ಷF | ಹ | ಷF | ಹ | ಷF | ಹ |
| ಹ | ಷF | ಹ | ಷF | ಹ | ಷF |
| ಹ | ಷF | ಹ | ಷF | ಹ | ಷF |
| ಷF | ಹ | ಷF | ಹ | ಷF | ಹ |

ಇದು ತನ್ನ ಪೌರುಷದ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟೋಪಚಾರದಿಂದ ಆ ಯಂತ್ರ ವನ್ನು ದೂಪದ ಹೊಗೆಯಿಂದ ಪೂಜಿಸಿ ಧರಿಸಿಕೊಳ್ಳಲು ತಾನು ಪೌರುಷ ವಾಗುವದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೯ | ೧೨ | ೧೫ | ೪ | ೬ |
| ೩ | ೯ | ೧೨ | ೧೫ | ೭ |
| ೫ | ೩ | ೯ | ೧೨ | ೧೫ |
| ೧ | ೫ | ೩ | ೯ | ೧೨ |
| ೬ | ೫ | ೩ | ೭ | ೯ |

ಈ ಯಂತ್ರವು ತಾನು ಪೌರುಷದ ಯಂತ್ರವು ಈ ಯಂತ್ರವನ್ನು ಗುರುವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ದೂಪ ಸಹಿತವಾಗಿ ಪೂಜಿಸಿ ನಂಬಿಗೆಯಿಂದ ಇದನ್ನು ಉಪಯೋಗ ಮಾಡಿಕೊಳ್ಳಬೇಕು.

## ಸಂತಾನ ವೃದ್ಧಿಯಾಗುವ ಯಂತ್ರ

| | | | | |
|---|---|---|---|---|
| ಓಂ | ಅಂ | ಓಂ | ಅಂ | ಓಂ |
| ಅಂ | ಓಂ | ಅಂ | ಓಂ | ಅಂ |
| ಓಂ | ಅಂ | ಓಂ | ಅಂ | ಓಂ |
| ಅಂ | ಓಂ | ಅಂ | ಓಂ | ಅಂ |
| ಓಂ | ಅಂ | ಓಂ | ಅಂ | ಓಂ |

ಇದು ಸಂತಾನವೃದ್ಧಿಯ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ದಿವಸ ಗ್ರಹಣ ಹಿಡಿದಾಗ್ಗೆ ಅಥವಾ ಅಮವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿದಾರ್ಚನೆಯಿಂದ ಪೂಜಿಸಿ ಸಂತಾನ ಹೀನರು ಧರಿಸಿಕೊಳ್ಳಲು ಸಂತಾನವೃದ್ಧಿ ಯಾಗುವದು ಸಿದ್ಧಾಂತವಾದದ್ದು

## ಮತ್ತೊಂದು ಪ್ರಕಾರ ಯಂತ್ರ

ಇದು ಸಂತಾನ ವೃದ್ಧಿಯ ಯಂತ್ರ ಇದನ್ನು ರವಿವಾರ ಅಮವಾಶಿಯ

| | | | | |
|---|---|---|---|---|
| ೯ | ೭ | ೩ | ೭ | ೯ |
| ೫ | ೯ | ೬ | ೯ | ೩ |
| ೭ | ೫ | ೯ | ೫ | ೩ |
| ೫ | ೯ | ೭ | ೯ | ೫ |
| ೯ | ೭ | ೬ | ೩ | ೯ |

ದಿವಸ ತಾವ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಆ ಯಂತ್ರವನ್ನು ಪೂಜಿಸಿ ಗುಗ್ಗಳದ ಹೊಗೆಯನ್ನು ಬಡೆಯಿಸಿ ಒಂದು ಟೆಂಗಿನಕಾಯಿಯನ್ನು ವಡೆದು ಪನಿವಾರವನ್ನು ಮಾಡಿ ಭಕ್ತಿಪೂರ್ವಕವಾಗಿ ಉಪಯೋಗ ಮಾಡಿಕೊಳ್ಳಬೇಕು.

## ಅಳುವ ಮಕ್ಕಳಿಗೆ ಕಟ್ಟುವ ಯಂತ್ರ

| | | | |
|---|---|---|---|
| ೧ | ೩ | ೭ | ೨ |
| ೯ | ೧ | ೨ | ೪ |
| ೫ | ೨ | ೧ | ೬ |
| ೨ | ೮ | ೫ | ೧ |

ಇದು ಅಳುವ ಮಕ್ಕಳಿಗೆ ಕಟ್ಟುವ ಯಂತ್ರವು ಈ ಯಂತ್ರವನ್ನು ಅಳುವ ಮಕ್ಕಳಿಗೆ ಕಟ್ಟುವ ಯಂತ್ರ ಈ ಯಂತ್ರವನ್ನು ಕಾಗದದ ಮೇಲೆ ಬರೆದು ವಿಧಾನೋಕ್ತ ಪೂಜಿಸಿ, ಕಟ್ಟಲು ಶಾಂತಿಯಾಗುವದು.

## ಅನ್ನ ಸಿದ್ಧಿ ಯಂತ್ರ

ಇದು ಅನ್ನ ಸಿದ್ಧಿ ಯಂತ್ರವು. ಈ ಯಂತ್ರವನ್ನು ಆದಿತ್ಯವಾರ ಅಮವಾಸಿಯ ದಿವಸ ಶುಚಿರ್ಭೂತನಾಗಿ ತಾವ್ರದ ತಗಡಿನ ಮೇಲೆ ಬರೆದು

| | | | | |
|---|---|---|---|---|
| ಓಂ | ಪಂ | ಓಂ | ಪಂ | ಓಂ |
| ಪಂ | ಓಂ | ಪಂ | ಓಂ | ಪಂ |
| ಓಂ | ಪಂ | ಓಂ | ಪಂ | ಓಂ |
| ಪಂ | ಓಂ | ಪಂ | ಓಂ | ಪಂ |
| ಓಂ | ಪಂ | ಓಂ | ಪಂ | ಓಂ |

ಅಷ್ಟೋಪಚಾರ ಪೂಜೆಯನ್ನು ಮಾಡಿ ಗುಗ್ಗಳ ಧೂಪದ ಹೊಗೆಯನ್ನು ಬಡಿಯಿಸಿ ವಂದು ಟೆಂಗಿನ ಕಾಯಿಯನ್ನು ವಡೆದು ಶಾಂತಿಯನ್ನು ಮಾಡಿ ಉಪಯೋಗಮಾಡಿಕೊಳ್ಳಬೇಕು. ಇಹರಿಂದ ಅನ್ನ ಶಿದ್ಧಿಯು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೧೦೫ | ೧೦೯. | ೧೦೭ | ೪೬ | ೧೦೧ |
| ೧೦೩ | ೧೦೪ | ೧೦೫ | ೬೫ | ೧೦೨ |
| ೫೨ | ೩೫ | ೧೦೩ | ೩೬ | ೫೬ |
| ೨೨ | ೮೯ | ೨೪ | ೧೦೬ | ೨೮ |
| ೫೫ | ೫೫ | ೫೫ | ೫೫ | ೧೦೮ |

ಇದು ಅನ್ನ ಸಿದ್ಧಿಯ ಯಂತ್ರವು. ಈ ಯಂತ್ರವನ್ನು ಗುರು ವಾರ ಅಮವಾಸಿ ಬಂದಾಗ ಮತಿ ಹುಡಿಯಿಂದ ತಾಮ್ರದ ತಗಡಿನ ಮೇಲೆ ಈ ಯಂತ್ರವನ್ನು ಬರೆದು ಅಷ್ಟೋಪಚಾರದಿಂದ ಪೂಜೆಯನ್ನು ಮಾಡಿ ಇದನ್ನು ಧರಿಸಿಕೊಳ್ಳಲು ಅನ್ನಸಿದ್ಧಿಯಾಗುವದು. ಇದನ್ನು ದಿನಾಲೂ ತಮ್ಮ ಮತಾನುಸಾರವಾಗಿ ಪೂಜಿಸುತ್ತಿರಬೇಕು. ಬಿಟ್ಟರೆ ಹುಸಿಯಾಗುವದು. ಇದನ್ನರಿತು ಇದರ ಉಪಯೋಗ ಮಾಡಿಕೊಳ್ಳಬೇಕು.

## ಧಾನ್ಯ ಸಿದ್ಧಿಯ ಯಂತ್ರ

| | | | | | | |
|---|---|---|---|---|---|---|
| | ನ | ಮ | ಶಿ | ವಾ | ಯ | |
| ಜ | ಓಂ | ರುಂ | ಶ್ರೀಂ | ಓಂ | ರುಂ | ಕ್ರಿ |
| ಭ್ರ | ಶ್ರೀಂ | ಓಂ | ರುಂ | ಶ್ರೀಂ | ಓಂ | ಬ್ರಿ |
| ಅ | ರುಂ | ಶ್ರೀಂ | ಓಂ | ರುಂ | ಶ್ರೀಂ | ಅ |
| ಬ್ರಿ | ಓ | ರುಂ | ಶ್ರೀಂ | ಓಂ | ರುಂ | ಭ್ರ |
| ಯು | ಶ್ರೀಂ | ಓಂ | ರುಂ | ಶ್ರೀಂ | ಓಂ | ಜ |
| | ೫ | ೧೭ | ೯ | ೮೭ | ೧೦ | |

ಇದು ಧಾನ್ಯ ಶಿದ್ಧಿಯ ಯಂತ್ರವು ಈ ಯಂತ್ರವನ್ನು ಗ್ರಹಣ ಕಾಲದಲ್ಲಿ ತಾವ್ರ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಆ ಯಂತ್ರವನ್ನು ಪೂಜೆಯನ್ನು ಮಾಡಿ ಗುಗ್ಗಳ ಧೂಪದ ಹೊಗೆಯನ್ನು ಹಾಕಿ ವಂದು ಟೆಂಗಿನ ಕಾಯಿಯನ್ನು ಒಡೆದು ಶಾಂತಿಯನ್ನು ಮಾಡಿ ಉಪಯೋಗವನ್ನು ಮಾಡಿಕೊಳ್ಳಬೇಕು ಇದರಿಂದ ಧಾನ್ಯ ಶಿದ್ಧಿಯಾಗುವದು.

## ಮತ್ತೊಂದು ಪ್ರಕಾರ ಯಂತ್ರ

ಇದು ಧಾನ್ಯ ಶಿದ್ಧಿಯ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ಅಮವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ವಿದಾನೋಕ್ತವಾಗಿ

| | | | | |
|---|---|---|---|---|
| ೩ | ೧ | ೬ | ೨ | ೩ |
| ೨೦ | ೯ | ೧೬ | ೯ | ೧೭ |
| ೨ | ೧೩ | ೧೨ | ೧೯ | ೧೪ |
| ೬ | ೧೫ | ೪ | ೧೫ | ೧ |
| ೧೮ | ೬ | ೮ | ೫ | ೧೮ |

ಪೂಜೆಯನ್ನು ಮಾಡಿ ದೂಪದೀಪದ ಪ್ರಕಾಶವನು ತೋರಿಸಿ ಭಕ್ತಿಪೂರ್ವಕವಾಗಿ ಈ ಯಂತ್ರದ ಉಪಯೋಗವನ್ನು ಮಾಡಿಕೊಳ್ಳಬೇಕು ಈ ಯಂತ್ರದಿಂದ ಸರ್ವಸಿದ್ಧಿಯಾಗುವದು ಸಿದ್ಧಾಂತವು.

## ಸರ್ವರೋಗ ನಿವಾರಣಯಂತ್ರ

| | | | | |
|---|---|---|---|---|
| ಓಂ | ಅಂ | ಹಂ | ಓಂ | ಅಂ |
| ಹಂ | ಓಂ | ಅಂ | ಹಂ | ಓಂ |
| ಅಂ | ಹಂ | ಓಂ | ಅಂ | ಹಂ |
| ಓಂ | ಅಂ | ಹಂ | ಓಂ | ಅಂ |
| ಹಂ | ಓಂ | ಅಂ | ಹಂ | ಓಂ |

ಇದು ಸರ್ವರೋಗ ನಿವಾರಣ ಯಂತ್ರವು ಈ ಯಂತ್ರವನು ಆದಿತ್ಯವಾರ ಅಮವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಅದನ್ನು ಪೂಜಿಸಿ ಗುಗ್ಗಳ ಧೂಪದಿಂದ ಹೊಗೆ ಕೊಟ್ಟು ನಾರೀಫಲಂ ಸರ್ಪಿಸಿ ಕರೇ ದಾರದಿಂದ ಇದನ್ನು ಧರಿಸಿಕೊಳ್ಳಲು ಸರ್ವರೋಗಗಳು ಬೇಗನೇ ಹೋಗುವವು ಸಿದ್ಧಾಂತವು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೧೦೧ | ೯೭ | ೮೮ | ೮೩ | ೯೬ |
| ೮೬ | ೧೦೦ | ೯೧ | ೯೫ | ೮೨ |
| ೮೪ | ೮೦ | ೯೯ | ೯೦ | ೮೫ |
| ೮೭ | ೯೪ | ೮೧ | ೯೮ | ೮೯ |
| ೯೩ | ೭೯ | ೭೭ | ೭೮ | ೯೨ |

ಇದು ಸರ್ವರೋಗನಿವಾರಣ ಯಂತ್ರ. ಈ ಯಂತ್ರವನ್ನು ಆದಿತ್ಯವಾರ ಅಮವಾಶಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟೋಪಚಾರದಿಂದ ಪೂಜೆಯನ್ನು ಮಾಡಿ ಗುಗ್ಗಳದೂಪದ ಹೊಗೆಯನ್ನು ಹಾಕಿ ಲಿಂಬಿನಕಾಯಿಯನ್ನು ಒಡೆದು ಶಾಂತಿಯನ್ನು ಮಾಡಿ ತನ್ನಬಳಿಯಲ್ಲಿ ಇಟ್ಟುಕೊಂಡು ಉಪಯೋಗ ಮಾಡಿಕೊಳ್ಳಬೇಕು.

## ಮಲರೋಗ ನಿವಾರಣ ಯಂತ್ರ

| | | | | |
|---|---|---|---|---|
| ನಂ | ಮಂ | ಶಿಂ | ವಾಂ | ಯಂ |
| ಓಂ | ನಂ | ಮಂ | ಶಿಂ | ವಾಂ |
| ಯಂ | ಓಂ | ನಂ | ಮಂ | ಶಿಂ |
| ವಾಂ | ಯಂ | ಓಂ | ನಂ | ಮಂ |
| ಶಿಂ | ವಾಂ | ಯಂ | ಓಂ | ನಂ |

ಇದು ಮಲರೋಗ ಬರುವವರಿಗೆ ಕಟ್ಟುವ ಯಂತ್ರವು. ಈ ಯಂತ್ರವನ್ನು ಆದಿತ್ಯವಾರ ಅಮವಾಶಿಯ ದಿವಸ ತಾಮ್ರದ ತಗಡಿನಮೇಲೆ ಬರೆದು ದಶೋಪಚಾರದಿಂದಅದನ್ನು ಪೂಜಿಸಿ ನಾರೀಫಲವನ್ನುಸಮರ್ಪಿಸಿ ಶಾಂತಿಯನ್ನು ಮಾಡಿ ಮಲರೋಗ ಬರುವವರಿಗೆಕಟ್ಟಲು ಮಲರೋಗವು ಪರಿಹಾರವಾಗುವದು

## ಮತ್ತೊಂದು ಪ್ರಕಾರಯಂತ್ರ

| | | | | |
|---|---|---|---|---|
| ೬ | ೧ | ೭ | ೨ | ೬ |
| ೫ | ೬ | ೩ | ೬ | ೪ |
| ೭ | ೭ | ೬ | ೭ | ೧ |
| ೮ | ೬ | ೯ | ೬ | ೩ |
| ೬ | ೪ | ೫ | ೭ | ೬ |

ಇದು ಮಲರೋಗದಯಂತ್ರವು ಈ ಯಂತ್ರವನ್ನು ಆದಿತ್ಯವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದಅದನ್ನು ಪೂಜಿಸಿ ಗುಗ್ಗಳದ ಹೊಗೆಯನ್ನು ಹಾಕಿ ನಾರಿಫಲವನ್ನು ಸಮರ್ಪಿಸಿ ಮಲರೋಗದವರಿಗೆ ಕಟ್ಟಲು ಮಲ ರೋಗ ಹೋಗುವದು ನಿಶ್ಚಿತವು.

## ಗಂಡನು ಹೆಂಡತಿಸ್ನು ವಲ್ಲದಿದ್ದರೆ ಯಂತ್ರ

| | | | |
|---|---|---|---|
| ೫೬ | ೬೬ | ೩೬ | ೪೬ |
| ೮೬ | ೫೬ | ೨೬ | ೭೬ |
| ೪೬ | ೯೬ | ೬೬ | ೫೬ |

ಈ ಯಂತ್ರವು ಗಂಡನು ಹೆಂಡತಿಯನ್ನು ವಲ್ಲದಿದ್ದರೆ ಈ ಯಂತ್ರವನ್ನು ಕಾಗದದ ಮೇಲೆ ಆದಿತ್ಯವಾರದಿವಸ ಬರೆದು ವಿದಾನೋಕ್ತವಾಗಿ ಪೂಜಿಸಿ ಕಟ್ಟಿಕೊಳ್ಳಲು ಗಂಡನು ಹೆಂಡತಿಗೆ ವಲಿಯುವನು ಸಿದ್ಧಾಂತವು.

## ದನಗಳು ಹೆಚ್ಚಾಗಿ ಹಾಲು ಕರೆಯುವ ಯಂತ್ರ

ಇದು ದನಗಳು ಬಹಳ ಹಾಲು ಹಿಂಡುವಂತೆ ಮಾಡುವ ಯಂತ್ರವು

| | | | | |
|---|---|---|---|---|
| ಓಂ | ಹ್ರಂ | ಹ್ರಾಂ | ಹ್ರಿಂ | ಹುಂ |
| ಹ್ರೆಂ | ಹ್ರೈಂ | ಹ್ರೊಂ | ಹಃ | ಓಂ |
| ಹ್ರಂ | ಹ್ರಾಂ | ಹ್ರಿಂ | ಹ್ರುಂ | ಹ್ರೆಂ |
| ಹ್ರೈಂ | ಹ್ರೊಂ | ಹ್ರೌಂ | ಹಃ | ಓಂ |
| ಹ್ರಂ | ಹ್ರಾಂ | ಹ್ರಿಂ | ಹ್ರುಂ | ಹ್ರೆಂ |

ಈ ಯಂತ್ರವನ್ನು ಆದಿತ್ಯವಾರ ಅಮಾವಾಸಿಯು ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿಧಾರ್ಚನೆಯಿಂದ ಅದನ್ನು ಪೂಜೆಯನ್ನು ಮಾಡಿ ದನಗಳು ಅಡ್ಡಾಡುವ ಹಾದಿಯಲ್ಲಿ ಕಟ್ಟಲು ಹಯನ ಹೆಚ್ಚುವದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೯ | ೧೫ | ೧೮ | ೨೩ | ೬ |
| ೧೭ | ೩೭ | ೪೭ | ೨೭ | ೩ |
| ೧೨ | ೫೫ | ೫೮ | ೬೯ | ೮ |
| ೪೯ | ೫೯ | ೬೯ | ೭೯ | ೫ |
| ೫೬ | ೬೬ | ೭೬ | ೮೬ | ೯೬ |

ಇದು ದನದ ಹೈನವು ಹೆಚ್ಚಾಗುವಂತೆ ಮಾಡುವ ಯಂತ್ರವು ಈ ಯಂತ್ರವನ್ನು ಗುರುವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟೋಪಚಾರದಿಂದ ಪೂಜಿಸಿ ದನಗಳು ಅಡ್ಡಾಡುವ ಹಾದಿಯಲ್ಲಿ ಕಟ್ಟಲು ಹೈನ ಹೆಚ್ಚಾಗುವದು ಸಿದ್ಧಾಂತವು ವೈಲಿಗೆ ಮುಡಿಚಟ್ಟಿ ಯಾವ ಯಂತ್ರಕ್ಕೂ ನಡೆಯುವದಿಲ್ಲ.

## ದನಗಳ ಕಾಲಬೇನೆ ಬಾಯಿಬೇನೆ ಯಂತ್ರ

| | | | | |
|---|---|---|---|---|
| ೨೫ | ೩೫ | ೪೫ | ೨೫ | ೩೫ |
| ೪೫ | ೨೫ | ೩೫ | ೩೫ | ೪೫ |
| ೩೫ | ೪೫ | ೨೫ | ೪೫ | ೩೫ |
| ೪೫ | ೩೫ | ೪೫ | ೨೫ | ೪೫ |
| ೩೫ | ೪೫ | ೩೫ | ೪೫ | ೨೫ |

ಈ ಯಂತ್ರವನ್ನು ತಾವ್ರದ ತಗಡಿನ ವೇಲೆ ಬರೆದು ಆದಿತ್ಯ ವಾರ ದಿವಸ ಅದನ್ನು ಪೂಜೆ ಯನ್ನು ಮಾಡಿ ದನಗಳು ಕಟ್ಟುವ ಸ್ಥಳದಲ್ಲಿಯಾಗಲಿ ಅಥವಾ ದನಗ ಳಿಗೆ ಆಗಲಿ ಕಟ್ಟಿದರೆ ಆ ಕಾಲಬೇನೆ ಬಾಯಿಬೇನೆ ನಿವಾರಣವಾಗುವದು

## ದನಗಳ ವುಣ್ಣಿ ನಿವಾರಣ ಯಂತ್ರ

| | | | | |
|---|---|---|---|---|
| ೭೭ | ೫೭ | ೬೭ | ೫೭ | ೭೭ |
| ೬೭ | ೫೭ | ೭೭ | ೭೭ | ೫೭ |
| ೫೭ | ೬೭ | ೭೭ | ೭೭ | ೬೭ |
| ೬೭ | ೭೭ | ೬೭ | ೭೭ | ೬೭ |
| ೭೭ | ೬೭ | ೭೭ | ೬೭ | ೭೭ |

ಈ ಯಂತ್ರವು ದನಗಳ ಉಣ್ಣಿ ನಿವಾರಣ ಯಂತ್ರವು ಈ ಯಂತ್ರವನ್ನು ಗುರು ವಾರ ದಿವಸ ತಾವ್ರದ ತಗಡಿನ ವೇಲೆ ಬರೆದು ವಿಧಿವತ್ತಾಗಿ ಪೂಜಿಸಿ ದನಗಳು ಹಾದಾಡುವ ಹಾದಿಯಲ್ಲಿ ಕಟ್ಟಲು ಉಣ್ಣಿ ನಾಶವಾಗುವವು ಈ ಎಲ್ಲ ಯಂತ್ರಗಳನ್ನು ಬಹು ಜೋಕೆಯಿಂದ ಉಪಯೋಗಮಾಡಿ ಕೊಳ್ಳಬೇಕು ಇಲ್ಲದಿದ್ದರೆ ಹುಸಿಯಾಗುವವು.

## ಹಿಡಿದ ಕಾರ್ಯ ಸಿದ್ಧಿ ಯಂತ್ರ

ಇದ ಕಾರ್ಯವು ಸಿದ್ಧಿಯಾಗುವ ಯಂತ್ರವು ಈ ಯಂತ್ರವನ್ನು

| | | | | |
|---|---|---|---|---|
| ಓಂ | ಐಂ | ಓಂ | ಐಂ | ಓಂ |
| ಐಂ | ಓಂ | ಐಂ | ಓಂ | ಐಂ |
| ಓಂ | ಐಂ | ಓಂ | ಐಂ | ಓಂ |
| ಐಂ | ಓಂ | ಐಂ | ಓಂ | ಐಂ |
| ಓಂ | ಐಂ | ಓಂ | ಐಂ | ಓಂ |

ಆದಿತ್ಯವಾರ ದಿವಸ ಅಮವಾಸಿ ಇದ್ದಾಗ ತಾಮ್ರದ ತಗಡಿನ ಮೇಲೆ ಬರೆದು ಅಷ್ಟೋಪಚಾರದಿಂದ ಅದನ್ನು ಪೂಜಿಸಿ ಗುಗ್ಗಳ ಧೂಪವನ್ನು ಹಾಕಿ ಒಂದು ಟೆಂಗಿನ ಕಾಯಿಯನ್ನು ಒಡೆದು ಶಾಂತಿಯನ್ನು ಮಾಡಿ ತನ್ನ ಹತ್ತಿರ ಇಟ್ಟುಕೊಂಡು ಯಾವ ಕೆಲಸವನ್ನು ಆರಂಭಿಸುವರೋ ಆ ಕೆಲವು ತೀವ್ರವಾಗಿ ಪೂರ್ತಿಯಾಗುವದು.

## ಇನ್ನೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೧೦೧ | ೧೦೧ | ೧೦೧ | ೦೧ | ೧೦೧ |
| ೧೦೨ | ೧೦೨ | ೧೦೩ | ೧೦೪ | ೧೦೫ |
| ೧೦೬ | ೧೦೭ | ೧೦೮ | ೧೦೯ | ೧೧೦ |
| ೧೧೧ | ೧೧೨ | ೧೧೩ | ೧೧೪ | ೧೧೫ |
| ೧೧೬ | ೧೧೭ | ೧೧೮ | ೧೧೯ | ೧೨೦ |

ಇದು ಒಂದು ಕೈಕೊಂಡ ಕೆಲಸ ಸಿದ್ಧಿಯಾಗುವ ಯಂತ್ರವು ಈ ಯಂತ್ರವನ್ನು ಗುರುವಾರ ದಿವಸ ಭೂಜಪತ್ರಿಯ ಮೇಲೆ ಕುಂಕುಮ ಚಂದನ ಗಂಧದಿಂದ ಬರೆದು ಅದನ್ನು ಮೇಲೆ ಹೇಳಿದ ಪ್ರಕಾರ ಪೂಜಿಸಿ ತನ್ನ ಬಳಿಯಲ್ಲಿ ಇಟ್ಟು ಕೊಂಡು ಕೆಲಸ ಮಾಡಲು ಮನಸಿನಂತೆ ಕೆಲಸಗಳು ಆಗುವವು.

## ವ್ಯಾಧಿ ನಾಶನ ಯಂತ್ರ

ಇದು ವ್ಯಾಧಿ ನಾಶನ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ಅಮವಾಸಿಯ ದಿವಸ ಆಗಲಿ ಅಥವಾ ಗ್ರಹಣ ಕಾಲದಲ್ಲಿ ಆಗಲಿ ತಾಮ್ರದ ತಗ

| | | | | | | |
|---|---|---|---|---|---|---|
| | ಓಂ | ಓಂ | ಓಂ | ಓಂ | ಓಂ | |
| [illegible] | ಓಂ | ಹಂ | ಅಂ | ಓಂ | ಅಂ | [illegible] |
| [illegible] | ಹಂ | ಓಂ | ಅಂ | ಹಂ | ಓಂ | [illegible] |
| [illegible] | ಅಂ | ಹಂ | ಓಂ | ಅಂ | ಹಂ | [illegible] |
| [illegible] | ಓಂ | ಅಂ | ಹಂ | ಓಂ | ಅಂ | [illegible] |
| [illegible] | ಹಂ | ಓಂ | ಅಂ | ಹಂ | ಓಂ | [illegible] |
| | [illegible] | [illegible] | [illegible] | [illegible] | [illegible] | |

ದಿನ ಮೇಲೆ ಬರೆದು ದಶೋಪಚಾರದಿಂದ ಅದನ್ನು ಪೂಜಿಸಿ ಗುಗ್ಗಳ ದೂಪವನ್ನು ಹಾಕಿ ಮಂದು ಟೆಂಗಿನ ಕಾಯಿ ಯನ್ನು ಒಡೆದು ವ್ಯಾಧಿ ಬಂದವರಿಗೆ ಧರಿಸಲು ಸರ್ವ ವ್ಯಾಧಿ ಪರಿಹಾರವು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೧ | ೩ | ೫ | ೪ | ೧ |
| ೫ | ೧ | ೩ | ೧ | ೭ |
| ೬ | ೪ | ೧ | ೩ | ೬ |
| ೪ | ೧ | ೨ | ೧ | ೩ |
| ೧ | ೩ | ೮ | ೮ | ೧ |

ಇದು ಒಂದು ವ್ಯಾಧಿ ನಾಶನ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಆದನ್ನು ಪೂಜಿಸಿ ಗುಗ್ಗಳ ದೂಪವ ಹಾಕಿ ಮಂದು ಟೆಂಗಿನ ಕಾಯಿ ಯನ್ನು ಒಡೆದು ಶಾಂತಿಯನ್ನು ಮಾಡಿ ವ್ಯಾಧಿ ಬಂದವರಿಗೆ ಧರಿಸಲು ವ್ಯಾಧಿ ನಾಶವಾಗಿ ಸುಖಿಯಾಗಿಪ್ಪರು.

## ಶ್ರೀರುದ್ರನ ಯಂತ್ರವು



ಈ ಯಂತ್ರವು ರುದ್ರನ ಯಂತ್ರವು. ಈ ಯಂತ್ರವನ್ನು ಸೂರ್ಯಗ್ರಹಣ ಕಾಲದಲ್ಲಿಯಾಗಲಿ ಅಥವಾ ಆದಿತ್ಯವಾರ ಅಮಾವಾಸಿಯಲ್ಲಾಗಲಿ ಶುಚಿರ್ಭೂತನಾಗಿದ್ದು ಪಂಚಲೋಹದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಪೂಜಿಸಿ ಗುಗ್ಗಳಧೂಪವನ್ನು ಹಾಕಿ ಒಂದು ಕಾಯಿ ಒಡೆದು ಶಾಂತಿಯು ಮಾಡಿ ಧರಿಸಿಕೊಳ್ಳಲು ಸರ್ವಕಾರ್ಯಶಿದ್ಧಿಯಾಗುವದು. ಮತ್ತು ಸರ್ವ ಕಂಟಕ ಆಪತ್ತು ಪರಿಹಾರವು.

## ಹೋದ ವಸ್ತು ತಾನೇ ಬರುವಂತೆ ಮಾಡುವ ಯಂತ್ರ

| | | | | |
|---|---|---|---|---|
| ದೇಂ | ವಂ | ವಂ | ತಂ | ಆಂ |
| ವಾಂ | ಹಂ | ಯೊಂ | ವಿಂ | ಓಂ |
| ವಂ | ದಂ | ದೇ | ಆಂ | ತಂ |
| ವಾಂ | ಹಂ | ಯಾಂ | ವಿಂ | ದೇಂ |
| ವಂ | ದಂ | ತಂ | ಆಂ | ವಾಂ |

ಇದು ಕಳಕೊಂಡ ದನ-ಕರುಗಳು ತಿರುಗಿ ತಾನೇ ಬರುವಂತೆ ಆಕರ್ಷಿಸುವ ಯಂತ್ರವು. ಈ ಯಂತ್ರವನ್ನು ಆದಿತ್ಯವಾರದಿವಸ ತಾಮ್ರದ ತಗಡಿನಮೇಲೆ ಬರೆದು ಅಷ್ಟೋಪಚಾರದಿಂದ ಪೂಜಿಸಿ ಗುಗ್ಗಳದ ಹೊಗೆಯನ್ನು ಹಾಕಿ ತಯಾರಿಸಿ ಮನೆಯ ಬಾಗಿಲದಲ್ಲಿ ಇರಿಸಲು ಕೆಲವು ದಿನಗಳನಂತರ ತಾನೇ ಬರುವವು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೩೬ | ೪೩ | ೭೬ | ೫೭ | ೫೫ |
| ೯೩ | ೧೦೧ | ೬೩ | ೨೫ | ೧೮ |
| ೨೦ | ೩೦ | ೫೧ | ೪೦ | ೬೦ |
| ೧೫ | ೧೭ | ೬೩ | ೨೬ | ೫೬ |
| ೫೫ | ೫೫ | ೫೫ | ೫೫ | ೫೫ |

ಇದು ಹೋದ ದನ-ಕರುಗಳು ತಿರುಗಿ ಮನೆಗೆ ಬರುವಂತೆ ಮಾಡುವ ಯಂತ್ರವು ಈ ಯಂತ್ರವನ್ನು ಗುರುವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದ ಅಷ್ಟವಿಧಾರ್ಚನೆಯಿಂದ ಅದನ್ನು ಪೂಜಿಸಿ ತೊಲಬಾಗಿಲದ ಒಳಭಾಗದಲ್ಲಿ ಈ ಯಂತ್ರವನ್ನು ಇರಿಸಲು ಹೋದ ದನಗಳು ತಾವೇ ತಿರುಗಿ ಬರುವವು.

## ಶನಿ ಕಾಟೆ—ಕಷ್ಟ ನಿವಾರಣ ಯಂತ್ರ

| | | | | |
|---|---|---|---|---|
| ಓಂ | ನಿಂ | ಹಾಂ | ಜಂ | ಮಂ |
| ಶಂ | ಮಂ | ರಾಂ | ನಂ | ಓಂ |
| ರಾಂ | ಹಾಂ | ಮಂ | ನಿಂ | ಶಂ |
| ಜಂ | ನಂ | ಮಂ | ಓಂ | ಜಂ |
| ಶಂ | ನಿಂ | ಹಾಂ | ಮಂ | ರಾಂ |

ಇದು ಶನಿ ಮೊದಲಾದಕಾಟ ನಿವಾರಣೆಯ ಯಂತ್ರ. ಈ ಯಂತ್ರವನ್ನು ಆದಿತ್ಯವಾರ ಅಮಾವಾಸಿಯ ದಿವಸ ತಾಮ್ರದ ತಗಡಿನಮೇಲೆ ಬರೆದು ದಶೋಪಚಾರದಿಂದ ಆ ಯಂತ್ರವನ್ನು ವಿಧಾನೋಕ್ತವಾಗಿ ಪೂಜಿಸಿ ಕಷ್ಟ ವದಗಿದ ಕಾಲದಲ್ಲಿ ಈ ಯಂತ್ರವನ್ನು ಧರಿಸಿಕೊಂಡರೆ ಸರ್ವಕಷ್ಟ-ಶನಿಕಾಟ ಮೊದಲಾದದ್ದು ಪರಿಹಾರವಾಗುವದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೩ | ೭ | ೪ | ೧ | ೫ |
| ೮ | ೨ | ೬ | ೭ | ೯ |
| ೧ | ೮ | ೫ | ೩ | ೭ |
| ೪ | ೬ | ೯ | ೧ | ೪ |
| ೨ | ೪ | ೩ | ೬ | ೧ |

ಇದು ಕಷ್ಟನಿವಾರಣಯಂತ್ರವು ಈ ಯಂತ್ರವನ್ನು ಶನಿವಾರದಿವಸ ಬರೆದು ವಿಧಿವತ್ತಾಗಿ ನೇಮೋಕ್ತವಾಗಿ ಸರಿಯಾಗಿ ಪೂಜಿಸಬೇಕು. ಇದನ್ನು ಪಂಚಲೋಹದ ತಗಡಿನ ಮೇಲೆ ಬರೆಯಬೇಕು. ಇಲ್ಲವೆ ತಾಮ್ರದ ತಗಡಿನಮೇಲೆಯಾಗಲಿ ಬರೆಯಬೇಕು. ಇದನ್ನು ಶನಿಕಾಟ ಮೊದಲಾದ ಕಷ್ಟಕಾಲದಲ್ಲಿ ಧರಿಸಿಕೊಂಡರೆ ಎಲ್ಲ ಕಷ್ಟ-ನಷ್ಟಗಳು ಪರಿಹಾರವಾಗುವವು.

## ಸರ್ವ ದುಃಖ ನಿವಾರಣ ಯಂತ್ರ

| | | | | |
|---|---|---|---|---|
| ಶಂ | ಸ್ರೈಂ | ಸ್ಟಂ | ರಾಂ | ಯಂ |
| ನಂ | ಮಃ | ಓಂ | ಶಂ | ಸ್ರೈಂ |
| ಸ್ಟಂ | ರಾಂ | ಯಂ | ನಂ | ಮಃ |
| ಓಂ | ಶಂ | ಸ್ರೈಂ | ಸ್ಟಂ | ರಾಂ |
| ಯಂ | ನಂ | ಮಃ | ಓಂ | ನಮ |

ಇದು ಶನಿಕಾಟ ದುಃಖ ನಿವಾರಣೆಯ ಯಂತ್ರ. ಈ ಯಂತ್ರವನ್ನು ಗ್ರಹಣಕಾಲದಲ್ಲಿ ಇಲ್ಲವೆ ಆದಿತ್ಯವಾರ ಅಮವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಆ ಯಂತ್ರವನ್ನು ಪೂಜಿಸಿ ಗುಗ್ಗಳ ಧೂಪವನ್ನು ಹಾಕಿ ಒಂದು ಟೆಂಗಿನಕಾಯಿಯನ್ನು ಒಡೆದು ಶಾಂತಿಯಿಂದ

ತನ್ನ ಬಳಿಯಲ್ಲಿ ಇಟ್ಟುಕೊಂಡರೆ ಎಲ್ಲ ಕಷ್ಟ ಸರ್ವದುಃಖ ನಿವಾರಣೆಯಾಗುವದು. ಈ ಯಂತ್ರಕ್ಕೆ ದಿನಾಲೂ ನಮಸ್ಕರಿಸುತ್ತಿರಬೇಕು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೯ | ೩ | ೬ | ೫ | ೯ |
| ೩ | ೯ | ೫ | ೯ | ೬ |
| ೩ | ೭ | ೯ | ೭ | ೩ |
| ೬ | ೯ | ೫ | ೯ | ೫ |
| ೯ | ೩ | ೭ | ೩ | ೯ |

ಇದು ಮಾನವನ ಸರ್ವದುಃಖವನ್ನು ನಿವಾರಣ ಮಾಡುವ ಯಂತ್ರವು. ಈ ಯಂತ್ರವನ್ನು ಆದಿತ್ಯವಾರ ಅಮಾವಾಶಿಯು ದಿವಸ ತಾಮ್ರದ ತಗಡಿನ ಮೇಲೆ ಬರೆದು ವಿಧಾನೋಕ್ತವಾಗಿ ಇದನ್ನು ಪೂಜಿಸಿ ಗುಗ್ಗಳ ದೂಪವನ್ನು ಹಾಕಿ ವಂದು ಟೆಂಗಿನಕಾಯಿಯನ್ನು ವಡೆದು ಶಾಂತಿಯನ್ನು ಮಾಡಿ ದುಃಖ ಕಾಲದಲ್ಲಿ ಇದನ್ನು ನಂಬಿಗೆಯಿಂದ ಧರಿಸಿಕೊಳ್ಳಲು ಸರ್ವದುಃಖ ಪರಿಹಾರವಾಗುವವು.

## ಶನಿಕಾಟ ಕಷ್ಟ ನಿವಾರಣ ಯಂತ್ರ

| | | | | |
|---|---|---|---|---|
| ಓಂ | ಮಂ | ದಾಂ | ಯಂ | ನಂ |
| ಮಂ | ಓಂ | ಮಂ | ದಾಂ | ಯಂ |
| ನಂ | ಮಂ | ಓಂ | ಮಂ | ದಾಂ |
| ಯಂ | ನಂ | ಮಂ | ಓಂ | ಮಂ |
| ದಾಂ | ಯಂ | ನಂ | ಮಂ | ಓಂ |

ಇದು ಶನಿಮೊದಲಾದಕಾಡಾಟ ನಿವಾರಣೆಯು ಯಂತ್ರವು ಈ ಯಂತ್ರವನ್ನು ಆದಿತ್ಯವಾರ ಅಮಾವಾಶಿಯು ದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಆ ಯಂತ್ರವನ್ನು ಪೂಜಿಸಿ ಗುಗ್ಗಳ ಧೂಪವನ್ನು ಹಾಕಿ ಒಂದು ಟೆಂಗಿನಕಾಯಿಯನ್ನು ವಡೆದು

ಆಪತ್ತು ಬಂದ ಕಾಲದಲ್ಲಿ ಯಂತ್ರವನ್ನು ಧರಿಸಿಕೊಳ್ಳಲು ಶನಿ ಕಾಡಾಟ ಮೊದಲಾದದ್ದು ಪರಿಹಾರವಾಗುವದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೩ | ೭ | ೪ | ೧ | ೫ |
| ೮ | ೨ | ೬ | ೭ | ೯ |
| ೧ | ೮ | ೫ | ೩ | ೭ |
| ೪ | ೬ | ೯ | ೧ | ೪ |
| ೨ | ೪ | ೩ | ೬ | ೧ |

ಇದು ಕಷ್ಟನಿವಾರಣ ಯಂತ್ರವು ಈ ಯಂತ್ರವನ್ನು ಶನಿ ಕಾಡಾಟ ಮೊದಲಾದ ಕಷ್ಟ ಕಾಲದಲ್ಲಿ ಈ ಯಂತ್ರವನ್ನು ಆದಿತ್ಯವಾರ ಅಮಾವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿದಾರ್ಚನೆಯಿಂದ ಪೂಜೆಯನ್ನು ಮಾಡಿ ಕಷ್ಟ ಕಾಲದಲ್ಲಿ ಧರಿಸಿಕೊಳ್ಳಲು ಎಲ್ಲ ಕಷ್ಟವು ಪರಿಹಾರವಾಗುವವು.

## ಭೂತ ಉಚ್ಚಾಟಣ ಯಂತ್ರ

| | | | | |
|---|---|---|---|---|
| ಓಂ | ಹ್ರಾಂ | ಓಂ | ಹ್ರಾಂ | ಓಂ |
| ಹ್ರಾಂ | ಓಂ | ಹ್ರಾಂ | ಓಂ | ಹ್ರಾಂ |
| ಓಂ | ಹ್ರಾಂ | ಓಂ | ಹ್ರಾಂ | ಓಂ |
| ಹ್ರಾಂ | ಓಂ | ಹ್ರಾಂ | ಓಂ | ಹ್ರಾಂ |
| ಓಂ | ಹ್ರಾಂ | ಓಂ | ಹ್ರಾಂ | ಓಂ |

ಇದು ಭೂತ ಉಚ್ಚಾಟನ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ಅಮಾವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟ ವಿದಾರ್ಚನೆಯಿಂದ ಪೂಜಿಸಿ ಗುಗ್ಗಳ ಧೂಪದ ಹೊಗೆಯನ್ನು ಕೊಟ್ಟು ತಯಾರಿಸಿ ಭೂತ ಬಾಧೆಯುಳ್ಳವರಿಗೆ ಇದನ್ನು ಧರಿಸಲು ಭೂತ ಬಾಧೆಯು ಪರಿಹಾರವು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೧೦೩ | ೧೦೮ | ೧೦೬ | ೧೦೮ | ೧೦೩ |
| ೧೦೨ | ೧೦೩ | ೧೦೨ | ೧೦೩ | ೧೦೨ |
| ೧೦೧ | ೧೦೭ | ೧೦೩ | ೧೦೭ | ೧೦೧ |
| ೧೦೫ | ೧೦೩ | ೧೦೫ | ೧೦೩ | ೧೦೫ |
| ೧೦೩ | ೧೧೧ | ೧೦೪ | ೧೦೧ | ೧೦೩ |

ಇದು ಭೂತ ಉಚ್ಚಾಟನ ಯಂತ್ರವು ಈ ಯಂತ್ರವನ್ನು ಗುರುವಾರ ಅಮವಾಸಿ ಇದ್ದಾಗ ತಾಮ್ರದ ತಗಡಿನ ಮೇಲೆ ಬರೆದು ವಿಧಾನೋಕ್ತವಾಗಿ ಪೂಜಿಸಿ ಗುಗ್ಗುಳ ಧೂಪವನ್ನು ಹಾಕಿ ಭೂತ ಹಿಡಿದವರಿಗೆ ಧರಿಸಲು ಭೂತ ಉಚ್ಚಾಟಣವಾಗುವದು.

## ವಿಷಹರ ಯಂತ್ರವು

| | | | | |
|---|---|---|---|---|
| ಓಂ | ಗೌಂ | ಓಂ | ಗೌಂ | ಓಂ |
| ಗೌಂ | ಓಂ | ಗೌಂ | ಓಂ | ಗೌಂ |
| ಓಂ | ಗೌಂ | ಓಂ | ಗೌಂ | ಓಂ |
| ಗೌಂ | ಓಂ | ಗೌಂ | ಓಂ | ಗೌಂ |
| ಓಂ | ಗೌಂ | ಓಂ | ಗೌಂ | ಓಂ |

ಈ ಯಂತ್ರವು ವಿಷನಿವಾರಣ ಯಂತ್ರವು ಈ ಯಂತ್ರವನ್ನು ಗುರುವಾರ ದಿವಸ ಭೂಜಪತ್ರಿಯ ಮೇಲೆ ಬರೆದು ವಿಧಾನೋಕ್ತವಾಗಿ ಪೂಜಿಸಿ ವಿಷದೋಷಿಗಳಾದವರಿಗೆ ಧರಿಸಲು ವಿಷ ನಿವಾರಣವಾಗುವದು.

| | | | | |
|---|---|---|---|---|
| ಯಂ | ಶಂ | ವಾಂ | ಶಿಂ | ಮಂ |
| ಯಂ | ನಂ | ವಾಂ | ಶಿ | ಮಂ |
| ಮಂ | ಶಿಂ | ವಾಂ | ನಂ | ಯಂ |
| ಯಂ | ನಂ | ವಾಂ | ಶಿಂ | ಮಂ |
| ಮಂ | ಶಿಂ | ವಾಂ | ವಂ | ಯಂ |

## ಉಚ್ಚಾಟಣ ಯಂತ್ರ

ಇದು ವೈರಿಯ ವುಚ್ಚಾಟಣ ಯಂತ್ರವು. ಈ ಯಂತ್ರವನ್ನು ಆದಿತ್ಯವಾರ ಅಮವಾಶಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿದಾರ್ಚ:ನೆಯಿಂದ ಗಂಗ್ಗಳ ದೂಪ ಸಹಿತವಾಗಿ ಪೂಜಿಸಿ ತನಗೆ ಬ್ಯಾಡಾದ ವೈರಿಯ ಹೆಸರಿಗೆ ಉಪಯೋಗ ಮಾಡಿಕೊಳ್ಳಬೇಕು. ವೈರಿಯ ಉಚ್ಚಾಟಣವು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೭ | ೩ | ೫ | ೯ | ೮ |
| ೯ | ೬ | ೪ | ೨ | ೧ |
| ೩ | ೫ | ೭ | ೮ | ೫ |
| ೨ | ೮ | ೧ | ೭ | ೩ |
| ೮ | ೧ | ೪ | ೩ | ೭ |

ಇದು ವೈರಿಯ ಉಚ್ಚಾಟಣ ಯಂತ್ರವು ಈ ಯಂತ್ರವನ್ನು ರವಿವಾರ ದಿವಸ ತಾಮ್ರದ ತಗಡಿನ ವೆ.ೀಲೆ ಬರೆದು ವಿಧಾನೋಕ್ತವಾಗಿ ಪೂಜೆಯನ್ನು ಮಾಡಿ ವೈರಿಯ ಹೆಸರಿನಿಂದ ಉಪಯೋಗ ಮಾಡಿಕೊಳ್ಳಲು ಆ ವೈರಿಯು ತನಗೆ ಶರಣೆನುತ ಬರುವನು.

## ವಿದ್ಯಪ್ರಾಪ್ತಿ ಯಂತ್ರ

| | | | | |
|---|---|---|---|---|
| ಓಂ | ಹೊಂ | ಓಂ | ಹೊಂ | ಓಂ |
| ಹೊಂ | ಓಂ | ಹೊಂ | ಓಂ | ಹೊಂ |
| ಓಂ | ಹೊಂ | ಓಂ | ಹೊಂ | ಓಂ |
| ಹೊಂ | ಓಂ | ಹೊಂ | ಓಂ | ಹೊಂ |
| ಓಂ | ಹೊಂ | ಓಂ | ಹೊಂ | ಓಂ |

ಇದು ವಿದ್ಯಾ ಪ್ರಾಪ್ತಿಯ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ಅಮಾವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಅದನ್ನು ಪೂಜಿಸಿ ಗುಗ್ಗಳ ಧೂಪದ ಹೊಗೆಯನ್ನು ಹಾಕಿ ಒಂದು ಟೆಂಗಿನಕಾಯಿಯನ್ನು ಒಡೆದು ಶಾಂತಿಯನ್ನುಮಾಡಿ ಧರಿಸಿಕೊಳ್ಳಲು ವಿದ್ಯಾಪ್ರಾಪ್ತಿಯಾಗುವದು.

## ಮತ್ತೊಂದು ಪ್ರಕಾರಯಂತ್ರ

| | | | | |
|---|---|---|---|---|
| ೫೫ | ೧೫ | ೫೭ | ೬೫ | ೫೬ |
| ೭೫ | ೩೫ | ೫೫ | ೨೫ | ೪೫ |
| ೮೫ | ೪೫ | ೪೫ | ೫೫ | ೬೫ |
| ೨೫ | ೫೫ | ೧೫ | ೭೫ | ೭೫ |
| ೯೫ | ೮೫ | ೬೫ | ೪೫ | ೫೫ |

ಈ ಯಂತ್ರವುವಿದ್ಯಾಪ್ರಾಪ್ತಿಯ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ದಿವಸ ತಾಮ್ರದ ತಗಡಿನ ಮೇಲೆ ಶುಚಿರ್ಭೂತನಾಗಿದ್ದು ಬರೆದು ದಶೋಪಚಾರದಿಂದ ಅದನ್ನು ಪೂಜಿಸಿ ಧರಿಸಿಕೊಳ್ಳಬೇಕು ಅಂದರೆ ವಿದ್ಯಾ ಪ್ರಾಪ್ತಿವಾಗುವದಕ್ಕೆ ಯಾವ ಸಂಶಯವೂ ಇಲ್ಲ ಜೋಕೆಯಿಂದ ಕಟ್ಟಿಕೊಳ್ಳಬೇಕು.

## ವಿಷಹರ ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೭ | ೧ | ೪ | ೬ | ೮ |
| ೫ | ೭ | ೩ | ೨ | ೫ |
| ೪ | ೫ | ೭ | ೫ | ೪ |
| ೩ | ೨ | ೩ | ೭ | ೩ |
| ೮ | ೪ | ೫ | ೬ | ೭ |

ಇದು ವಿಷಹರ ಯಂತ್ರವು ಈ ಯಂತ್ರವನ್ನು ತಾಮ್ರದ ತಗಡಿನಲ್ಲಿ ಆದಿತ್ಯವಾರ ದಿವಸ ಶುಚಿರ್ಭೂತನಾಗಿದ್ದು ಅಷ್ಟವಿದಾರ್ಚನೆಯಿಂದ ಪೂಜಿಸಬೇಕು. ನಂತರ ಗುಗ್ಗಳ ದೂಪದ ಹೊಗೆಯನ್ನು ಬಡೆಯಿಸಿ ಕರೇದಾರದಿಂದ ಅದನ್ನು ಧರಿಸಿಕೊಂಡರೆ ವಿಷಹರವಾಗುವದು. ವಿಷದ ಬಾಧೆಯುಂಟಾದಾಗ ಪ್ರಯೋಗಿಸಿಕೊಳ್ಳಬೇಕು.

## ಕಳ್ಳರ ಬಾಯಿಕಟ್ಟು ಯಂತ್ರ

| | | | | |
|---|---|---|---|---|
| ಓಂ | ಕ್ಷಾಂ | ಓಂ | ಕ್ಷಾಂ | ಓಂ |
| ಕ್ಷಾಂ | ಓಂ | ಕ್ಷಾಂ | ಓಂ | ಕ್ಷಾಂ |
| ಓಂ | ಕ್ಷಾಂ | ಓಂ | ಕ್ಷಾಂ | ಓಂ |
| ಕ್ಷಾಂ | ಓಂ | ಕ್ಷಾಂ | ಓಂ | ಕ್ಷಾಂ |
| ಓಂ | ಕ್ಷಾಂ | ಓಂ | ಕ್ಷಾಂ | ಓಂ |

ಇದು ಕಳ್ಳರು ಬಾರದಂತೆ ಮಾಡುವ ಯಂತ್ರ. ಈ ಯಂತ್ರವನ್ನು ಆದಿತ್ಯವಾರ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿದಾರ್ಚನೆಯಿಂದ ಅದನ್ನು ಪೂಜಿಸಿ ಗುಗ್ಗಳ ಧೂಪವನ್ನು ಹಾಕಿ ಕಳ್ಳರ ಭಯ ಪ್ರಾಪ್ತವಾದಾಗ ಈ ಯಂತ್ರದ ಉಪಯೋಗವನ್ನು ಮಾಡಿಕೊಳ್ಳಬೇಕು. ಕಳ್ಳರು ಬಾರರು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೬೬ | ೭೬ | ೮೬ | ೯೬ | ೧೦೬ |
| ೫೬ | ೬೬ | ೭೬ | ೮೬ | ೯೬ |
| ೪೬ | ೫೬ | ೬೬ | ೭೬ | ೮೬ |
| ೩೬ | ೪೬ | ೫೬ | ೬೬ | ೭೬ |
| ೨೬ | ೩೬ | ೪೬ | ೫೬ | ೬೬ |

ಇದು ಕಳ್ಳರ ಬಾಯಿಕಟ್ಟಿನ ಯಂತ್ರವು. ಈ ಯಂತ್ರವನ್ನು ಆದಿತ್ಯವಾರ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿಧಾರ್ಚನೆ ಯಿಂದ ಅದನ್ನು ಪೂಜಿಸಿ ಗುಗ್ಗಳ ದೂಪವನ್ನು ಹಾಕಿ ಕಳ್ಳರ ಭಯ ಪ್ರಾಪ್ತವಾದಾಗ ಈ ಯಂತ್ರದ ಪ್ರಯೋಗವನ್ನು ಮಾಡಿಕೊಳ್ಳಿರಿ. ಕಳ್ಳರಿಂದ ಆಗುವ ಭಯವೆಲ್ಲ ನಿರ್ಭಯವೆಂದರಿವುದು.

## ಖಡ್ಗ ಸಿದ್ಧಿ ಯಂತ್ರ

| | | | | |
|---|---|---|---|---|
| ಓಂ | ಅಂ | ಬಂ | ಓಂ | ಅಂ |
| ಬಂ | ಓಂ | ಅಂ | ಬಂ | ಓಂ |
| ಅಂ | ಬಂ | ಓಂ | ಅಂ | ಬಂ |
| ಓಂ | ಅಂ | ಬಂ | ಓಂ | ಅಂ |
| ಬಂ | ಓಂ | ಅಂ | ಬಂ | ಓಂ |

ಇದು ಖಡ್ಗಸಿದ್ಧಿಯ ಯಂತ್ರವು. ಈ ಯಂತ್ರವನ್ನು ರವಿವಾರದಿವಸ ತಾಮ್ರದ ತಗಡಿನ ಮೇಲೆ ಬರೆದು ವಿಧಾನೋಕ್ತವಾಗಿ ಅದನ್ನು ಪೂಜಿಸ ಬೇಕು. ನಂತರ ಗುಗ್ಗಳದೂಪವನ್ನುಹಾಕಿ ಪ್ರಸಂಗಾನುಸಾರವಾಗಿ ಇದನ್ನು ಸಾಧಿಸಿಕೊಂಡು ಇಟ್ಟುಕೊಂಡಿರಬೇಕು. ಸಮಯ ಬಿದ್ದಾಗ ಇದರ ಉಪ ಯೋಗ ಮಾಡಿಕೊಳ್ಳಬೇಕು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೧೩ | ೨೧ | ೧೭ | ೩೫ | ೧೫ |
| ೫೫ | ೬೫ | ೩೧ | ೧೬ | ೨೩ |
| ೧೧ | ೧೮ | ೭೫ | ೫೧ | ೩೪ |
| ೨೫ | ೧೨ | ೩೫ | ೨೪ | ೬೧ |
| ೪೫ | ೨೮ | ೧೧ | ೨೧ | ೭೧ |

ಇದು ಖಡ್ಗಸಿದ್ಧಿಯ ಯಂತ್ರವು. ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಗುರುವಾರದಿವಸ ಬರೆದು ವಿಧಾನೋಕ್ತವಾಗಿ ಪೂಜೆಯನ್ನುಮಾಡಿ ಇದರ ಉಪಯೋಗವನ್ನು ಮಾಡಿಕೊಳ್ಳಬೇಕು. ಇದರಿಂದ ಖಡ್ಗಸಿದ್ಧಿಯಾಗುವದು.

## ನಾರಹುಣ್ಣಿಗೆ ಕಟ್ಟುವ ಯಂತ್ರ

| | | |
|---|---|---|
| ೯ | ೫ | ೮ |
| ೩ | ೬ | ೧ |
| ೭ | ೪ | ೨ |

ಈ ಯಂತ್ರವನ್ನು ನಾರಹುಣ್ಣು ಆದವರಿಗೆ ಕಾಗದದ ಮೇಲೆ ಬರೆದು ಕರೇ ದಾರದಿಂದ ಕಟ್ಟಲು ನಾರಹುಣ್ಣು ಪರಿಹಾರವಾಗುವದು.

## ಕುಷ್ಟರೋಗ ನಿವಾರಣ ಯಂತ್ರ

| | | | | |
|---|---|---|---|---|
| ಓಂ | ಹ್ರಾಂ | ಓಂ | ಹ್ರಾಂ | ಓಂ |
| ಹ್ರಾಂ | ಓಂ | ಹ್ರಾಂ | ಓಂ | ಹ್ರಾಂ |
| ಓಂ | ಹ್ರಾಂ | ಓಂ | ಹ್ರಾಂ | ಓಂ |
| ಹ್ರಾಂ | ಓಂ | ಹ್ರಾಂ | ಓಂ | ಹ್ರಾಂ |
| ಓಂ | ಹ್ರಾಂ | ಓಂ | ಹ್ರಾಂ | ಓಂ |

ಇದು ಕುಷ್ಟರೋಗ ನಿವಾರಣ ಯಂತ್ರವು. ಈ ಯಂತ್ರವನ್ನು ಗ್ರಹಣಕಾಲದಲ್ಲಿಯಾಗಲಿ ಅಥವಾ ಆದಿತ್ಯವಾರ ಅಮಾವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ವಿಧಾನೋಕ್ತವಾಗಿ ಗುಗ್ಗಳ ಧೂಪ ಸಹಿತ ಪೂಜಿಸಿ ಒಂದು ಟೆಂಗಿನಕಾಯಿಯನ್ನು ಒಡೆದು ಶನಿವಾರವನ್ನು ಮಾಡಿ ನಮಸ್ಕರಿಸಿ ರೋಗಿಗೆ ಪೂರ್ವ ಮುಖವಾಗಿ ಕೂಡ್ರಿಸಿ ಕರೇದಾರದಿಂದ ಕಟ್ಟಲು ಕುಷ್ಟರೋಗವು ಶಾಂತಿಯಾಗುವದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೧೦೫ | ೧೦೮ | ೧೦೬ | ೧೦೭ | ೧೦೫ |
| ೧೦೩ | ೧೦೫ | ೧೦೬ | ೧೦೫ | ೧೦೯ |
| ೧೦೪ | ೧೦೮ | ೧೦೫ | ೧೦೭ | ೧೦೪ |
| ೧೧೨ | ೧೦೫ | ೧೦೬ | ೧೦೫ | ೧೦೨ |
| ೧೦೫ | ೧೦೮ | ೧೦೬ | ೧೦೭ | ೧೦೫ |

ಇದು ಕುಷ್ಟರೋಗ ನಿವಾರಣ ಯಂತ್ರವು. ಈ ಯಂತ್ರವನ್ನು ಆದಿತ್ಯವಾರದಿವಸ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಆ ಯಂತ್ರವನ್ನು ಪೂಜಿಸಿ ಗುಗ್ಗಳ ಹೊಗೆಯನ್ನು ಹಾಕಿ ಕಾಯಿ ಒಡೆದು ಶಾಂತಿಯಿಂದ ಕುಷ್ಟರೋಗಿಗೆ ಕರೇದಾರದಲ್ಲಿ ಕಟ್ಟಲು ಕುಷ್ಟ ರೋಗ ನಿವಾರಣವಾಗುವದು.

## ಸ್ತ್ರೀರೋಗ ನಿವಾರಣ ಯಂತ್ರ

| | | | | |
|---|---|---|---|---|
| ಊಂ | ಓಂ | ಊಂ | ಓಂ | ಊಂ |
| ಓಂ | ಊಂ | ಓಂ | ಊಂ | ಓಂ |
| ಊಂ | ಓಂ | ಊಂ | ಓಂ | ಊಂ |
| ಓಂ | ಊಂ | ಓಂ | ಊಂ | ಓಂ |
| ಊಂ | ಓಂ | ಊಂ | ಓಂ | ಊಂ |

ಇದು ಸ್ತ್ರೀರೋಗ ನಿವಾರಣ ಯಂತ್ರ ಈ ಯಂತ್ರವನ್ನು ಆದಿತ್ಯವಾರ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿದಾರ್ಚನೆಯಿಂದ ಪೂಜಿಸಿ ಗುಗ್ಗಳ ಧೂಪವನ್ನು ಹಾಕಿ ಒಂದು ಟೆಂಗಿನಕಾಯಿಯನ್ನು ಒಡೆದು ಶಾಂತಿಯನ್ನು ಮಾಡಿ ರೋಗವಿದ್ದ ಸ್ತ್ರೀಯರಿಗೆ ಕಟ್ಟಲು ಸರ್ವರೋಗ ನಿವಾರಣವಾಗುವದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೩ | ೭ | ೨ | ೯ | ೪ |
| ೫ | ೧೨ | ೬ | ೭ | ೫ |
| ೬ | ೫ | ೯ | ೪ | ೯ |
| ೮ | ೭ | ೩ | ೨ | ೧ |

ಇದು ಸ್ತ್ರೀಯರ ರೋಗನಿವಾರಣ ಯಂತ್ರ ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಆದಿತ್ಯವಾರ ದಿವಸ ಬರೆದು ವಿಧಾನೋಕ್ತವಾಗಿ ಪೂಜಿಸಿ ಗುಗ್ಗಳಧೂಪವನ್ನು ಹಾಕಿ ನಾರಿಫಲವನ್ನು ಸಮರ್ಪಿಸಿ ರೋಗವಿದ್ದ ಸ್ತ್ರೀಯರು ಕರೇದಾರದಲ್ಲಿ ಧರಿಸಲು ಸರ್ವರೋಗ ನಿವಾರಣವು ಸಿದ್ಧಾಂತವು

## ತೆಂಗು ಅಡಿಕೆ ಫಲವೃದ್ಧಿ ಯಂತ್ರ

| | | | | |
|---|---|---|---|---|
| ಸಂ | ಹೃಂ | ಕ್ಷಂ | ಶಿಂ | ಓಂ |
| ಓಂ | ಶಿಂ | ಕ್ಷಂ | ಹೃಂ | ಸಂ |
| ಸಂ | ಹೃಂ | ಕ್ಷಂ | ಶಿಂ | ಓಂ |
| ಶಿಂ | ಕ್ಷಂ | ಹೃಂ | ಸಂ | ಓಂ |
| ಸಂ | ಹೃಂ | ಕ್ಷಂ | ಶಿಂ | ಓಂ |

ಇದು ತೆಂಗು ಅಡಿಕೆಯ ಫಲ ಹೆಚ್ಚಾಗಿ ಮಾಡುವ ಯಂತ್ರವು ಈ ಯಂತ್ರವನ್ನು ಪಂಚಲೋಹದ ತಗಡಿನ ಮೇಲೆ ಆದಿತ್ಯವಾರ ಅಮಾವಾಸ್ಯೆಯ ದಿವಸ ಬರೆದು ಅಷ್ಟವಿಧಾರ್ಚನೆಯಿಂದ ಅದನ್ನು ಪೂಜಿಸಿ ಗುಗ್ಗಳದ ದೂಪವನ್ನು ಹಾಕಿ ಒಂದು ಟೆಂಗಿನ ಫಲವನ್ನು ಸಮರ್ಪಿಸಿ ತೋಟದ ನಾಲ್ಕು ಮೂಲೆಯಲ್ಲಿ ಇರಿಸಲು ಹೆಚ್ಚಾಗಿ ಫಲವೃದ್ಧಿಯಾಗುವದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೨೪ | ೪೪ | ೩೪ | ೪೪ | ೨೪ |
| ೪೪ | ೨೪ | ೨೪ | ೨೪ | ೪೪ |
| ೩೪ | ೪೪ | ೨೪ | ೪೪ | ೩೪ |
| ೪೪ | ೨೪ | ೩೪ | ೨೪ | ೪೪ |
| ೨೪ | ೪೪ | ೩೪ | ೪೪ | ೨೪ |

ಇದು ತೆಂಗು ಅಡಿಕೆಯ ಫಲವನ್ನು ಹೆಚ್ಚಾಗುವಂತೆ ಹುಳಗಳ ಬಾಧೆ ಆಗದಂತೆ ಮಾಡುವ ಯಂತ್ರವು ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಅದರ ಪೂಜೆಯನ್ನು ಮಾಡಿ ಗುಗ್ಗಳದ ಧೂಪವನ್ನು ಹಾಕಿ ನಾರೀಫಲವನ್ನು ಅರ್ಪಿಸಿ ತಯಾರಾದ ಈ ಯಂತ್ರವನ್ನು ತೋಟದಲ್ಲಿ ಇರಿಸಲು ಹೆಚ್ಚಾಗಿ ಫಲಬರುವದು.

## ಯಕ್ಷಿಣಿ ದರ್ಶನ ಯಂತ್ರ

| | | | | |
|---|---|---|---|---|
| ಪ್ಲೆಂ | ಪ್ಲೆಂ | ಓಂ | ಪ್ಲೆಂ | ಪ್ಲೆಂ |
| ಓಂ | ಪ್ಲೆಂ | ಪ್ಲೆಂ | ಓಂ | ಪ್ಲೆಂ |
| ಪ್ಲೆಂ | ಓಂ | ಪ್ಲೆಂ | ಪ್ಲೆಂ | ಓಂ |
| ಪ್ಲೆಂ | ಪ್ಲೆಂ | ಓಂ | ಪ್ಲೆಂ | ಪ್ಲೆಂ |
| ಓಂ | ಪ್ಲೆಂ | ಪ್ಲೆಂ | ಓಂ | ಪ್ಲೆಂ |

ಇದು ಯಕ್ಷಿಣಿಯ ದರ್ಶನದ ಯಂತ್ರವು ಈ ಯಂತ್ರವನ್ನು ತಾಮ್ರದ ತಗಡಿನ ಮೇಲೆ ಬರೆದು ಗ್ರಹಣಕಾಲದಲ್ಲಿ ತಯಾರಿಸಿ ಅಷ್ಟವಿದಾರ್ಚನೆಯಿಂದ ಅದನ್ನು ಪೂಜಿಸಿ ಗುಗ್ಗಳದ ಧೂಪದ ಹೊಗೆಯನ್ನು ಬಡಿಯಿಸಿ ತೆಂಗಿನ ಫಲವನ್ನು ಅರ್ಪಿಸಿ ತಯಾರ ಮಾಡಿಕೊಂಡು ರಾತ್ರಿ ಮಲಗುವಾಗ ತಲೆಗುಂಬಿಲೆಯಿಟ್ಟುಕೊಂಡು ಮಲಗಲು ಯಕ್ಷಿಣಿಯು ಬಂದು ದರ್ಶನವಾಗುವಳು

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೫ | ೧೫ | ೩೫ | ೨೫ | ೫ |
| ೩೫ | ೫ | ೧೫ | ೫ | ೩೫ |
| ೫ | ೨೫ | ೫ | ೧೫ | ೨೫ |
| ೨೫ | ೫ | ೩೫ | ೫ | ೧೫ |
| ೫ | ೩೫ | ೨೫ | ೩೫ | ೫ |

ಇದು ಯಕ್ಷಿಣಿ ದರ್ಶನದ ಯಂತ್ರವು ಈ ಯಂತ್ರವನ್ನು ಗುರುವಾರ ದಿವಸ ಅಮಾವಾಸಿ ಬಂದಾಗ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿಧಾರ್ಚನೆಯಿಂದ ಪೂಜಿಸಿ ಗುಗ್ಗಳದ ದೂಪವನ್ನು ಹಾಕಿ ನಾರಿಫಲವನ್ನು ಸಮರ್ಪಿಸಿ ತಯಾರ ಮಾಡಿ ರಾತ್ರಿ ಕಾಲದಲ್ಲಿ ಮಲಗುವಾಗ ತನ್ನ ತಲೆಗಿಂಬಿನಲ್ಲಿ ಇಟ್ಟುಕೊಂಡು ಮಲಗಬೇಕು ಯಕ್ಷಿಣಿಯು ದರ್ಶನವನ್ನೀಯುವಳು,

## ಕಲ್ಪವೃಕ್ಷ ದರ್ಶನ ಯಂತ್ರ

| | | | | |
|---|---|---|---|---|
| ದಂ | ದಂ | ದಂ | ಓಂ | ಹೂಂ |
| ಹೂಂ | ಓಂ | ದಂ | ದಂ | ದಂ |
| ದಂ | ದಂ | ದಂ | ಓಂ | ಹೂಂ |
| ಹೂಂ | ಓಂ | ದಂ | ದಂ | ದಂ |
| ದಂ | ದಂ | ದಂ | ಓಂ | ಹೂಂ |

ಇದು ಕಲ್ಪವೃಕ್ಷವನ್ನು ದರ್ಶನ ಮಾಡಿಕೊಡುವ ಯಂತ್ರವು. ಈ ಯಂತ್ರವನ್ನು ಗ್ರಹಣ ಕಾಲದಲ್ಲಿಯಾಗಲಿ ಅಥವಾ ಆದಿತ್ಯವಾರ ಅಮವಾಶಿಯು ದಿವಸವಾಗಲಿ ತಾಮ್ರದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಆ ಯಂತ್ರವನ್ನು ಪೂಜೆಯನ್ನು ಮಾಡಿ

ಗುಗ್ಗಳ ಧೂಪವನ್ನು ಹಾಕಿ ತೆಂಗಿನಕಾಯಿಯನ್ನು ಒಡೆದು ಸಮರ್ಪಿಸಿ ತಯಾರಮಾಡಿದ ಈ ಯಂತ್ರವನ್ನು ತಾವು ಮಲಗುವಾಗ ತನ್ನ ತಲೆಯ ಕೆಳಗಿರಿಸಿಕೊಂಡು ಮಲಗಬೇಕು ರಾತ್ರಿ ನಿದ್ದಿಯಲ್ಲಿ ಕಲ್ಪವೃಕ್ಷ ದರ್ಶನ ವಾಗಬಹುದು

## ಮತ್ತೊಂದು ಪ್ರಕಾರಯಂತ್ರ

| | | | | |
|---|---|---|---|---|
| ೯ | ೨೯ | ೩೯ | ೨೯ | ೯ |
| ೩೯ | ೯ | ೨೯ | ೯ | ೨೯ |
| ೨೯ | ೩೯ | ೯ | ೨೯ | ೩೯ |
| ೩೯ | ೯ | ೩೯ | ೯ | ೨೯ |
| ೯ | ೩೯ | ೨೯ | ೩೯ | ೯ |

ಇದು ಕಲ್ಪವೃಕ್ಷವನ್ನು ಕಾಣುವ ಯಂತ್ರವು ಈ ಯಂತ್ರವನ್ನು ಆದಿತ್ಯವಾರ ಅಮವಾಶಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ವಿಧಾನೋಕ್ತವಾಗಿ ಗುಗ್ಗಳ ದೂಪದ ಹೊಗೆಯಿಂದ ಪೂಜಿಸಿ ನಾರಿಫಲವನ್ನು ಅರ್ಪಿಸಿ ತಯಾರ ಮಾಡಿಕೊಂಡು ತಾನು ರಾತ್ರಿ ಕಾಲದಲ್ಲಿ ಮಲಗುವಾಗ ತನ್ನ ತಲೆಯ ಕೆಳಗೆ ಇರಿಸಿ ಮಲಗಿಕೊಂಡರೆ ನಿದ್ರೆಯಲ್ಲಿ ಕಲ್ಪವೃಕ್ಷವನ್ನು ಕಾಣಬಹುದು.

## ಕಾಮಧೇನು ದರ್ಶನ ಯಂತ್ರ

| | | | | |
|---|---|---|---|---|
| ಕಾಂ | ಕಾಂ | ಕಾಂ | ಊಂ | ಇಂ |
| ಇಂ | ಊಂ | ಕಾಂ | ಕಾಂ | ಕಾಂ |
| ಕಾಂ | ಕಾಂ | ಕಾಂ | ಊಂ | ಇಂ |
| ಇಂ | ಊಂ | ಕಾಂ | ಕಾಂ | ಕಾಂ |
| ಕಾಂ | ಕಾಂ | ಕಾಂ | ಊಂ | ಇಂ |

ಇದು ಕಾಮಧೇನು ದರ್ಶನವಾಗುವ ಯಂತ್ರವು. ಈ ಯಂತ್ರವನ್ನು ಗ್ರಹಣ ಕಾಲದಲ್ಲಿಯಾಗಲಿ ಅಥವಾ ಆದಿತ್ಯವಾರ ಅಮವಾಸಿಯ ದಿವಸ ವಾಗಲಿ ಶುಚಿರ್ಭೂತನಾಗಿದ್ದು ಪಂಚಲೋಹದ ತಗಡಿನಲ್ಲಿ ಬರೆದು ದಶೋಪ ಚಾರದಿಂದ ಗುಗ್ಗಳ ದೂಪಸಹಿತವಾಗಿ ಪೂಜಿಸಿ ಒಂದು ಟೆಂಗಿನಕಾಯಿ-ಯನ್ನು ಒಡೆದು ಶಾಂತಿಯನ್ನು ಮಾಡಿ ತಾನು ಮಲಗುವಾಗ ರಾತ್ರಿ ತಲೆ ಗಿಂಬಿವಲ್ಲಿ ಇಟ್ಟುಕೊಂಡು ಮಲಗಿದರೆ ಸ್ವಪ್ನದಲ್ಲಿ ಕಾಮಧೇನುವನ್ನು ಕಾಣ ಬಹುದು.

## ಮತ್ತೊಂದು ಪ್ರಕಾರ ಯಂತ್ರ

| | | | | |
|---|---|---|---|---|
| ೭ | ೨೭ | ೭ | ೩೭ | ೭ |
| ೩೭ | ೭ | ೭ | ೭ | ೨೭ |
| ೨೭ | ೩೭ | ೭ | ೭ | ೩೭ |
| ೩೭ | ೭ | ೨೭ | ೭ | ೨೭ |
| ೭ | ೨೭ | ೩೭ | ೨೭ | ೭ |

ಇದು ಕಾಮಧೇನು ದರ್ಶನ ವಾಗುವ ಯಂತ್ರ. ಈ ಯಂತ್ರ ವನ್ನು ಆದಿತ್ಯವಾರ ದಿವಸ ಅಮಾ ವಾಸಿಯ ದಿವಸ ತಾಮ್ರದ ತಗಡಿನ ಮೇಲೆ ಬರೆದು ಅಷ್ಟವಿಧಾರ್ಚನೆ ಯಿಂದ ಅದನ್ನುಪೂಜಿಸಿ ಗುಗ್ಗಳದ ದೂಪದ ಹೊಗೆಯನ್ನು ಹಾಕಿ ತೆಂ ಗಿನಕಾಯಿ ಒಡೆದು ತಯಾರಿಸಿ ತಾನು ಮಲಗುವಾಗ ರಾತ್ರಿಯಲ್ಲಿ ತಲೆಗಿಂಬಿಗೆಇಟ್ಟುಕೊಂಡು ಮಲಗಿದರೆ ಸ್ವಪ್ನದಲ್ಲಿ ಕಾಮಧೇನುವನ್ನು ಕಾಣಬಹುದು.

## ಮೃತ್ಯುಂಜಯ ಯಂತ್ರ

ಈ ಯಂತ್ರವು ಮೃತ್ಯುಂಜಯ ಯಂತ್ರವು ಈ ಯಂತ್ರವನ್ನು ಗ್ರಹಣ ಕಾಲದಲ್ಲಿ ಉತ್ತಮ ಇಲ್ಲವೆ ಆದಿತ್ಯವಾರ ದಿವಸ ಅಮವಾಸಿ ಬಂದಾಗ ಪಂಚ

ಲೋಹದ ತಗಡಿನ ಮೇಲೆ ಈ ಯಂತ್ರವನ್ನು ಬರೆದು ದಶೋಪಚಾರದಿಂದ ಈ ಯಂತ್ರ ಪೂಜೆಯನ್ನು ಮಾಡಿ ಗುಗ್ಗುಳ ಧೂಪದ ಹೊಗೆಯನ್ನು



ಚೆನ್ನಾಗಿ ಬಡೆಯಿಸಿ ಒಂದು ಟೆಂಗಿನ ಕಾಯಿಯನ್ನು ಒಡೆದು ಸಮರ್ಪಿಸಿ ತಯಾರ ಮಾಡಿ ಧರಿಸಿಕೊಂಡರೆ ಸರ್ವರೋಗ ಅಪಮೃತ್ಯು ಭಯಸಹಿತ ಪರಿಹಾರವಾಗುವವು ಸಿದ್ಧಾಂತವು

## ವೀರಭದ್ರನ ಯಂತ್ರ

ಈ ಯಂತ್ರವು ವೀರಭದ್ರನ ಯಂತ್ರವು. ಈ ಯಂತ್ರವನ್ನು ಗ್ರಹಣ ಕಾಲದಲ್ಲಿ ಪಂಚಲೋಹದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಅದನ್ನು ಪೂಜೆಯನ್ನು ಮಾಡಿ ಗುಗ್ಗುಳ ಧೂಪವನ್ನು ಹಾಕಿ ಒಂದು ಟೆಂಗಿನ ಕಾಯಿಯನ್ನು ಒಡೆದು ತಯಾರಿಸಿ ಧರಿಸಿಕೊಳ್ಳಲು ಸರ್ವ ಕಾರ್ಯ ಸಿದ್ಧಿ

## ವೀರಭದ್ರನ ಯಂತ್ರ



ಯಾಗುವದು ರೋಗಿಗಳು ಧರಿಸಲು ಸರ್ವರೋಗ ನಿವಾರಣವಾಗುವವು. ಸಿದ್ಧಾಂತವಾದೆದ್ದು ಮನಗಂಡದ್ದು.

## ಶಿವಯೆಂತ್ರವು

ಇದು ಶಿವನ ಯಂತ್ರವು. ಈ ಯಂತ್ರವನ್ನು ಗ್ರಹಣ ಹಿಡಿದಾಗ ಆಗಲಿ ಇಲ್ಲವೆ ಆದಿತ್ಯವಾರ ಅಮವಾಸಿಯ: ದಿವಸವಾಗಲಿ ಪಂಚಲೋಹದ ತಗಡಿನ ಮೇಲೆ ಈ ಯಂತ್ರವನ್ನು ಶುಚಿರ್ಭೂತನಾಗಿ ಬರೆದು ದಶೋಪಚಾರದಿಂದ ಈ ಯಂತ್ರವನ್ನು ಪೂಜೆಯನ್ನು ಮಾಡಿ ಗುಗ್ಗಳಧೂಪದ ಹೊಗೆಯನ್ನುಹಾಕಿ ಒಂದು ಟೆಂಗಿನಕಾಯಿಯನ್ನು ವಡೆದು ಶಾಂತಿಯಿಂದ ಈ ಯಂತ್ರವನ್ನು

## ಶಿವಯಂತ್ರವು



ವ್ಯಾಧಿ ಹಿಡಿದವರಿಗೆ ಧರಿಸಲು ವ್ಯಾಧಿ ಪರಿಹಾರವಾಗುವದು. ಸಿದ್ಧಾಂತವು ಮನಗಂಡದ್ದು—ಹುಸಿ ಅಂದವರು ತಾವೇ ಕೆಟ್ಟಾರು.

## ಗುರುಯಂತ್ರವು



ಇದು ಗುರುವಿನ ಯಂತ್ರವು. ಈ ಯಂತ್ರವನ್ನು ಗ್ರಹಣಕಾಲದಲ್ಲಿ ಪಂಚಲೋಹದ ತಗಡಿನ ಮೇಲೆ ಬರೆದು ದಶೋಪಚಾರದಿಂದ ಇದನ್ನು ಗುಗ್ಗಳಧೂಪ ಸಹಿತವಾಗಿ ಪೂಜೆಯನ್ನು ಮಾಡಿ ಒಂದು ಟೆಂಗಿನಕಾಯಿಯನ್ನು ಒಡೆದು ತಯಾರ ಮಾಡಿಕೊಳ್ಳಬೇಕು ಇದು ಅಷ್ಟ ಅಪಮೃತ್ಯು ಪರಿಹಾರವಾಗುವದು ಹುಟ್ಟುಬಂಜೆಗೆ ಮಕ್ಕಳಾಗುವವು. ಯಾವಯಾವದೂ ಕಾರ್ಯಕ್ಕೆ ಹೋದರೆ ಆ ಕಾರ್ಯ ಸಿದ್ಧಿಯಾಗುವದು. ವಟ್ಟಿನ ಮೇಲೆ ಸರ್ವಕಾರ್ಯಕ್ಕೂ ಬರುವದು. ಯಾವ ಕಾರ್ಯಕಾದರೂ ಭಕ್ತಿಪೂರ್ವಕವಾಗಿ ಉಪಯೋಗ ಮಾಡಿಕೊಳ್ಳಬೇಕು. ಸಿದ್ಧಾಂತವು ಮಾನಗಂಡದ್ದು.

## ಶಿವಯಂತ್ರವು



ಇದು ಶಿವ ಯಂತ್ರವು. ಈ ಯಂತ್ರವನ್ನು ಸೂರ್ಯಗ್ರಹಣ ಕಾಲದಲ್ಲಿ ಪಂಚಲೋಹದ ತಗಡಿನಲ್ಲಿ ಬರೆದು ದಶೋಪಚಾರದಿಂದ ಇದನ್ನು ಪೂಜಿಸಿ ಗುಗ್ಗಳ ಧೂಪವನ್ನು ಹಾಕಿ ಒಂದು ಟೆಂಗಿನಕಾಯಿಯನ್ನು ಒಡೆದು ಭಕ್ತಿಪೂರ್ವಕವಾಗಿ ಜೋಕೆಯಿಂದ ಧರಿಸಿಕೊಳ್ಳಬೇಕು. ಇದರ ಫಲವು ಹುಟ್ಟು

ಬಂಜೆಗೆ ಮಕ್ಕಳಾಗುವವು. ಹೊಲ ಮಾಡುವವನು ಬಳಿಯಲ್ಲಿ ಇಟ್ಟು ಕೊಂಡು ಹೊಲ ಮಾಡಲು ಮಹಾ ಬೆಳೆಯುಕ್ಕು. ತನ್ನ ಶತ್ರುವಿನ ಸ್ತಂಭನವು ತನ್ನ ಮುಖದ ಮೇಲೆ ಕಳೆ ಬರುವದು. ಸರ್ವಗ್ರಹಗಳು ಬಿಟ್ಟುಹೋಗು ವವು. ಎರಡನೆಯವರು ತನಗೆ ಏನಾದರೂ ಮಾಡಿದರೆ ಅದು ತನಗೆ ಹೊಂದ ಲರಿಯದು. ಬೆಳೆಯದ ಹೊಲಕ್ಕೆ ಕಟ್ಟಲು ಬೆಳೆಯು ಬಹಳ ಬರುವದು. ಸಿದ್ಧಾಂತವು ಸುಳ್ಳು ಎಂದವರು ತಾವೇ ಕೆಟ್ಟಾರು.

## ನವಗ್ರಹ ಯಂತ್ರವು




ಇದು ನವಗ್ರಹ ಯಂತ್ರವು. ಈ ಯಂತ್ರವನ್ನು ಸೂರ್ಯ ಗ್ರಹಣ ಹಿಡಿದಾಗ ಪಂಚಲೋಹದ ತಗಡಿನಮೇಲೆ ಅಥವಾ ಆದಿತ್ಯವಾರ ಅಮಾವಾ ಬಂದಾಗ ಬರೆದು ದಶೋಪಚಾರದಿಂದ ಭಕ್ತಿಪೂರ್ವಕವಾಗಿ ನಂಬಿಗೆಯಿಂ ಇದನ್ನು ಪೂಜೆಯನ್ನು ಮಾಡಿ ಗುಗ್ಗಳ ಧೂಪವನ್ನು ಹಾಕಿ ಒಂದು ಟೆಂಗಿ ಕಾಯಿಯನ್ನು ಒಡೆದು ಸಮರ್ಪಿಸಬೇಕು ಈ ಯಂತ್ರವನ್ನು ಧರಿಸಿಕೊ ಹರೆ ಶನಿ ಕಾಡಾಟೆ ಮೊದಲಾದ ಎಲ್ಲ ಕಷ್ಟ-ನಷ್ಟಗಳು ಪರಿಹಾರವಾಗುವ ಮತ್ತು ರೋಗಿಗಳಿಗೆ ಧರಿಸಿದರೆ ಎಲ್ಲ ರೋಗಗಳು ಪರಿಹಾರವಾಗುವ ಯಾವಾಗಲೂ ಯಾವ ಕಾರ್ಯಕ್ಕಾದರೂ ಈ ಯಂತ್ರವನ್ನು ಉಪಯೋ

ಮಾಡಿಕೊಂಡರೆ ತಮ್ಮ ಶನಿಕಾಟ ಮೊದಲಾದ ಯಾವತ್ತೂ ಕಂಟಕಾದಿ ಗಳನ್ನು ಪರಿಹರಿಸಿಕೊಳ್ಳಿರಿ.

### ಶನೈಶ್ಚರನ ಯಂತ್ರ ಶನಿಯ ಯಂತ್ರ




ಇದು ಶನಿಯ ಯಂತ್ರವು. ಈ ಯಂತ್ರವನ್ನು ಗ್ರಹಣ ಕಾಲದಲ್ಲಿ ಪಂಚಲೋಹದ ತಗಡಿನ ಮೇಲಾಗಲಿ ಇಲ್ಲವೆ ಆದಿತ್ಯವಾರ ಅಮಾವಾಸಿಯ ದಿವಸವಾಗಲಿ ಶುಚಿರ್ಭೂತನಾಗಿ ಬರೆದು ದಶೋಪಚಾರದಿಂದ ಪೂಜಿಸಿ ಗುಗ್ಗಳ ಧೂಪವನ್ನು ಹಾಕಿ ವಂದು ತೆಂಗಿನಕಾಯಿಯನ್ನು ವಡೆದು ನಮುಸ್ಕರಿಸಿ ಶನಿ ಕಾಡಾಟವಿದ್ದವರು ಈ ಯಂತ್ರವನ್ನು ಬರೆದುಕೊಂಡು ಧರಿಸಿದರೂ ಅಡ್ಡಿ ಇಲ್ಲ ದಿನಾಲೂ ಪೂಜೆ ಮಾಡಿದರೂ ಅಡ್ಡಿ ಇಲ್ಲ ಶನಿ ಕಾಡಾಟ ಅನೇಕ ತರದ ಕಷ್ಟ-ನಷ್ಟಗಳು ಪರಿಹಾರವಾಗುವವು. ಮುಂಡಿಚಟ್ಟು ಇದಕ್ಕೆ

ಆಗುವದಿಲ್ಲ. ಶುಚಿಯಿಂದ ಧರಿಸಿಕೊಳ್ಳಬೇಕು. ಇದು ಕಷ್ಟನಷ್ಟಗಳಿಗೆ ಎಲ್ಲದಕ್ಕೂ ಬರುತ್ತದೆ, ವ್ಯಾಪಾರ ಉದ್ಯೋಗದಲ್ಲಿಯಾದರೂ ಇದರ ಉಪಯೋಗಮಾಡಿಕೊಳ್ಳಬೇಕು. ಸರ್ವ ಕಾರ್ಯಗಳೂ ಶಿದ್ಧಿಯಾಗುವವು. ಬಹು ಜೋಕೆಯಿಂದ ಜತನ ಮಾಡಿಕೊಳ್ಳಬೇಕು. ಹುಶಿ ಅಂದವರು ತಾವೇ ಕೆಟ್ಟಾರು. ಸಕಲ ಕಾರ್ಯಗಳೂ ಸಿದ್ಧಿಯಾಗುವವು. ಸಿದ್ಧಾಂತವು. ಇದು ಮನಗಂಡದ್ದು.



# ಯಕ್ಷಿಣಿಯ ಮಂತ್ರ ಸಾಧನೆಯು

## ಮಾನಿನಿ ಯಕ್ಷಿಣಿಯ ವಿಧಾನವು

ಈ ಮಾನಿನಿಯು ಮಂತ್ರವನ್ನು ಜಪಿಸುವದರಿಂದ ದೇವತೆಯು ಪ್ರಸನ್ನಳಾಗಿ ತನಗೆ ಬೇಕಾದ ಸಂಪತ್ತನ್ನು ಕೊಡುವಳು ಹಂದೇಹವಿಲ್ಲ.

ಮಂತ್ರವು— ಓಂ ನಮೋ ಐಂ ಮಾನಿನಿ ಹ್ರೀಂ ಏಹಿ ಏಹಿ
ಸುಂದರಿ ಹಸವಿಃಹ ಸಂಗಮಃಹ ನಮೋ ನಮಃ ಸ್ವಹಾ॥

ಈ ಮಂತ್ರವನ್ನು ಶಿದ್ಧಿ ದಿನಗಳಲ್ಲಿ ಶುಚಿರ್ಭೂತನಾಗಿ ಮೌನದಿಂದ ಏಕಾಂತ ಸ್ಥಳದಲ್ಲಿ ಕುಳಿತ ಕೊಂಡು ಏಕಚಿತ್ತದಿಂದ ಎರಡು ಲಕ್ಷ ಜಪವನ್ನು ಮಾಡಿದರೆ ಮಂತ್ರಶಿದ್ಧಿಯಾಗುವದು ಈ ಶಿದ್ಧವಾದ ಮಂತ್ರವನ್ನು ತನಗೆ ಬೇಕಾದಾಗ ಹತ್ತು ಸಾವಿರ ಜಪನನ್ನು ಮಾಡಿ ಮಂತ್ರದೇವತೆಗೆ ಅರ್ಪಿಸಿದರೆ ಆ ದೇವಿಯು ಸಂತುಷ್ಟಳಾಗಿ ತನಗೆ ಸಕಲ ಸಂಪತ್ತನ್ನು ವದಗಿಸಿ ಕೊಡುವಳು ಇದನ್ನು ನೆರೆನಂಬಿ ಶಿದ್ಧಿಯನ್ನು ಮಾಡಿಕೊಂಡು ಸಾಧ್ಯ ಮಾಡಿಕೊಳ್ಳಬೇಕು

## ಅನುರಾಗಿಣಿ ಯಕ್ಷಿಣಿಯ ಮಂತ್ರವಿಧಾನ

ಈ ಅನುರಾಗಿಣಿಯ ಮಂತ್ರಮನ್ನು ಜಪ ಮಾಡುವದರಿಂದ ಯಕ್ಷಿಣಿ ದೇವತೆಯು ಸಂತುಷ್ಟಳಾಗಿ ನಿತ್ಯವೂ ತನಗೆ ಧನವನ್ನು ವದಗಿಸಿಕೊಡುವಳು.

ಮಂತ್ರ— ಓಂ ನಮೋ ಹ್ರೀಂ ಅನುರಾಗಿಣಿ ನಮೋನಮಃ ಸ್ವಹಾ॥

ಈ ಮಂತ್ರವನ್ನು ಗುರುಮುಖದಿಂದ ತಿಳಿದುಕೊಂಡು ಶಿದ್ಧಿ ಮಾಡಿಕೊಳ್ಳಬೇಕಾದರೆ ಶಭುಮೂಹೂರ್ತವನ್ನು ನೋಡಿಕೊಂಡು ಸ್ನಾನ ಸಂಧ್ಯಾವಂದನೆಗಳನ್ನು ನಿತ್ಯ ಕ್ರಮದಂತೆ ತೀರಿಸಿಕೊಂಡು ನಂತರ ಈ ಮಂತ್ರವನ್ನು

ಪ್ರತಿದಿವಸ ಹತ್ತುಸಾವಿರದಂತೆ ಒಂದು ಲಕ್ಷ ಜಪವನ್ನು ಮಾಡಬೇಕು. ಅಂದರೆ ಈ ಮಂತ್ರವು ಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ದಿನಾಲು ಒಂದು ಸಾವಿರ ಅಥವಾ ಎರಡು ಸಾವಿರ ಹೀಗೆ ತನ್ನ ಶಕ್ತ್ಯಾನುಸಾರವಾಗಿ ಜಪಿಸುತ್ತ ಹೋದರೆ ದೇವಿಯು ಪ್ರಸನ್ನಳಾಗಿ ತನಗೆ ಕಾಲ ಕಾಲಕ್ಕೆ ಧನ ಪ್ರಾಪ್ತಮಾಡಿಕೊಡುವಳು ಸಾಧ್ಯಮಾಡಿಕೊಳ್ಳಬೇಕು.

## ನಟಿ ಯಕ್ಷಿಣಿ ಮಂತ್ರವಿಧಾನವು

ಈ ನಟೀ ಯಕ್ಷಿಣಿ ಮಂತ್ರವನ್ನು ಜಪಮಾಡುವದರಿಂದ ನಟಿಯಕ್ಷಿಣಿ ದೇವಿಯು ತನಗೆ ಧನ ಧಾನ್ಯಾದಿಗಳನ್ನು ಕೊಟ್ಟು ಕಾಪಾಡುವಳೆಂದು ತಿಳಿಯಬೇಕು.

ಮಂತ್ರ— ಓಂ ನಮೋ ಹ್ರೀಂ ನಟಿ ನಟಿ ಸ್ವರೂಪವತಿ ನಮೋಭವಃ ಸ್ವಹಾ॥

ಈ ಮಂತ್ರವನ್ನು ಸಿದ್ಧಿ ದಿನಗಳಲ್ಲಿ ಜಿತೇಂದ್ರಿಯಾಗಿ ಮಡಿಹುಡಿಯಿಂದ ತನ್ನ ನಿತ್ಯ ಕರ್ಮಾದಿಗಳನ್ನು ತೀರಿಸಿಕೊಂಡು ಆ ಮೇಲೆ ಈ ಮಂತ್ರವನ್ನು ಪಠಣ ಮಾಡಲಿಕ್ಕೆ ಆರಂಭ ಮಾಡಬೇಕು. ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಿದರೆ ಮಂತ್ರಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ತನಗೆ ಬೇಕಾದಾಗ ದಿನಒಂದಕ್ಕೆ ಹತ್ತು ಸಾವಿರ ಜಪವನ್ನು ಮಾಡಿ ಮಂತ್ರ ಮೂರ್ತಿಗೆ ನಿವೇದನೇಯಾಮಿ ಎಂದು ನೀರು ಬಿಡಬೇಕು. ನಟಿ ದೇವಿಯು ಪ್ರಸನ್ನಳಾಗಿ ನಿಧಿರಸಾಯಾನ ಅಂಜನಾದಿಗಳನ್ನು ಸಕಾಲಕೆ ಕೊಟ್ಟು ರಕ್ಷಿಸುನಳು ಸಿದ್ಧಾಂತವಾದದ್ದು.

## ಅಮೃತಮಯಿ ಯಕ್ಷಿಣಿ ಮಂತ್ರ ವಿಧಾನ

ಈ ಅಮೃತಮಯಿ ಯಕ್ಷಿಣಿಯ ಮಂತ್ರವನ್ನು ಪಠಣಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನಗೆ ದಿನಾಲೂ ಧನವನ್ನು ಕೊಡುವಳು. ಸಂದೇಹವಿಲ್ಲವು.

ಮಂತ್ರ— ಓಂ ನಮೊ ಗುಲುಗುಲು ಚಂದ್ರಾಮೃತಮಯಿ ಅವಜಾ-
ಲಿತಂ ಹುಲು ಹುಲು ಚಂದ್ರಿಣಿ ಶೀನಮಃಸ್ವಹಾ॥

ಈ ಮಂತ್ರವನ್ನು ಶುಭಮುಹೂರ್ತವನ್ನು ನೋಡಿಕೊಂಡು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ತೀರಿಸಿಕೊಂಡ ಮೇಲೆ ಈ ಮಂತ್ರವನ್ನು ೧ಲಕ್ಷ ಜಪವನ್ನು ಮಾಡಿ ಸಿದ್ಧಿ ಮಾಡಿಕೊಳ್ಳಬೇಕು ಶಿದ್ಧಿಯನ್ನು ಮಾಡಿಕೊಳ್ಳದಿದ್ದರೆ ಫಲವಾಗುವದಿಲ್ಲ. ಇದನ್ನರಿತು ಎಲ್ಲ ಮಂತ್ರಗಳನ್ನು ಸಿದ್ಧಿಯನ್ನೇ ಮಾಡಿಕೊಳ್ಳಬೇಕು. ಈ ಶಿದ್ಧವಾದ ಮಂತ್ರ-ವನ್ನು ದಿನಾಲು ಒಂದು ಸಾವಿರ ಅಥವಾ ಎರಡು ಸಾವಿರ ಹೀಗೆ ತನ್ನ ಶಕ್ತ್ಯಾನುಸಾರವಾಗಿ ಪಠಿಸುತ್ತಿರಬೇಕು. ಅಂದರೆ ಮಂತ್ರಮೂರ್ತಿಯಾದ ದೇವಿಯು ಸಂತುಷ್ಟಳಾಗಿ ಪ್ರತಿ ದಿನಕ್ಕೂ ತನಗೆ ಬೇಕಾಗುವಷ್ಟು ಧನವನ್ನು ಕೊಡುವಳು ಸಂದೇಹವಿಲ್ಲ.

## ರತಿ ಪ್ರಿಯಾ ಯಕ್ಷಿಣಿ ಮಂತ್ರ ವಿಧಾನ

ಈ ರತಿ ಪ್ರಿಯಾ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ ದೇವಿಯು ಸಂತುಷ್ಟಳಾಗಿ ಒಂದು ತರದ ನಾಣ್ಯಗಳನ್ನು ಕೊಡುವಳು.

ಮಂತ್ರ— ಓಂ ನಮೊಹ್ರೀಂ ರತಿಪ್ರೀಯೇ ನಮೊ ನಮಃ ಸ್ವಹಾ॥

ಈ ಮಂತ್ರವನ್ನು ಪುನಶ್ಚರಣೆ ಮಾಡಿಕೊಳ್ಳಬೇಕಾದರೆ ಒಂದು ಶಿದ್ಧಿ ದಿನವನ್ನು ನೋಡಿ ಶುದ್ಧಮನಸ್ಸಿನಿಂದ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಮತಾನುಸಾರವಾಗಿ ಮಾಡಿಕೊಂಡು ಆ ಮೇಲೆ ಈ ಮಂತ್ರವನ್ನು ಜಪ ಮಾಡಲಿಕ್ಕೆ ಆರಂಭ ಮಾಡಬೇಕು. ಈ ಮಂತ್ರದ ಜಪ ಸಂಖ್ಯಾ ೧ ಲಕ್ಷ ಮಾಡಬೇಕು. ಅಂದರೆ ಮಂತ್ರ ಸಿದ್ಧಿಯ ಪುನಸ್ಮರಣೆಯಾಗುವದು ಈ ಸಿದ್ಧವಾದ ಮಂತ್ರವನ್ನು ಬಿಟ್ಟುಬಿಡದೇ ದಿನಾಲೂ ಹತ್ತು ಸಾವಿರ ಪಠಣ ಮಾಡಿ ಮಂತ್ರಮೂರ್ತಿಗೆ ನಿವೇದಯಾಮಿ ಎಂದು ಶುಕ್ತಿ ಕಾಮುದ್ರೆಯಿಂದ ನೀರನ್ನು ಬಿಡಬೇಕು. ದೇವಿಯು ಪ್ರಸನ್ನಳಾಗಿ ನಿತ್ಯವೂ ನಾಣ್ಯಾದಿಗಳನ್ನು ಕೊಟ್ಟು ಕಾಪಾಡುವದು ಖಂಡಿತವಾದದ್ದು.

## ಕಾಳಿಕಾ ಯಕ್ಷಿಣಿ ಮಂತ್ರ ವಿಧಾನವು

ಈ ಮಹಾ ಕಾಳಿಕಾ ಯಕ್ಷಿಣಿ ಮಂತ್ರವನ್ನು ಪಠಣಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನ್ನ ಮನಸ್ಸಿನ ಎಲ್ಲ ಮನೋಭಿಷ್ಟವನ್ನು ಪದಗಿಸಿ ಕೊಡುವಳು.

ಮಂತ್ರ—॥ ಓಂ ನಮೊ ಕಾಳಿಕಾದೇವ್ಯೈನಮೋನಮಃಸ್ವಾಹಾ ॥

ಮನಸ್ಮರಣೆಯಿಲ್ಲದೆ ಮಂತ್ರವನ್ನು ಪಠಣಮಾಡಿದರೆ ಫಲವಾಗುವದಿಲ್ಲ. ಆದ್ದರಿಂದ ಪ್ರತಿಯೊಂದು ಮಂತ್ರಗಳನ್ನು ಸಿದ್ಧಿಮಾಡಿಕೊಂಡೇ ತೀರಬೇಕು. ಅದಕ್ಕಾಗಿ ಸಿದ್ಧಿ ದಿನದಲ್ಲಿ ಶುಚಿರ್ಭೂತನಾಗಿ ತನ್ನ ನಿತ್ಯ-ಕರ್ಮಾದಿಗಳನ್ನು ಮೊದಲು ತೀರಿಸಿಕೊಂಡು ನಂತರ ಮಂತ್ರಸಿದ್ಧಿಯ ಕಾರ್ಯವನ್ನು ಕೈಕೊಳ್ಳಬೇಕು. ಈ ಮಂತ್ರವನ್ನು ಪಠಿಸುವ ಮೊದಲು ಮಂತ್ರಮೂರ್ತಿಯನ್ನು ನೆನೆದು ೧ಲಕ್ಷಜಪವನ್ನು ಮಾಡಿ ಮಂತ್ರಮೂರ್ತಿಗೆ ಅರ್ಪಿಸಬೇಕು. ಅಂದರೆ ಮಂತ್ರಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಪಠಣ ಮಾಡಿ ನೀರು ಬಿಡಬೇಕು. ಅಂದರೆ ಮಂತ್ರ ಯಕ್ಷಿಣಿಯು ಪ್ರಸನ್ನಳಾಗಿ ತನಗೆ ಬೇಕಾದದ್ದನ್ನು ಪದಗಿಸಿ ಕೊಟ್ಟು ಮನೋಭಿಷ್ಟವನ್ನು ಪೂರ್ಣಮಾಡಿಕೊಡುವಳು. ಸಂದೇಹವಿಲ್ಲ.

## ಚಿತ್ರರೂಪಿಣಿ ಯಕ್ಷಿಣಿ ಮಂತ್ರ ವಿಧಾನವು

ಈ ಚಿತ್ರ ರೂಪಿಣಿ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ ಸಕಲ ಸಿದ್ಧಿಗಳುಂಟಾಗುವವು. ಮತ್ತು ಮನೋಭಿಷ್ಟವೂ ಪೂರ್ತಿಯಾಗುವದು.

ಮಂತ್ರ— ॥ಓಂ ನಮೋ ವಿಚಿತ್ರೆ ಚಿತ್ರರೂಪೇಣ ಸಿದ್ಧಿಂ ಕುರು ಕುರು ನಮೋನಮಃಸ್ವಾಹಾ ॥

ಈ ಮಂತ್ರವನ್ನು ಸಿದ್ಧಿಮಾಡಿಕೊಳ್ಳಬೇಕಾದರೆ ತಾನು ಜಿತೇಂದ್ರಿ

ಯಾಗಿದ್ದು ನಿತ್ಯ ತನ್ನ ಸ್ನಾನ ಸಂಧ್ಯಾವಂದನೆಗಳನ್ನು ತೀರಿಸಿಕೊಂಡ ನಂತರ ಮಂತ್ರ ಮೂರ್ತಿಯು ಯಕ್ಷಿಣಿ ದೇವತೆಯನ್ನು ನೆನೆದು ಶುದ್ಧ ಮನಸ್ಸಿನಿಂದ ಜಪ ಮಾಲಿಕೆಯನ್ನು ಕೈಯಲ್ಲಿ ತೆಗೆದುಕೊಂಡು ಮಂತ್ರಮೂರ್ತಿಯನ್ನು ಧ್ಯಾನಿಸುತ್ತಾ ಎರಡುಲಕ್ಷ ಜಪವನ್ನು ಮಾಡಬೇಕು. ಜಪಸಂಖ್ಯಾ ಸಂಪೂರ್ಣ ಮುಗಿದಮೇಲೆ ಮಂಗಲವನ್ನು ಮಾಡಿ ಎರಡು ಲಕ್ಷ ಜಪವನ್ನು ಮಾಡಿದಲ್ಲಿ ಯಂತ್ರಮೂರ್ತಿಗೆ ಸಲ್ಲಲಿ ಎಂದು ಶಕ್ತಿ ಕಾಮುದ್ರೆಯಿಂದ ನೀರನ್ನು ಬಿಟ್ಟು ಪೂಜಾ ಸಮಾಪ್ತಿಯನ್ನು ಮಾಡಬೇಕು. ಅದೇ ದಿವಸ ರಾತ್ರಿ ಸ್ವಪ್ನದಲ್ಲಿ ದೇವಿಯು ಪ್ರತ್ಯಕ್ಷ ಬಂದು ತನ್ನ ಮನೋಭಿಷ್ಟವನ್ನು ಒದಗಿಸಿಕೊಡುವಳು. ತನ್ನ ಮನಸ್ಸಿನ ಅಭಿಪ್ರಾಯದಂತೆ ದೇವತೆಯನ್ನು ಕೇಳಿಕೊಳ್ಳತಕ್ಕದ್ದು.

## ಪದ್ಮಿನಿ ಯಕ್ಷಿಣಿ ಮಂತ್ರವಿಧಾನ

ಪದ್ಮಿನಿ ಯಕ್ಷಿಣಿಯ ಮಂತ್ರವನ್ನು ಜಪಿಸುವದರಿಂದ ದೇವತೆಯು ಸಂತುಷ್ಟಳಾಗಿ ಸ್ವಪ್ನದಲ್ಲಿ ದರ್ಶನವನ್ನು ಕೊಟ್ಟು ನಿತ್ಯವೂ ಧನವನ್ನು ಕೊಡುವಳು.

ಮಂತ್ರ— ॥ಓಂ ನಮೊ ಹ್ರೀಂ ಪದ್ಮಿನಿನಮೋನಮಃಸ್ವಹಾ ॥

ಈ ಮಂತ್ರವನ್ನು ಸಿದ್ಧಿಮಾಡಿಕೊಳ್ಳಬೇಕಾದರೆ ಶುಭ ಮುಹೂರ್ತವನ್ನು ನೋಡಿಕೊಂಡು ಜಿತೇಂದ್ರಿಯಾಗಿದ್ದು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಮತಾನುಸಾರವಾಗಿ ಮಾಡಿಕೊಂಡು ಆಮೇಲೆ ಮಂತ್ರಪಠಣ ಮಾಡಲಿಕ್ಕೆ ಆರಂಭಿಸಬೇಕು. ಈ ಮಂತ್ರಸಿದ್ಧಿಯ ಜಪಸಂಖ್ಯಾ ೧ ಲಕ್ಷವನ್ನು ಪಠಣಮಾಡಿ ಮಂತ್ರಮೂರ್ತಿಗೆ ಅರ್ಘ್ಯವನ್ನು ಕೊಡಬೇಕು ಅದರಂತೆ ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಿ ಪೂರ್ಣ ಮುಗಿದಮೇಲೆ ಒಂದು ಲಕ್ಷ ಜಪವನ್ನು ಮಾಡಿದ್ದು ದೇವೀ ನಿನ್ನ ಪಾದಕ್ಕೆ ಅರ್ಪಿತವೆಂದು ನೀರು ಬಿಡಬೇಕು. ಆದರೆ ಪದ್ಮಿನಿ ಯಕ್ಷಿಣಿಯು ರಾತ್ರಿ ಸ್ವಪ್ನದಲ್ಲಿ ದರ್ಶನವನ್ನು ಕೊಡುವಳು. ಮತ್ತು ತನಗೆ ಅನುಕೂಲವಾಗಿ ಧನವನ್ನೀಯುವಳು.

## ಸುರಸುಂದರಿ ಯಕ್ಷಿಣಿ ಮಂತ್ರವಿಧಾನ

ಈ ಸುರಸುಂದರಿ, ಯಕ್ಷಿಣಿಯ ಮಂತ್ರವನ್ನು ಪಠಣಮಾಡುವದರಿಂದ ದೇವಿಯು ಪ್ರತ್ಯಕ್ಷಳಾಗಿ ನಿನಗೇನು ಬೇಕು ಬೇಡು ಎಂದು ಅನ್ನುತ್ತಾಳೆ. ಆವಾಗ್ಗೆ ನಿಮಗೆ ಬೇಕಾದದ್ದನ್ನು ಬೇಡಿಕೊಳ್ಳಬೇಕು. ದೇವೀ ನಾನು ದರಿದ್ರನಿದ್ದೇನೆ. ನನ್ನ ದರಿದ್ರತನವನ್ನು ಬಿಡಿಸಿ ಕಾಪಾಡು. ಎಂದು ಕೇಳಿಕೊಳ್ಳಬೇಕು.

ಮಂತ್ರ—॥ ಓಂನಮೊಹ್ರೀಂ ಆಗಚ್ಛ ಆಗಚ್ಛ ಸುರಸುಂದರಿ
ನಮೊನಮಃ ಸ್ವಹಾ ॥

ಈ ಯಂತ್ರವನ್ನು ಪುನಶ್ಚರಣೆ ಮಾಡಿಕೊಳ್ಳಬೇಕಾದರೆ ಶಿದ್ಧಿ ದಿನಗಳನ್ನು ನೋಡಿಕೊಂಡು ಆ ದಿನಸ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ಮಾಡಿಕೊಳ್ಳಬೇಕು. ಆಮೇಲೆ ಸದರಿ ಮಂತ್ರವನ್ನು ಏಕಚಿತ್ತದಿಂದ ಮೌನವಾಗಿ ಕುಳಿತುಕೊಂಡು ಒಂದು ಲಕ್ಷ ಜಪವನ್ನು ಮಾಡಬೇಕು. ಆ ಜಪವು ಸಂಪೂರ್ಣ ಮುಗಿದಮೇಲೆ ಸುರಸುಂದರಿ ಯಕ್ಷಿಣಿ ಮಂತ್ರ ಪುನಶ್ಚರಣೆಗಾಗಿ ೧ಲಕ್ಷ ಜಪವನ್ನು ಮಾಡಿದ್ದು ಮಂತ್ರಮೂರ್ತಿಗೆ ನಿವೇದಯಾಮಿ ಎಂದು ನೀರು ಬಿಡಬೇಕು. ಆ ದಿವಸ ರಾತ್ರಿ ಮಂತ್ರ ಮೂರ್ತಿಯಾದ ಸುರಸುಂದರಿ ದೇವಿಯು ಪ್ರಸನ್ನಳಾಗಿ ನಿನಗೇನು ಬೇಕು? ಎಂದು ಸ್ವಪ್ನದಲ್ಲಿ ಕೇಳುವಳು. ಅದಕ್ಕೆ ನೀವು ದೇವಿಯೇ ನನಗೆ ಅನ್ನ ಅರಿವೆಗೆ ಸಹ ಕೊರತೆಯಾಗಿರುವದು. ಅದನ್ನು ಪರಿಹರಿಸಿ ಧನ ಧಾನ್ಯಾದಿಗಳನ್ನು ಅನುಗ್ರಹಿಸಿ ಕಾಪಾಡು ಎಂದು ದೀನಸ್ವರದಿಂದ ಕೇಳಿಕೊಳ್ಳಬೇಕು ಹೆದರಬಾರದು. ನೀನು ಕೇಳಿದಂತೆಯೇ ನಿನ್ನ ಮನೋಭಿಷ್ಟವನ್ನು ದಯಪಾಲಿಸಿ ಕಾಪಾಡುವಳು. ಸಿದ್ಧಾಂತವು.

## ಮನೊಹರ ಯಕ್ಷಿಣಿ ಮಂತ್ರ ವಿಧಾಸ

ಈ ಮನೋಹರ ಯಕ್ಷಿಣಿ ಮಂತ್ರವನ್ನು ಪಠಣ ಮಾಡುವವರಿಂದ ದೇವಿಯು ತನ್ನ ಸ್ವಪ್ನದಲ್ಲಿ ಬಂದು ದಿನಾಲು ಧನವನ್ನು ಅನುಗ್ರಹಿಸುವಳು

ಆ ಕೊಟ್ಟ(ಬಂದ)ಧನವನ್ನು ಆವತ್ತಿಂದ ಆವತ್ತೆ ಎಲ್ಲವನ್ನೂ ವೆಚ್ಚ ಮಾಡಬೇಕು ಉಳಿಯಬಾರದು

ಮಂತ್ರ— ॥ಓಂ ನಮೋ ಹ್ರೀಂ ಸರ್ವಕಾಮದೇಮನೋಹರೇ
ನಮೋನಮಃಸ್ವಹಾ॥

ಈ ಮಂತ್ರವನ್ನು ಅಂದರೆ ಮನೋಹರೆ ಮಂತ್ರವನ್ನು ಪುನಶ್ಚರನೆಯನ್ನು ಮಾಡಿಕೊಳ್ಳಬೇಕಾದರೆ ಶಿದ್ಧಿಧನವನ್ನು ನೋಡಿಕೊಂಡು ಜಿತೇಂದ್ರಿಯನಾಗಿದ್ದು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರುಸಾಂಪ್ರದಾಯ ಪ್ರಕಾರ ಮಾಡಿಕೊಂಡು ನಂತರ ಮಂತ್ರವನ್ನು ಪಠಣ ಮಾಡಲಿಕ್ಕೆ ಪ್ರಾರಂಭಿಸಬೇಕು. ಈ ಮಂತ್ರದ ಶಿದ್ಧಿಯ ಜಪ ಸಂಖ್ಯೆಯು ಎರಡು ಲಕ್ಷ ಮಾಡಬೇಕು. ಈ ಎರಡು ಲಕ್ಷ ಜಪವು ಎಂದು ಮುಗಿಯುವದೋ ಅಲ್ಲಿಯವರೆಗೆ ಅಂದರೆ ಒಂದು ದಿವಸಕ್ಕೆ ಹತ್ತು ಸಾವಿರ ಜಪವನ್ನು ಮಾಡುತ್ತಿರಬೇಕು. ಇದರಂತೆ ಒಟ್ಟು ಜಪಸಂಖ್ಯೆಯು ಎರಡು ಲಕ್ಷ ಯಾವ ದಿವಸವಾಯಿತೋ ಆ ದಿವಸ ಒಟ್ಟು ಎರಡು ಲಕ್ಷ ಜಪ ಮಾಡಿದ್ದು ಮಂತ್ರ ಮೂರ್ತಿಗೆ ಸಲ್ಲಲಿ ಎಂದು ನೀರು ಬಿಟ್ಟು ಪೂಜೆಯನ್ನು ಸಂಪೂರ್ಣ ಮಾಡಬೇಕು ಆ ದಿವಸ ತನ್ನ ಶಕ್ತ್ಯಾನುಸಾರವಾಗಿ ಅನ್ನ ಸಂತರ್ಪಣೆಯನ್ನು ಮಾಡಬೇಕು. ಆ ದಿವಸ ರಾತ್ರಿ ಕಾಲದಲ್ಲಿ ಸ್ವಪ್ನದೊಳಗೆ ಪ್ರಸನ್ನಳಾಗುವಳು ಮೇಲೆ ಬರೆದ ಪ್ರಕಾರ ಬೇಡಿಕೊಳ್ಳತಕ್ಕದ್ದು.

## ಸ್ವರ್ಣರೇಖಾ ಯಕ್ಷಿಣಿ ಮಂತ್ರ ವಿಧಾನ

ಈ ಸ್ವರ್ಣ ರೇಖಾಯಕ್ಷಿಣಿ ಮಂತ್ರವನ್ನು ಪಠಣ ಮಾಡುವದರಿಂದ ದೇವಿಯು ಪ್ರಸನ್ನಳಾಗಿ ತಾನು ಬೇಡಿದ್ದನ್ನು ಅನುಗ್ರಹಿಸುವಳೆಂದು ತಿಳಿಯಬೇಕು.

ಮಂತ್ರ— ॥ಓಂ ನಮೊವರ್ಕರ ಶಾರ್ಮಲಿ ಸುವರ್ಣ ರೇಖೆ ಸ್ವಾಹಾ
ಓಂ ಹ್ರಾಂ ಹ್ರೀಂ ಹ್ರೂಂ ಹ್ರಃ ನಮೋನಮಃ ಸ್ವಹಾ॥

ಈ ಮಂತ್ರವನ್ನು ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಜಿತೇಂದ್ರಿಯಾಗಿದ್ದು ಸ್ನಾನ ಸಂಧ್ಯಾವಂದನೆಗಳನ್ನು ತೀರಿಸಿಕೊಂಡು ನಂತರ ಮಂತ್ರ ಪುನಶರ್ಚಣೆಯ ಕಾರ್ಯವನ್ನು ಕೈಕೊಳ್ಳಬೇಕು ಈ ಮಂತ್ರಶಿದ್ಧಿಗಾಗಿ ಎರಡು ಲಕ್ಷ ಜಪವನ್ನು ಮಾಡಬೇಕು. ಅಂದರೆ ಪುನಶ್ಚರಣೆಯಾಗಿ ಶಿದ್ಧಿಯಾಗುವದು ಅದಕ್ಕಾಗಿ ಶಾಂತವೃತ್ತಿಯಿಂದ ನಂಬಿಗೆಯನ್ನಿಟ್ಟು ದಿನಾಲೂ ಹತ್ತು ಸಾವಿರದಂತೆ ಜಪಾ ಮಾಡುತ್ತ ಇರಬೇಕು. ಎರಡು ಲಕ್ಷ ಜಪವು ಎಂದಿಗೆ ಮುಗಿಯುವದೋ ಅಲ್ಲಿಯವರೆಗೆ ದಿನಾಲೂ ಮಾಡಿದ ಜಪವನ್ನು ಬರೆದಿಟ್ಟು ಒಟ್ಟು ಎರಡು ಲಕ್ಷ ಜಪ ಮುಗಿದ ದಿವಸ ಮಂತ್ರ ಮೂರ್ತಿಗೆ ಅರ್ಘ್ಯವನ್ನು ಕೊಟ್ಟು ನೀರು ಬಿಡಬೇಕು. ಆ ದಿವಸ ರಾತ್ರಿ ದೇವಿಯು ಪ್ರಸನ್ನಳಾಗಿ ತಾನು ಬೇಡಿದ್ದನ್ನು ದಯಪಾಲಿಸುವಳು.

## ಪದ್ಮಕೇಶಿಯಕ್ಷಿಣಿ ಮಂತ್ರ ವಿಧಾನ

ಪದ್ಮಕೇಶಿಯಕ್ಷಿಣಿ ಮಂತ್ರವನ್ನು ಪಠಣ ಮಾಡಿದರೆ ತನ್ನ ಸರ್ವ ಕಾರ್ಯಕ್ಕೆ ಶಿದ್ಧಿಯನ್ನುಂಟು ಮಾಡುವಳು ಶಿದ್ಧಿ ತಪ್ಪದು.

ಮಂತ್ರ— ॥ಓಂ ನಮೋ ಹ್ರೀಂ ನಖಕೇಶಿಕನಕವತಿ
ನಮೋನಮಃ ಸ್ವಹಾ॥

ಪುನಶ್ಚರಣೆ ಇಲ್ಲದೆ ಮಂತ್ರವು ಶಿದ್ಧಿಸುವದಿಲ್ಲ ಆದ್ದರಿಂದ ಎಲ್ಲ ಮಂತ್ರಗಳನ್ನು ಶಿದ್ಧಿಯನ್ನು ಮಾಡಿಕೊಂಡೇ ತೀರಬೇಕು. ಅಂದರೆ ತಾನು ಕಷ್ಟಪಟ್ಟದ್ದಕ್ಕೆ ಪ್ರತಿಫಲವು ದೊರೆಯುವದು ಆದ್ದರಿಂದ ಪುನಶ್ಚರಣೆಯನ್ನು ಮಾಡಿಕೊಳ್ಳಬೇಕು. ಈ ಮಂತ್ರದ ಪುನಶ್ಚರಣೆಯ ಜಪಸಂಖ್ಯೆಯು ಒಂದು ಲಕ್ಷ ಮಾಡಬೇಕು. ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಶುಚಿರ್ಭೂತನಾಗಿದ್ದು ಒಂದು ದಿವಸಕ್ಕೆ ಹತ್ತು ಸಾವಿರದಂತೆ ಜಪವನ್ನು ಮಾಡಬೇಕು. ಇದರಂತೆ ಒಂದು ಲಕ್ಷ ಜಪವು ಎಲ್ಲಿಗೆ ಮುಗಿಯುವದೋ ಆ ದಿವಸ ಮಂಗಲವನ್ನು ಮಾಡಿ ಒಂದು ಲಕ್ಷ ಜಪವು ಮಂತ್ರಮೂರ್ತಿಗೆ ಸಲ್ಲಲಿ ಎಂದು ಶುಕ್ತಿಕಾಮುದ್ರೆಯಿಂದ ನೀರನ್ನು ಬಿಡಬೇಕು. ಆ ದಿವಸ ತನ್ನ ಅನುಕೂಲಿಯ ಪ್ರಕಾರ ಅನ್ನ ಸಂತರ್ಪಣೆಯನ್ನು ಮಾಡಿ ಪೂಜಾ ಮುಗಿಸಿಕೊಳ್ಳಬೇಕು. ಈ

ಶಿದ್ಧವಾದ ಮಂತ್ರ ಮಂತ್ರವನ್ನು ದಿನಾ ಹತ್ತು ಸಾವಿರವಂತೆ ಜಪ ಮಾಡುತ್ತ ಹೋದರೆ ದೇವಿಯು ಪ್ರಸನ್ನಳಾಗಿ ಸರ್ವಶಿದ್ಧಿಯನ್ನುಂಟು ಮಾಡುವಳು.

## ವಶೀಕರಣ ಯಕ್ಷಿಣಿ ಮಂತ್ರವಿಧಾನ

ಈ ವಶೀಕರಣ ಯಕ್ಷಿಣಿಯ ಮಂತ್ರವನ್ನು ಪಠಣ ಮಾಡುವದರಿಂದ ಶ್ರೀ ದೇವತೆಯು ಪ್ರಸನ್ನಳಾಗಿ ತನ್ನ ಇಚ್ಛಿತ ಇಷ್ಟಾರ್ಥವನ್ನು ಕೊಡುವಳು.

ಮಂತ್ರ - ||ಓಂ ನಮೊ ದ್ವಾರದೇವತಾಯೈ ಹ್ರೀಂ
ನಮೊನಮಃ ಸ್ವಹಾ||

ಈ ಮಂತ್ರವನ್ನು ಪುನಶ್ಚರಣೆಗಾಗಿ ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಜಿತೇಂದ್ರಿಯಾಗಿದ್ದು ಸ್ನಾನವನ್ನು ಮಾಡಿ ಶ್ರೀಗುರುದೇವತಾಧ್ಯಾನಯುಕ್ತನಾಗಿ ತನ್ನ ಗುರು ಸಾಂಪ್ರದಾಯ ಪ್ರಕಾರವಾಗಿ ತನ್ನ ನಿತ್ಯ ಕ್ರಿಯಾಚಾರಗಳನ್ನು ಮುಗಿಸಿಕೊಂಡು ಆ ಮೇಲೆ ಮಂತ್ರಶಿದ್ಧಿಯ ಪುನಶ್ಚರಣೆಗಾಗಿ ಮಂತ್ರವನ್ನು ಜಪ ಮಾಡುವದಕ್ಕೆ ಆರಂಭಿಸಬೇಕು. ಈ ಮಂತ್ರದ ಜಪವು ಒಂದಃ ಲಕ್ಷ ಇರುವದು ಇದನ್ನು ದಿನವಂದಕ್ಕೆ ಹತ್ತು ಸಾವಿರದಂತೆ ಹತ್ತು ದಿವಸ ಪಠಣ ಮಾಡಬೇಕು. ಅಂದರೆ ಈ ಮಂತ್ರವು ಶಿದ್ಧಿಯ ಪುನಶ್ಚರಣೆಯು ಮುಗಿದಂತಾಯಿತು. ಈ ಶಿದ್ಧವಾದ ಮಂತ್ರ ಬೇಕಾದಾಗ ಹತ್ತು ಸಾವಿರ ಜಪಿಸಿದರೆ ರಾತ್ರಿ ಸ್ವಪ್ನದಲ್ಲಿ ದೇವಿಯು ಪ್ರಸನ್ನಳಾಗಿ ಬೇಡಿದ ಇಷ್ಟಾರ್ಥವನ್ನು ಕೊಡುವಳು.

## ವಟಯಕ್ಷಣಿ ಮಂತ್ರ ವಿಧಾನವು

ಈ ವಟಯಕ್ಷಿಣಿ ಮಂತ್ರವನ್ನು ಪಠಣ ಮಾಡುವದರಿಂದ ಮಂತ್ರ ದೇವತೆಯು ಪ್ರಸನ್ನಳಾಗಿ ತನಗೆ ಬೇಕಾದ ಇಷ್ಟಾರ್ಥವನ್ನು ಪೂರೈಸಿ ಕೊಡುತ್ತಾಳೆ.

ಮಂತ್ರ—॥ಓಂ ನಮೋ ಏಹಿ ಏಹಿ ಯಕ್ಷಿ ಯಕ್ಷಿ ವಟವೃಕ್ಷ
ನಿವಾಸಿನಿ ಶೀಘ್ರಂ ಸರ್ವ ಸೌಖ್ಯಂ ಕುರು ಕುರು ಸ್ವಹಾ॥

ಈ ಮಂತ್ರವು ಪುನಶ್ಚರಣೆಯಾಗದ ಹೊರ್ತು ಹಾಗೆಯೇ ಪಠಣ ಮಾಡಿದರೆ ಫಲವಾಗಲಾರದು ಆದ್ದರಿಂದ ಪ್ರತಿಯೊಂದು ಮಂತ್ರಗಳನ್ನು ಶ್ರೀಗುರು ಮುಖದಿಂದ ತಿಳಿದುಕೊಂಡು ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ಪಠಣ ಮಾಡಿದರೆ ಮಂತ್ರ ಪುನಶ್ಚರಣೆಯಾಗುವದು ಶಿದ್ಧವಾದ ಈ ಮಂತ್ರವನ್ನು ಬೇಕಾದಾಗ ಮಂತ್ರ ಮೂರ್ತಿಯನ್ನು ಪೂಜಿಸಿ ಪಠಣ ಮಾಡಿದರೆ ಶೀಘ್ರ ಫಲವಾಗುವದು ಆದ್ದರಿಂದ ಶಿದ್ಧಿ ದಿನಗಳಲ್ಲಿ ಶುಭ ಮುಹೂರ್ತವನ್ನು ನೋಡಿಕೊಂಡು ಆ ದಿವಸ ಶಾಂತ ಮನಸ್ಸಿನಿಂದ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರವಾಗಿ ಮಾಡಿಕೊಂಡು ನಂತರ ಈ ಮಂತ್ರವನ್ನು ಎರಡು ಲಕ್ಷ ಜಪವನ್ನು ಮಾಡಬೇಕು ಅದು ಹೇಗೆಂದರೆ—ವಂದು ದಿವಸಕ್ಕೆ ಹತ್ತು ಸಾವಿರದಂತೆ ಹತ್ತು ದಿವಸಕ್ಕೆ ವಂದು ಲಕ್ಷ ಮುಗಿಯುವದು ಯಿದರಂತೆ ವಟ್ಟು ಇಪ್ಪತ್ತು ದಿವಸಕ್ಕೆ ಎರಡು ಲಕ್ಷ ಜಪ ಮುಗಿಯುವದು ಯಿದರಂತೆಯೇ ದಿನಾಲು ಜಿತೇಂದ್ರಿಯಾಗಿದ್ದು ಮಿತಿಹಾರವನ್ನು ತಗೆದುಕೊಳ್ಳುತ್ತಾ ನಂಬಿಗೆಯಿಂದ ಜಪವನ್ನು ಮಾಡಿ ಮಂತ್ರ ಮೂರ್ತಿಗೆ ಅರ್ಪಿಸಿ ನೀರು ಬಿಡಬೇಕು ಅಂದರೆ ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ತನ್ನ ಮನೋಭಿಷ್ಟವನ್ನು ಸಿದ್ಧ ಮಾಡಿಕೊಡುತ್ತಾಳೆ

## —ಧನಯಕ್ಷಣಿ ಮಂತ್ರ ವಿಧಾನವು—

ಈ ಧನಯಕ್ಷಿಣಿ ಮಂತ್ರವನ್ನು ಜಪ ಮಾಡುವದರಿಂದ ಧನಯಕ್ಷಿಣಿ ದೇವಿಯು ಸಂತುಷ್ಟಳಾಗಿ ತನ್ನ ಬೇಡಿಕೆಯ ಪ್ರಕಾರ ಪ್ರತಿದಿನಕ್ಕೂ ಬೇಕಾಗುವಷ್ಟು ಧನವನ್ನು ಕೊಡುವಳು.

ಮಂತ್ರ—॥ಓಂ ನಮೊ ಹ್ರಾಂ ಹ್ರೀಂ ಹ್ರುಂ ಹ್ರೈಂ ಹ್ರೌಂ
ಹ್ರುಃ ನಮೋ ನಮಃ ಸ್ವಹಾ॥

ಈ ಮಂತ್ರವನ್ನು ಪಠಿಸಿ ಯಿದರಿಂದ ಫಲಪ್ರಾಪ್ತಿಯನ್ನು ಮಾಡಿ ಕೊಳ್ಳಬೇಕಾದರೆ ಒಂದು ಶುಭ ಮುಹೂರ್ತದ ದಿವಸ ಜಿತೇಂದ್ರಿಯಾಗಿ ಶಾಂತ ಮನಸ್ಸಿನಿಂದ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಮತಾನಾಸಾರ ವಾಗಿ ಮಾಡಿಕೊಂಡು ತನ್ನ ನಿತ್ಯಾ ಕರ್ಮಾದಿಗಳನ್ನು ತೀರಿಸಿಕೊಂಡ ನಂತರ ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಿ ಮಂತ್ರ ಮೂರ್ತಿಗೆ ಸಮರ್ಪಿಸಿ ನೀರು ಬಿಡಬೇಕು ಅಂದರೆ ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ಬಂದು ತನ್ನ ಬೇಡಿಕೆಯಂತೆ ಧನವನ್ನು ವದಗಿಸಿ ಕೊಡುತ್ತಾಳೆ ಧೈರ್ಯದಿಂದ ಕೇಳಿಕೊಳ್ಳತಕ್ಕದ್ದು.

## ಪದ್ಮ ಯಕ್ಷಣಿಯ ಮಂತ್ರ ವಿಧಾನವು

ಈ ಪದ್ಮ ಯಕ್ಷಿಣಿ ಮಂತ್ರವನ್ನು ಜಪ ಮಾಡುವದರಿಂದ ದೇವಿಯು ಸಂತುಷ್ಟಳಾಗಿ ತನ್ನ ಗೃಹಕೃತ್ಯಕ್ಕೆ ಊಟಕ್ಕೆ ಬೇಕಾಗುವ ಯಾವತ್ತೂ ಅಡಿಗೆಯ ಸಾಹಿತ್ಯಗಳನ್ನು ಸರಿಯಾಗಿ ಕೊರತೆ ಬೀಳದಂತೆ ವದಗಿಸಿ ಕೊಡುತ್ತಾಳೆ ದೇವಿಯ ಧ್ಯಾನಯುಕ್ತನಾಗಿ ಊಟ ಮಾಡುತ್ತಾ ಆನಂದ ದಿಂದಿರಬೇಕು.

ಮಂತ್ರ – ||ಓಂ ನಮೊ ಜಗತ್ರಯೆ ಮಾತೃಕೆ ಪದ್ಮಸಿಧೆ
ನಮೋ ನಮಃ ಸ್ವಹಾ||

ಈ ಮಂತ್ರವನ್ನು ಶಿದ್ಧಿ ದಿನಗಳಲ್ಲಿ ಶುಚಿರ್ಭೂತನಾಗಿ ತನ್ನ ಗುರು ಸಾಂಪ್ರದಾಯ ಪ್ರಕಾರ ತನ್ನ ನಿತ್ಯ ಕರ್ಮಾಚಾರಣೆಗಳನ್ನು ತೀರಿಸಿಕೊಂಡ ನಂತರ ಈ ಮಂತ್ರವನ್ನು ಪಠಣ ಮಾಡಲಿಕ್ಕೆ ಆರಂಭ ಮಾಡಬೇಕು ಈ ಮಂತ್ರವನ್ನು ಪಠಣ ಮಾಡುವ ಮೊದಲು ಮಂತ್ರ ಮೂರ್ತಿಯನ್ನು ಧ್ಯಾನಿಸಿ ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ದಿನವಂದಕ್ಕೆ ಹತ್ತು ಸಾವಿರದಂತೆ ಹತ್ತು ದಿವಸ ಮಾಡಿ ೧ ಲಕ್ಷ ಜಪ ಮುಗಿದ ಮೇಲೆ ವಂದು ಲಕ್ಷ ಜಪವು ಮಂತ್ರ ಮೂರ್ತಿಗೆ ನಿವೇದಯಾಮಿ ಎಂದು ನೀರು ಬಿಡಬೇಕು ಮತ್ತು ಅವತ್ತಿನ ದಿವಸ ತನ್ನ ಶಕ್ತ್ಯಾನುಸಾರವಾಗಿ ಅನ್ನ ಸಂತರ್ಪಣೆಯನ್ನು

ಮಾಡಬೇಕು ದೇವಿಯು ಸಂತುಷ್ಟಳಾಗಿ ರಾತ್ರಿ ಸ್ವಪ್ನದಲ್ಲಿ ತನ್ನ ಮನೋಭಿಷ್ಟವಾದ ಮೃಷ್ಟಾನ್ನ ಭೋಜನವನ್ನು ವದಗಿಸಿ ಕೊಡುವಳು

## ಚಂದ್ರಿಕಾ ಯಕ್ಷಣಿ ಮಂತ್ರ ವಿಧಾನವು

ಈ ಮಂತ್ರವನ್ನು ಜಪ ಮಾಡುವದರಿಂದ ಚಂದ್ರಿಕಾ ಯಕ್ಷಿಣಿದೇವಿಯು ಪ್ರಸನ್ನಳಾಗಿ ತನಗೆ ಬೇಕಾದದ್ದನ್ನು ಸಕಾಲಕ್ಕೆ ವದಗಿಸಿ ಕೊಡುತ್ತಾಳೆ ಸಂದೇಹವಿಲ್ಲವು.

ಮಂತ್ರ—॥ಓಂ ನಮೊ ಹ್ರೀಂ ಚಂದ್ರಿಕಾದೇವಿ ಹಂಸಂ ಸ್ವಹಾ॥

ಈ ಮಂತ್ರವನ್ನು ವಂದು ಲಕ್ಷ ಜಪ ಮಾಡುವದರಿಂದ ಈ ಮಂತ್ರವು ಸಿದ್ಧಿಯಾಗುವದು ಆದ್ದರಿಂದ ಒಂದು ಶಿದ್ಧಿ ದಿನವನ್ನು ಸಾಧಿಸಿಕೊಂಡ ಅವತ್ತಿನ ದಿವಸ ತಾನು ಜಿತೇಂದ್ರಿಯನಾಗಿದ್ದು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಸಾಂಪ್ರದಾಯಿಕ ಪ್ರಕಾರ ಮಾಡಿಕೊಂಡು ನಂತರ ಮಂತ್ರ ಜಪವನ್ನು ಮಾಡಲಿಕ್ಕೆ ಆರಂಭ ಮಾಡಬೇಕು ಮೊದಲು ಮಂತ್ರ ಮೂರ್ತಿಯನ್ನು ನೆನೆದು ಪಿಘ್ನೇಶ್ವರನನ್ನು ಪೂಜಿಸಿ ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ಏಕ ಚಿತ್ತದಿಂದ ಮಂತ್ರವನ್ನು ಪಠಣ ಮಾಡಬೇಕು ದಿನ ವಂದಕ್ಕೆ ಹತ್ತು ಸಾವಿರ ಜಪವನ್ನು ಮಾಡಬೇಕು ಯಿಂದರಂತೆ ಹತ್ತು ದಿವಸವಾದ ಮೇಲೆ ವಂದು ಲಕ್ಷ ಜಪವು ಮಂತ್ರನ ಮೂರ್ತಿಗೆ ನಿವೇದಯಾಮಿಯೆಂದು ನೀರು ಬಿಡಬೇಕು ಸ್ವಲ್ಪ ಅನ್ನ ಸಂತರ್ಪಣೆಯನ್ನು ಮಾಡಬೇಕು ಅಂದರೆ ದೇವಿಯು ಪ್ರಸನ್ನಳಾಗಿ ತನಗೆ ಬೇಕಾದ ಬೇಡಿಕೆಯನ್ನು ದಯಪಾಲಿಸುವಳು ಬೇಡಿಕೊಳ್ಳಬೇಕು.

## ಬಂಧ ವಿಮೋಚ ಯಕ್ಷಿಣಿ ಮಂತ್ರವಿಧಾನ

ಈ ಬಂಧವಿಮೋಚನ ಯಕ್ಷಿಣಿ ಮಂತ್ರವನ್ನು ಜಪ ಮಾಡುವದರಿಂದ ಏನು ಫಲವೆಂದರೆ ಪ್ರಸಂಗಾನುಸಾರ ತಾನು ಯಾವದಾದರೊಂದು ಬಂಧನದಲ್ಲಿ ಸಿಕ್ಕಾಗ ಈ ಮಂತ್ರವನ್ನು ಪಠಣ ಮಾಡಿದರೆ ದೇವಿಯು ಪ್ರಸನ್ನಳಾಗಿ ತನಗೆ ಬಂದಿರುವ ಬಂಧನವನ್ನು ಬಿಡಿಸುವಳು.

ಮಂತ್ರ— ॥ಓಂ ನಮೋಃಹಟಿಜೇ ಕುಮಾರೀ ನಮೋನಮಃ ॥

ಈ ಮಂತ್ರವು ಪುನಶ್ಚರಣೆಯಿಲ್ಲದೆ ಫಲವಾಗಲರಿಯದು. ಆದಕಾರಣ ಪುನಶ್ಚರಣೆಯನ್ನು ಮಾಡಿಕೊಂಡು ಜಪವನ್ನು ಮಾಡಿಕೊಳ್ಳಬೇಕು ಪುನಶ್ಚರಣೆಯ ವಿಧಾನವೆಂತೆಂದೊಡೆ ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಜಿತೇಂದ್ರಿಯನಾಗಿ ಶಾಂತಮನಸಿನಿಂದ ತನ್ನ ಗುರುದೇವತಾದಿಗಳನ್ನು ನೆನೆದು ಸ್ನಾನ ಸಂಧ್ಯಾವಂದನೆಗಳನ್ನು ಮಾಡಿ ತನ್ನ ನಿತ ಕರ್ಮಾದಿಗಳನ್ನು ತೀರಿಸಿಕೊಂಡ ನಂತರ ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಬೇಕು. ಅಂದರೆ ತನಗೆ ಮಂತ್ರಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ದಿನವೊಂದಕ್ಕೆ ಹತ್ತುಸಾವಿರದಂತೆ ಜಪಮಾಡಿದರೆ ತನಗೆ ಮಂತ್ರದೇವತೆಯು ಪ್ರಸನ್ನಳಾಗಿ ತನ್ನ ಬಯಕೆಯನ್ನು ಪೂರೈಸಿಕೊಡುವಳು. ಮತ್ತು ತನಗೆ ಬಂದಿರುವ ಬಂಧನವನ್ನು ಬಿಡಿಸಿ ಕಾಪಾಡುವಳು. ಧೈರ್ಯದಿಂದ ನೆರವೇರಿಸಬೇಕು.

## ಕ್ಷೀರಾರ್ಣವಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಜಪ ಮಾಡುವವರಿಂದಿ ದೇವಿಯು ಪ್ರಸನ್ನಳಾಗಿ ತನಗೆ ದಿನಾಲೂ ಬೇಕಾಗುವ ಹಾಲು-ಮೊಸರು-ತುಪ್ಪ-ಬೆಣ್ಣೆ-ಹಾಲಸ-ಹಣ್ಣು ಮೊದಲಾದದ್ದನ್ನು ಅನುಗ್ರಹಿಸುವಳು

**ಮಂತ್ರ— ॥ ಓಂ ನಮೋಜ್ವಾಲಾಮಾಣಿಕ್ಯ ಭೂಷನಾಯೈ**
**ನಮೋನಮಃ ಸ್ವಹಾ ॥**

ಈ ಮಂತ್ರವನ್ನು ಒಂದು ಸಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಶುಚಿರ್ಭೂತನಾಗಿದ್ದು ತನ್ನ ಮತಾನುಸಾರವಾಗಿ ನಿತ್ಯ ಕರ್ಮಾದಿಗಳನ್ನು ಮಾಡಿಕೊಂಡು ನಂತರ ಈ ಮಂತ್ರವನ್ನು ಪಠಣಮಾಡಲಿಕ್ಕೆ ಆರಂಭಿಸಬೇಕು. ಮೊದಲು ಶ್ರೀದೇವೀ ಬೀಜಾಕ್ಷರದಿಂದ ನ್ಯಾಸಾದಿಗಳನ್ನು ಮಾಡಿಕೊಂಡು

ಹಿಷ್ಣೇಶ್ವರ ದೇವಿಯರನ್ನು ಪೂಜಿಸಿ ಜಪವನ್ನು ಮಾಡಬೇಕು. ಈ ಮಂತ್ರ ಜಪವು ಒಂದು ಲಕ್ಷ ಮಾಡಿ ಮಂತ್ರಮೂರ್ತಿಗೆ ಅರ್ಪಿಸಿ ನೀರು ಬಿಡಬೇಕು. ಅಂದರೆ ಮಂತ್ರ ಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ತನಗೆ ಬೇಕಾದಾಗ ದಿನವೊಂದಕ್ಕೆ ಹತ್ತುಸಾವಿರದಂತೆ ಜಪವನ್ನು ಮಾಡಬೇಕು. ಅಂದರೆ ಅವಾಗ ದೇವಿಯು ಪ್ರಸನ್ನಳಾಗಿ ತನ್ನ ಮನೋಭಿಷ್ಟವನ್ನು ಪೂರೈಸಿ ಕೊಡುವಳಲ್ಲದೆ ತನಗೆ ನಿತ್ಯ ಊಟಕ್ಕೆ ಬೇಕಾಗುವ ಎಲ್ಲ ಸಾಹಿತ್ಯವನ್ನು ಸದಾ ಒದಗಿಸಿಕೊಡುವಳು. ನಂಬಿಗೆ ಇಟ್ಟು ಮಾಡಿಕೊಳ್ಳತಕ್ಕದ್ದು.

## ಅನ್ನಪೂರ್ಣಾ ಯಕ್ಷಿಣಿ ಮಂತ್ರವಿಧಾನ

ಈ ಅನ್ನಪೂರ್ಣೆಯ ಯಕ್ಷಿಣಿ ಮಂತ್ರವನ್ನು ಜಪಿಸುವದರಿಂದ ಮಂತ್ರ ದೇವತೆಯು ಸಂತುಷ್ಟಳಾಗಿ ತನಗೆ ತನಗೆ ಅನ್ನ-ಅರಿವೆ-ಪಶ್ವಾದಿಗಳ ಸಂಪತ್ತನ್ನು ವದಗಿಸಿ ಕೊಡುತ್ತಾಳೆ. ನೆರೆನಂಬಿಕೊಂಡು ಸಾಧ್ಯಮಾಡಿಕೊಳ್ಳಬೇಕು.

ಮಂತ್ರ— ।। ಓಂ ನಮೋ ಹ್ರೀಂ ಕ್ಲೀಂ ಮಾತಂಗೇಶ್ವರ್ಯೈ
ನಮೋನಮಃ ಸ್ವಹಾ ।।

ಈ ಮಂತ್ರವನ್ನು ಪುನಶ್ಚರಣೆಯಿಲ್ಲದೆ ಜಪಮಾಡಿದರೆ ಫಲವಾಗುವದಿಲ್ಲ ಆದ ಕಾರಣ ಪ್ರತಿಯೊಂದು ಮಂತ್ರಗಳನ್ನು ಸಿದ್ಧಿಮಾಡಿಕೊಳ್ಳಬೇಕಾಗುವದು. ಕಾರಣ ಒಂದು ಸಿದ್ಧಿ ದಿನವನ್ನು ಸಾಧಿಸಿಕೊಂಡು ಆ ದಿವಸ ಜಿತೇಂದ್ರಿಯನಾಗಿ ಶುದ್ಧ ಮನಸ್ಸಿನಿಂದ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರುವಿನ ಸಾಂಪ್ರದಾಯದಂತೆ ಮಾಡಿಕೊಂಡು ನಂತರ ಈ ಮಂತ್ರವನ್ನು ಜಪ ಮಾಡಲಾರಂಭಿಸಬೇಕು. ಮೊದಲು ನ್ಯಾಸಾದಿಗಳನ್ನು ಮಾಡಿಕೊಂಡು ಗಣಪತಿಯನ್ನು ಪೂಜಿಸಿ ಮಂತ್ರಮೂರ್ತಿಯನ್ನು ಧ್ಯಾನಿಸುತ್ತಾ ಒಂದು ಲಕ್ಷ ಜಪವನ್ನು ಮಾಡಿ ಮಂತ್ರಮೂರ್ತಿಗೆ ಅರ್ಘ್ಯವನ್ನು ಕೊಡಬೇಕು. ಅಂದರೆ ಮಂತ್ರಸಿದ್ಧಿಯಾದಂತಾಗುವದು. ಈ ಸಿದ್ಧವಾದ ಮಂತ್ರವನ್ನು ತನಗೆ ಬೇಕಾದಾಗ ದಿನವೊಂದಕ್ಕೆ ಹತ್ತು-ಇಪ್ಪತ್ತು ಸಾವಿರದಂತೆ ತನ್ನ ಶಕ್ತ್ಯಾನು

ಸಾರವಾಗಿ ಮಾಡಿಕೊಂಡರೆ ದೇವಿಯು ಪ್ರಸನ್ನಳಾಗಿ ತನ್ನ ಇಷ್ಟಾರ್ಥವನ್ನು ಪೂರೈಸಿ ಕೊಡುತ್ತಾಳೆ.

## ಶಂಖಿನಿ ಯಕ್ಷಿಣಿ ಮಂತ್ರವಿಧಾನವು

ಈ ಶಂಖಿನಿ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ ತಾವು ಬೇಡಿದ ಪದಾರ್ಥಗಳನ್ನು ಸಕಾಲಕ್ಕೆ ಒದಗಿಸಿಕೊಡುತ್ತಾಳೆ.

ಮಂತ್ರ— ॥ ಓಂ ನಮೊ ಶಂಖಿನಿ ಧಾರಿಣಿ ಶಂಖಾಭರಣೆ ಹ್ರಾಂ
ಹ್ರೀಂ ಕ್ಲೀಂ ಶ್ರೀಂ ಫಮೋನಮಃಸ್ವಹಾ ॥

ಈ ಶಂಖಿನಿ ಯಕ್ಷಿಣಿಯ ಮಂತ್ರವನ್ನು ಪುನಶ್ಚರಣೆಯನ್ನು ಮಾಡಿಕೊಳ್ಳಬೇಕಾದರೆ ಶುಭಮುಹೂರ್ತವನ್ನು ನೋಡಿಕೊಂಡು ಆ ದಿವಸ ಸ್ನಾನ ಸಂಧ್ಯಾವಂದನೆಗಳನ್ನು ಮುಗಿಸಿಕೊಂಡು ನಂತರ ಈ ಮಂತ್ರ ಜಪವನ್ನು ಪ್ರಾರಂಭಿಸಬೇಕು. ಈ ಮಂತ್ರವು ೨ ಲಕ್ಷ ಜಪವನ್ನು ಮಾಡಿ ಮಂತ್ರ ಮೂರ್ತಿಗೆ ಅರ್ಪಿಸಿ ನೀರು ಬಿಡಬೇಕು. ಆಮೇಲೆ ದಿನಾಲೂ ಹತ್ತು ಸಾವಿರ ವಂತೆ ಪಠಿಸುತ್ತ ಹೋದರೆ ದೇವಿಯು ಪ್ರಸನ್ನಳಾಗಿ ತಾನು ಬೇಡಿದ ಇಷ್ಟಾರ್ಥಗಳನ್ನು ದಯಪಾಲಿಸುತ್ತಾಳೆ.

## ಲಕ್ಷ್ಮಿ ಯಕ್ಷಣಿ ಮಂತ್ರ ವಿಧಾನ

ಈ ಲಕ್ಷ್ಮಿ ಯಕ್ಷಣಿ ಮಂತ್ರವನ್ನು ಪಠಣ ಮಾಡುವದರಿಂದ ಮಂತ್ರ ದೇವತೆಯು ಪ್ರಸನ್ನಳಾಗಿ ತನಗೆ ಗ್ರಹಕೃತ್ಯಕ್ಕೆ ಬೇಕಾಗುವ ರಸ ರಸಾಯನ ವನ್ನು ನಿತ್ಯವೂ ಒದಗಿಸಿ ಕೊಡುತ್ತಾಳೆಂದು ತಿಳಿದುಕೊಳ್ಳಬೇಕು.

ಮಂತ್ರ—॥ಓಂನಮೋ ಐಂ ಹ್ರೀಂ ಲಕ್ಷ್ಮೀಂ ಕ್ಲೀಂ ಶ್ರೀಂ
ಕಮಲಧಾರಿಣಿ ಹಂಸಃ ನಮೋ ನಮಃ ಸ್ವಹಾ॥

ಈ ಮಂತ್ರವನ್ನು ಜಪಿಸಬೇಕಾದರೆ ಪುನಶ್ಚರಣೆಯನ್ನು ಮಾಡಿಕೊಳ್ಳ ಬೇಕಾಗುವದು ಆದ್ದರಿಂದ ಒಂದು ಸಿದ್ಧಿ ದಿನವನ್ನು ಗೊತ್ತು ಮಾಡಿಕೊಂಡು ಆ ದಿವಸ ಶುಚಿರ್ಭೂತನಾಗಿ ಏಕ ಚಿತ್ತದಿಂದ ಮಂತ್ರಮೂರ್ತಿಯನ್ನೂ ಗಣಪತಿಯನ್ನು ಪೂಜೆ ಮಾಡಿ ನಂತರ ಮಂತ್ರವನ್ನು ಜಪ ಮಾಡ ಬೇಕು ಜಪ ಸಂಖ್ಯಾ ಒಂದು ಲಕ್ಷವಾಗುವ ವರೆಗೂ ಮಾಡಿ ಮಂತ್ರ ಮೂರ್ತಿಗೆ ಸಲ್ಲಲಿಯೆಂದು ನೀರು ಬಿಡಬೇಕು. ಅಂದರೆ ಆ ಮಂತ್ರವು ತನಗೆ ಶಿದ್ಧಿಯಾಗುವದು. ಈ ಶಿದ್ಧವಾದ ಮಂತ್ರವನ್ನು ದಿನಾಲು ಹತ್ತು ಸಾವಿರ ದಂತೆ ಜಪವನ್ನು ಮಾಡುತ್ತಿದ್ದರೆ ದೇವಿಯು ಪ್ರಸನ್ನಳಾಗಿ ತನ್ನ ಮನೋಭಿ ಪ್ರಾಯವನ್ನು ಪೂರ್ಣ ಮಾಡಿಕೊಡುವಳು. ಬೇಡಿಕೊಳ್ಳತಕ್ಕದು.

## ಶತಪತ್ರಿಣಿ ಯಕ್ಷಣಿ ಮಂತ್ರ ವಿಧಾನ

ಈ ಶತಪತ್ರಿಣಿ ಯಕ್ಷಣಿ ಮಂತ್ರವನ್ನು ಜಪ ಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನಗೆ ದಿನಾಲೂ ರಸ ರಸಾಯನವನ್ನು ದೊರಕಿಸಿ ಕೊಡುವಳು.

ಮಂತ್ರ— ॥ಓಂ ನಮೋ ಹ್ರಾಂ ಶತ ಪತ್ರಿಕೆ ಹ್ರೀಂ ಶ್ರೀಂ
ನಮೋ ನಮಃ ಸ್ವಹಾ॥

ಈ ಶತ ಪತ್ರಿ ಯಕ್ಷಿಣಿ ಮಂತ್ರವನ್ನು ಶಿದ್ಧಿ ದಿನದಲ್ಲಿ ಅಂದರೆ ಶುಭ ಮುಹೂರ್ತದಲ್ಲಿ ತಾನು ಜಿತೇಂದ್ರಿಯನಾಗಿ ಶಾಂತ ಮನಸ್ಸಿನಿಂದ ಸ್ನಾನ್ನ ಮೊದಲಾದ ಸತ್ಕ್ರಿಯೆಗಳನ್ನು ಮಾಡಿ ಕೊಂಡ ನಂತರ ಶ್ರೀ ಗುರುದೇವತಾದಿ ಗಳನ್ನು ಪೂಜಿಸಿ ನಿಯಮೋಕ್ತವಾಗಿ ಮಂತ್ರವನ್ನು ೧ ಲಕ್ಷ ಜಪವನ್ನು ಮಾಡಬೇಕು ಅಂದರೆ ಮಂತ್ರವು ತನಗೆ ಶಿದ್ಧಿಯಾಗುವದು. ಈ ಶಿದ್ಧಿಯಾದ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಕಡಿಮೆಯಿಲ್ಲದೆ ಜಪವನ್ನು ಮಾಡಬೇಕು. ಹೀಗೆ ದಿನಾಲೂ ಆಚರಿಸುತ್ತಿರೋಣದರಿಂದ ಮಂತ್ರ ದೇವತೆಯು ಪ್ರಸನ್ನಳಾಗಿ ತನಗೆ ಬೇಕಾದ ರಸ ರಸಾಯಗಳನ್ನು ಪೂರೈಸಿ

ಕೊಡುತ್ತಾಳೆ ರಾತ್ರಿ ಸ್ವಪ್ನದಲ್ಲಿ ಬಂದು ನಿಮ್ಮ ಬೇಡಿಕೆಯನ್ನು ಕೇಳುವಳು ನೀವು ಹೆದರದೆ ನಿಮ್ಮ ಮನೋ ಬಯಕೆಯನ್ನು ಕೇಳಿಕೊಳ್ಳಬೇಕು. ಕೊಡುತ್ತೇನೆಂದು ಹೇಳಿ ಆಶೀರ್ವಾದವನ್ನು ಮಾಡಿ ಹೋಗುವಳು.

## ಕಾಮೇಶ್ವರಿ ಯಕ್ಷಣಿ ಮಂತ್ರ ವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ತನ್ನ ದಾರಿದ್ರತ್ವವನ್ನು ನಾಶ ಮಾಡಿ ನಿತ್ಯ ತನಗೆ ಬೇಕಾಗುವ ಧನ ಧಾನ್ಯಾದಿ ಸಂಪತ್ತುಗಳನ್ನು ಕೊಡುವಳು.

ಮಂತ್ರ ॥ಓಂ ನಮೋ ಹ್ರೀಂ ಆಗಚ್ಛ
ಕಾಮೇಶ್ವರೀ ನಮೋ ನಮಃ ಸ್ವಹಾ॥

ಈ ಕಾಮೇಶ್ವರಿ ಯಂತ್ರವನ್ನು ಸಿದ್ಧಿದಿನದಲ್ಲಿ ಶುಚಿರ್ಭೂತನಾಗಿ ಏಕಾಂಗಿಯಾಗಿ ಏಕಚಿತ್ತದಿಂದ ದೇವಿಯ ಧ್ಯಾನವನ್ನು ಮಾಡುತ್ತಾ ಒಂದು ಲಕ್ಷ ಜಪವನ್ನು ಮಾಡಬೇಕು. ಅಂದರೆ ತನಗೆ ಮಂತ್ರವು ಸಾಧ್ಯವಾಗುತ್ತದೆ. ಈ ಸಾಧ್ಯವಾದ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಜಪಿಸಿ ಮಂತ್ರಮೂರ್ತಿಗೆ ಅರ್ಪಿಸಿ ನೀರುಬಿಡಬೇಕು. ಹೀಗೆ ದಿನಾಲೂ ನಂಬಿಗೆಯಿಂದ ಜಪಿಸುತ್ತ ಹೋದರೆ ಕಾಮೇಶ್ವರಿ ಯಕ್ಷಿಣಿ ದೇವತೆಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ನಿನಗೆ ಏನು ಬೇಕು ಬೇಡು ಎಂದು ಕೇಳುವಳು. ಆಗ ಹೆದರದೆ ತನ್ನ ಮನೋಭಿಪ್ರಾಯವನ್ನು ಆ ದೇವಿಗೆ ತಿಳಿಸಬೇಕು. ಅದನ್ನು ಆಕೆಯು ಸಂತುಷ್ಟಳಾಗಿ ಅನುಗ್ರಹಿಸುವಳು. ಅಲ್ಲದೆ ಕೆಲ ಸಂಪತ್ತನ್ನು ಕೊಡುವಳು. ನಂಬಿ ಪಡೆದುಕೊಳ್ಳಬೇಕು.

## ಮಹಾನಂಡಾ ಯಕ್ಷಿಣಿ ಮಂತ್ರವಿಧಾನವು

ಈ ಮಹಾನಂದಿನಿ ಯಕ್ಷಿಣಿ ಮಂತ್ರವನ್ನು ಪಠಿಸುವದರಿಂದ ತನ್ನ ಮನೋಭಿಷ್ಟವು ಪೂರ್ಣವಾಗಿ ತನಗೆ ಸಕಲ ಸಿದ್ಧಿಯನ್ನುಂಟುಮಾಡುವಳು.

ಮಂತ್ರ— । ಓಂ ನಮೋ ಐಂ ಹ್ರೀಂ ಮಹಾನಂದಿ ।।
ಭೀಷಣೆ ಹ್ರೀಂ ಹ್ರೂಂ ನಮೋನಮಃ ಸ್ವಹಾ ||

ಈ ಮಂತ್ರವನ್ನು ಪುನಶ್ಚರಣೆ ಮಾಡಿಕೊಳ್ಳದೆ ಹಾಗೇ ಪಠಿಸಿದರ ಫಲ ಹಾಗುವದಿಲ್ಲವಾದಕಾರಣ ಎಲ್ಲ ಮಂತ್ರಗಳನ್ನುಮೊದಲು ಸಿದ್ಧಿ ಮಾಡಿಕೊಂಡು ಹಿಂದಿನಿಂದ ಆ ಮಂತ್ರದ ಉಪಯೋಗವನ್ನು ಮಾಡಿಕೊಳ್ಳಬೇಕು. ಅದು ಹೇಗೆಂದರೆ ಒಂದು ಸಿದ್ಧಿ ದಿನವನ್ನು ನೋಡಿಕೊಂಡು ಆ ಸಿದ್ಧಿ ದಿನದಲ್ಲಿ ತಾನು ಜಿತೇಂದ್ರಿಯನಾಗಿದ್ದು ಸಮಾಧಾನ ಪೂರ್ವಕವಾಗಿ ಸ್ನಾನ ಸಂಧ್ಯಾವಂದನೆ ಗಳನ್ನು ತೀರಿಸಿಕೊಂಡು ಆ ಮೇಲೆ ಗಣಪತಿ ದೇವಿಯರನ್ನು ಪೂಜಿಸಿ ನೆನೆದು ನ್ಯಾಸಾದಿಗಳನ್ನು ಮಾಡಿಕೊಂಡು ಮಂತ್ರವನ್ನು ಜಪ ಮಾಡಲಿಕ್ಕೆ ಆರಂಭಿಸ ಬೇಕು ಎರಡು ಲಕ್ಷ ಜಪವು ಮುಗಿದ ನಂತರ ಮಂತ್ರಮೂರ್ತಿಗೆ ಅರ್ಪಿಸಿ ನೀರು ಬಿಡಬೇಕು. ಅವತ್ತಿನ ದಿವಸ ತನ್ನ ಶಕ್ತ್ಯಾನುಸಾರವಾಗಿ ಅನ್ನ ಸಂತ ರ್ಪಣೆಯನ್ನು ಮಾಡಬೇಕು. ಆ ದಿವಸ ರಾತ್ರಿ ಸ್ವಪ್ನದಲ್ಲಿ ದೇವಿಯು ಪ್ರಸನ್ನ ಳಾಗಿ : ತನಗೆ ಬೇಕಾದ್ದನ್ನು ಕೊಟ್ಟು ಸಕಲ ಸಿದ್ಧಿಗಳನ್ನು ಅನುಗ್ರಹಿಸಿ ಕೊಡುವಳು.

## ಪ್ರಮೋದಾಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಜಪಮಾಡುವದರಿಂದ ಮಂತ್ರ ಮೂರ್ತಿಯಾದ ದೇವತೆಯು ಪ್ರಸನ್ನಳಾಗಿ ಸರ್ವಾಭಿಷ್ಟವನ್ನು ಪ್ರದಾನ ಮಾಡುವಳಲ್ಲದೆ ನಿಧಿ ಯನ್ನು ಸಹ ತೋರಿಸಿ ಕಾಪಾಡುವಳು ಸಂದೇಹವಿಲ್ಲವು.

ಮಂತ್ರ— ||ಓಂ ನಮೋ ಹ್ರೀಂ ಪ್ರಮೋದಾಯೈ
ನಮೋ ನಮಃ ಸ್ವಹಾ||

ಈ ಮಂತ್ರವನ್ನು ಸಿದ್ಧಿಮಾಡಿಕೊಂಡು ಜಪಿಸಿದರೆ ಫಲಪ್ರಾಪ್ತಿಯಾಗು ವದು ಆದ್ದರಿಂದ ಶುಭಮುಹೂರ್ತವನ್ನು ನೋಡಿಕೊಂಡು ಜಿತೇಂದ್ರಿ ಯನಾಗಿ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಮತಾನುಸಾರವಾಗಿ ಮಾಡಿ ಕೊಂಡು ನಂತರ ಮಂತ್ರವನ್ನು ಜಪಮಾಡಲಾರಂಭಿಸಬೇಕು ಮೊದಲು ನ್ಯಾಸಾದಿಗಳನ್ನು ಮಾಡಿಕೊಂಡು ಗಣಪತಿ ಮೊದಲಾದ ದೇವತೆಗಳನ್ನು ನೆನೆದು ಮಂತ್ರವು ಇದ್ದಕ್ಕಿದ್ದಂತೆ ಜಪಿಸಬೇಕು. ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಪೂರ್ತಿ ಪೂರಾ ಮುಗಿದ ಮೇಲೆ ಮಂತ್ರಮೂರ್ತಿಗೆ ಅರ್ಪಿಸಿ

ನೀರು ಬಿಡಬೇಕು. ಅಂದರೆ ಮಂತ್ರವು ಸಿದ್ಧಿಯಾಗುತ್ತದೆ. ಈ ಸಿದ್ಧವಾದ ಮಂತ್ರವನ್ನು ದಿನಾಲು ಹತ್ತು ಸಾವಿರದಂತೆ ಜಪಿಸುತ್ತಿದ್ದರೆ ದೇವಿಯು ಪ್ರಸನ್ನಳಾಗಿ ತನಗೆ ನಿಧಿಯನ್ನು ತೋರಿಸುವಳು. ಮತ್ತು ನಿಮ್ಮ ಬೇಡಿಕೆಗಳನ್ನು ಸಹ ಪೂರ್ತಿ ಮಾಡಿಕೊಡುವಳು.

## ಚಂದ್ರಿಕಾ ಯಕ್ಷಿಣಿ ಮಂತ್ರವಿಧಾನ

ಈ ಚಂದ್ರಿಕಾ ಯಕ್ಷಿಣಿ ಮಂತ್ರವನ್ನು ಜಪಮಾಡುವದರಿಂದ ಮಂತ್ರ ದೇವತೆಯು ಪ್ರಸನ್ನಳಾಗಿ ಅಮೃತಾನ್ನವನ್ನು ಮತ್ತು ಬೇಡಿದಿಷ್ಟಾರ್ಥವನ್ನು ದಯಪಾಲಿಸುವಳು.

ಮಂತ್ರ— ॥ಓಂ ನಮೊಹ್ರೀಂ ಚಂದ್ರಿಕೆ ಹಂಸಃ ಕ್ಲೀಂ
ನಮೊ ನಮಃ ಸ್ವಹಾ॥

ಈ ಮಂತ್ರವನ್ನು ಎರಡು ಲಕ್ಷ ಜಪವನ್ನು ಮಾಡಬೇಕು ಅಂದರೆ ಮಂತ್ರವು ಸಿದ್ಧಿಯಾಗುವದು ಸಿದ್ಧಿಯನ್ನು ಮಾಡಿಕೊಳ್ಳದೆ ಹಾಗೆ ಜಪವನ್ನು ಮಾಡಿದರೆ ಫಲವಾಗುವದಿಲ್ಲ ಆದ್ದರಿಂದ ಪುನಶ್ಚರಣೆಯ ಶಿದ್ಧಿಯನ್ನು ಮಾಡಿಕೊಳ್ಳದೆ ಹಾಗೆ ಜಪವನ್ನು ಮಾಡಿದರೆ ಫಲವಾಗುವದಿಲ್ಲ ಆದ್ದರಿಂದ ಪುನಶ್ಚರಣೆಯ ಶಿದ್ಧಿಯನ್ನು ಮಾಡಿಕೊಳ್ಳಬೇಕು. ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ಮಾಡಿಕೊಂಡು ನಂತರ ನ್ಯಾಸಾದಿಗಳನ್ನು ಮಾಡಿಕೊಂಡು ಮಂತ್ರವನ್ನು ಜಪಿಸಬೇಕು. ಎರಡು ಲಕ್ಷ ಜಪವು ಎಂದಿಗೆ ಮುಗಿಯುವದೋ ಆವತ್ತಿನ ದಿವಸ ಒಟ್ಟು ಎರಡು ಲಕ್ಷ ಜಪವನ್ನು ಮಾಡಿದ್ದು ಮಂತ್ರ ಮೂರ್ತಿಗೆ ಸಲ್ಲಲಿ ಎಂದು ನೀರು ಬಿಡಬೇಕು. ಆ ದಿವಸ ರಾತ್ರಿ ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ತನ್ನ ಮನೋಭಿಷ್ಟವನ್ನು ಪೂರ್ಣ ಮಾಡುವಳು. ಮತ್ತು ಅಮೃತಾನ್ನವನ್ನು ದಯಪಾಲಿಸುವಳು.

## ಭಾಮಿನಿ ಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಪಠಣ ಮಾಡುವದರಿಂದ ಮಂತ್ರ ದೇವತೆಯು ಸಂತುಷ್ಟಳಾಗಿ ಭಕ್ತನಿಗೆ ಬೇಡಿದಿಷ್ಟಾರ್ಥವನ್ನು ಕೊಟ್ಟು ದಿವ್ಯಾಂಜನವನ್ನು ದಯಪಾಲಿಸುವಳು.

ಮಂತ್ರ— ||ಓಂ ನಮೋ ಹ್ರೀಂ ಯಕ್ಷಿಣಿ ಭಾಮಿ ರತಿಪ್ರಿಯೇ
ನಮೋ ನಮಃ ಸ್ವಹಾ

ಈ ಮಂತ್ರವನ್ನು ಶಿದ್ಧಿ ಮಾಡಿಕೊಳ್ಳಬೇಕಾದರೆ ಒಂದು ಶುಭ ಮುಹೂರ್ತವನ್ನು ನೋಡಿಕೊಂಡ ಆ ದಿವಸ ಉಪವಾಸದಿಂದಿದ್ದು ಜಿತೇಂದ್ರಿಯನಾಗಿ ಸ್ನಾನ ಮೊದಲಾದ ಸತ್ಕ್ರಿಯಳನ್ನು ತನ್ನ ಮತಾನುಸಾರವಾಗಿ ತೀರಿಸಿಕೊಂಡು ನಂತರ ಮಂತ್ರ ನ್ಯಾಸಾದಿಗಳನ್ನು ಮಾಡಿಕೊಂಡು ವಿಘ್ನೇಶ್ವರನನ್ನು ಪೂಜಿಸಿ ದೇವಿಯವರಿಗೆ ನಮಸ್ಕರಿಸಿ ಭಾಮಿನಿಯ ಕ್ಷಿಣಿ ಮಂತ್ರವನ್ನು ಪಠಿಸುತ್ತಿದ್ದೇನೆಂದು ನೀರು ಬಿಟ್ಟು ಜಪವನ್ನು ಮಾಡಲಾರಂಭಿಸಬೇಕು. ಈ ಜಪವನ್ನು ೧ ಲಕ್ಷ ಮಾಡಬೇಕು. ಒಟ್ಟು ಒಂದು ಲಕ್ಷ ಜಪವು ಮುಗಿದ ಮೇಲೆ ಮಂತ್ರ ದೇವತೆಗೆ ಒಂದು ಲಕ್ಷ ಜಪಮಾಡಿದ್ದು ನಿನಗೆ ಸಲ್ಲಲಿ ಎಂದು ನೀರು ಬಿಟ್ಟು ಪೂಜಾಸಮಾಪ್ತಿಯನ್ನು ಮಾಡಿಕೊಳ್ಳಬೇಕು ಅಂದರೆ ದೇವಿಯು ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ತಾನು ಬೇಡಿದಿಷ್ಟಾರ್ಥವನ್ನು ಕೊಡುವಳು. ಸಂದೇಹವಿಲ್ಲ ನಂಬಿತಗೆದುಕೊಳ್ಳಬೇಕು.

## ಸ್ವರ್ಣ ರೇಖಾ ಯಕ್ಷಿಣಿ ಮಂತ್ರ ವಿಧಾನ

ಈ ಸ್ವರ್ಣ ರೇಖಾಯಕ್ಷಿಣಿಮಂತ್ರವನ್ನು ಜಪಿಸುವದರಿಂದ ದೇವಿಯು ಪ್ರಸನ್ನಳಾಗಿ ಭಕ್ತನ ಭಕ್ತಿಗೆ ಮೆಚ್ಚಿ ರಾತ್ರಿ ಸ್ವಪ್ನದಲ್ಲಿ ಪ್ರತ್ಯಕ್ಷಳಾಗಿ ಇಷ್ಟಾರ್ಥವನ್ನು ದಯಪಾಲಿಸಿಕೊಡುವಳು.

ಮಂತ್ರ— ||ಓಂ ನಮೋ ಚರ್ಕ ಚರ್ಕ ಶಾಲ್ಮಲ ಸ್ವರ್ಣ ರೇಖೆ
ನಮೋನಮಃ ಸ್ವಹಾ||

ಈ ಮಂತ್ರವನ್ನು ಹಾಗೆಯೇ ಜಪಿಸಿದರೆ ಅದು ಫಲವಾಗುವದಿಲ್ಲ ಆದಕಾರಣ ಸಿದ್ಧಿಯನ್ನು ಮಾಡಿಕೊಳ್ಳಬೇಕಾದದ್ದು ಅವಶ್ಯವಿದೆಯಾದ್ದರಿಂದ ಒಂದು ಶುಭದಿನವನ್ನು ನೋಡಿಕೊಂಡು ಆ ದಿವಸ ಉಪವಾಸವಿದ್ದು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯದ ಪ್ರಕಾರ ತೀರಿಸಿ ಕೊಂಡು ನಂತರ ಈ ಮಂತ್ರವನ್ನು ಮಂತ್ರ ನ್ಯಾಸಾದಿಗಳನ್ನು ಮಾಡಿ ಕೊಂಡು ದಿಗ್ಬಂಧನೆಯನ್ನು ಮಾಡಿಕೊಂಡು ಒಂದು ಲಕ್ಷ ಜಪವನ್ನು ಮಾಡ ಬೇಕು. ಈ ಮಂತ್ರವು ಒಂದು ಲಕ್ಷ ಜಪವು ಎಂದಿಗೆ ಮುಗಿಯುವದೋ ಆ ದಿವಸ ಒಟ್ಟು ಲೆಕ್ಕವನ್ನು ಮಾಡಿ ಮಂತ್ರಮೂರ್ತಿಗೆ ಒಂದು ಲಕ್ಷ ಜಪವು ಸಲ್ಲಲಿಯೆಂದು ನೀರನ್ನು ಬಿಡಬೇಕು. ಅಂದರೆ ಮಂತ್ರಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ದಿನಾಲೂ ಜಪಿಸುತ್ತಿದ್ದರೆ ದೇವಿಯು ತನಗೆ ಬೇಕಾದದ್ದನ್ನು ಕೊಟ್ಟು ಕಾಪಾಡುವಳು. ಸಂದೇಹವಿಲ್ಲ ನಂಬುವದು.

## ಕನಕವತಿ ಯಕ್ಷಿಣಿ ಮಂತ್ರ ವಿಧಾನ

ಈ ಕನಕವತಿ ಯಕ್ಷಣಿಯ ಮಂತ್ರವನ್ನು ಜಪಿಸಿದರೆ ಮಂತ್ರ ದೇವತೆಯು ಪ್ರತ್ಯಕ್ಷಳಾಗಿ ಬೇಡಿದ ಇಷ್ಟಾರ್ಥವನ್ನು ದಿವ್ಯಾಂಜನವನ್ನು ಪ್ರಧಾನ ಮಾಡುವಳು.

ಮಂತ್ರ ಓಂ ನಮೋ ಹ್ರೀಂ ಆಗಚ್ಛ ಕನಕವತಿ
ನಮೋ ನಮಃ ಸ್ವಹಾ

ಈ ಮಂತ್ರವನು ಪುನಶ್ಚರಣೆಯನ್ನು ಮಾಡಿಕೊಳ್ಳಬೇಕಾದರೆ ಒಂದು ಸಿದ್ಧಿ ದಿನವನ್ನು ನೋಡಿಕೊಂಡು ಆ ದಿವಶ ತಾನು ಉಪವಾಸವಿದ್ದು ಸ್ನಾನ ಮೊದಲಾದ ಸತ್ಕ್ರಿಯೆಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ಮಾಡಿಕೊಂಡು ನಂತರ ಜಪವನ್ನು ಮಾಡಲಾರಂಭಿಸುವದು ಹ್ಯಾಗಂದರೆ ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ಮಂತ್ರವು ಯಿದ್ದಕ್ಕಿದಂತೆಯೇ ಒಂದು ಲಕ್ಷ ಜಪವನ್ನು ಮಾಡಬೇಕು ಒಂದು ಲಕ್ಷವು ಜಪ ಮುಗಿದ ಮೇಲೆ ಆ ದಿವಸ ಮಂತ್ರ ಮೂರ್ತಿಗೆ ಅರ್ಪಿಸಬೇಕು ಮತ್ತು ಆ ದಿವಸ ತನಗೆ

ಅನುಕೂಲವಾದ ಮಟ್ಟಿಗೆ ಅನ್ನ ಸಂತರ್ಪಣೆಯನ್ನು ಮಾಡಿ ಸಂಪೂರ್ಣಗೈಯಬೇಕು ಆ ಮೇಲೆ ದಿನಾಲು ತನ್ನ ಶಕ್ತ್ಯಾನುಸಾರವಾಗಿ ಒಂದು ಸಾವಿರ ಇಲ್ಲವೆ ಎರಡು ಸಾವಿರ ಹೀಗೆ ದಿನಾಲು ಜಪಿಸುತ್ತಿದ್ದರೆ ದೇವಿಯು ರಾತ್ರಿ ಸ್ವಪ್ನದಲ್ಲಿ ದಿವ್ಯಾಂಜನವನ್ನು ಕೊಡುವಳು

## ಮಹೇಂದ್ರಿ ಯಕ್ಷಿಣಿ ಮಂತ್ರ ವಿಧಾನವು

ಈ ಮಹೇಂದ್ರಿ ಯಕ್ಷಿಣಿ ಮಂತ್ರವನ್ನು ಪಠಣ ಮಾಡುವದರಿಂದ ಮಂತ್ರದೇವತೆಯು ಪ್ರಸನ್ನಳಾಗಿ ಭಕ್ತನು ಬೇಡಿದ್ದನ್ನು ಕೊಟ್ಟು ಮನೋಭಿಷ್ಟವನ್ನು ಪೂರ್ಣ ಮಾಡುವಳು.

ಮಂತ್ರ—॥ಓಂ ನಮೋ ಐಂ ಹ್ರೀಂ ಐಂದ್ರಿ ಮಾಹೇಂದ್ರಿ
ಕುಲು ಕುಲು ಚಲು ಚಲು ಹಂಸಃ ನಮೊ ನಮಃ

ಈ ಮಂತ್ರವನ್ನು ಶಿದ್ಧಿ ಮಾಡಿಕೊಳ್ಳಬೇಕಾದರೆ ಮೊದಲು ಗುರು ಮುಖದಿಂದ ಅರಿತುಕೊಂಡ ನಂತರ ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ತಾನು ಜಿತೇಂದ್ರಿಯನಾಗಿದ್ದು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ಮಾಡಿಕೊಂಡು ನಂತರ ಮಂತ್ರ ಸಿದ್ಧಿ ಕಾರ್ಯವನ್ನು ಆರಂಭಿಸಬೇಕು ಮೊದಲು ಗಣಪತಿ ಮೊದಲಾದ ದೇವತೆಗಳನ್ನು ಪೂಜಿಸಬೇಕು ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ಮಂತ್ರವು ಯಿದ್ದಂತೆಯೇ ಪಠಿಸಬೇಕು ಈ ಮಂತ್ರದಜಪವು ಎರಡು ಲಕ್ಷ ಮಾಡಬೇಕು ಎರಡು ಲಕ್ಷ ಜಪವು ಎಂದಿಗೆ ಮುಗಿಯುವದೋ ಆ ದಿವಸ ಎರಡು ಲಕ್ಷ ಜಪವನ್ನು ಮಾಡಿದ್ದು ಮಂತ್ರ ಮೂರ್ತಿಗೆ ಸಲ್ಲಲಿ ಎಂದು ನೀರು ಬಿಟ್ಟು ನಮಸ್ಕರಿಸಿ ತಾನು ಏಳಬೇಕು ಈ ಸಿದ್ಧವಾದ ಮಂತ್ರವನ್ನು ದಿನಾಲೂ ಹತ್ತು ಸಾವಿರಂದಂತೆ ಜಪಿಸುತ್ತಿದ್ದರೆ ಆತನಿಗೆ ದೇವಿಯು ಪ್ರಸನ್ನಳಾಗಿ ತಾನು ಬೇಡಿದ ಯಿಷ್ಟಾರ್ಥವನ್ನು ದಯಪಾಲಿಸಿ ಕೊಡುವಳು.

## ವಿಶಾಲೆ ಯಕ್ಷಿಣಿ ಮಂತ್ರ ವಿಧಾನ

ಈ ವಿಶಾಲಿ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ

ಯಕ್ಷಿಣಿ ದೇವಿಯು ಸಂತುಷ್ಟಳಾಗಿ ಭಕ್ತನಿಗೆ ಬೇಕಾಗುವ ರಸ ರಸಾಯನವನ್ನೂ ಸಕಲ ಅಭಿಷ್ಟವನ್ನೂ ದಯಪಾಲಿಸುವಳು.

ಮಂತ್ರ –॥ಓಂ ನಮೊ ಹ್ರೀಂ ವಿಶಾಲೆ ದ್ರಾಂ ಧೂಂ ಕ್ಲೀಂ
ಏಹಿ ಏಹಿ ನಮೋ ನಮಃ ಸ್ವಹಾ॥

ಈ ಮಂತ್ರವನ್ನು ಜಪಿಸುವ ವಿಧಾನವು ಹೀಗಿರುವದಲ್ಲಾ ಈ ಮಂತ್ರವನ್ನು ಎರಡು ಲಕ್ಷ ಜಪವನ್ನು ಮಾಡಿದರೆ ಮಂತ್ರ ಸಿದ್ಧಿಯಾಗುವದು ಆದ್ದರಿಂದ ಒಂದು ಶುಭ ಮುಹೂರ್ತವನ್ನು ನೋಡಿಕೊಂಡು ಆ ದಿವಸ ಶುಚಿರ್ಭೂತನಾಗಿ ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ಜಪವನ್ನು ಮಾಡಬೇಕು ಎರಡು ಲಕ್ಷ ಜಪವು ಎಂದಿಗೆ ಮುಗಿಯುವದೋ ಆ ದಿವಸ ಎರಡು ಲಕ್ಷ ಜಪವು ಮಂತ್ರಮೂರ್ತಿಗೆ ಸಲ್ಲಲಿ ಎಂದು ನೀರು ಬಿಡಬೇಕು ಅಂದರೆ ಮಂತ್ರವು ಶಿದ್ಧಿಯಾಗುವದು ಆ ಮೇಲೆ ದಿನಾಲೂ ಹತ್ತು ಸಾವಿರ ದಂತೆ ಜಪಿಸುತ್ತಾ ಹೋಗಬೇಕು ಅಂದರೆ ಯಕ್ಷಿಣಿ ದೇವಿಯು ಪ್ರಸನ್ನಳಾಗಿ ಭಕ್ತನ ಬಯಕೆಯನ್ನೂ ಸಕಲೇಷ್ಟವನ್ನೂ ದಯಪಾಲಿಸುವಳು ನಂಬುವದು.

## ಕರ್ಣಕಾರಿಣಿ ಯಕ್ಷಿಣಿ ಮಂತ್ರ ವಿಧಾನ

ಈ ಕರ್ಣಕಾರಿಣಿ ಯಕ್ಷಿಣಿ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಭಕ್ತನ ಮಂತ್ರದ ಧ್ವಾಳಿಯು ಸೋಂಕಿದೊಡನೆಯೇ ಪ್ರಸನ್ನಳಾಗಿ ಬೇಡಿದಿಷ್ಟಾರ್ಥವನ್ನೂ ಧನಪ್ರಾಪ್ತಿಯನ್ನೂ ಕೊಡುವಳು ಸಂದೇಹವಿಲ್ಲ-

ಮಂತ್ರ—ಓಂ ನಮೋ ಹ್ರೀಂ ನಮಶ್ಚಂದ್ರದ್ರವೇ
ಕರ್ಣಾಕರ್ಣ ಕಾರಿಣಿ ನಮೋನಮಃ ಸ್ವಹಾ

ಈ ಮಂತ್ರವನ್ನು ಹಾಗೆಯೇ ಪಠಿಸಿದರೆ ಫಲವಾಗುವದಿಲ್ಲವಾದ್ದರಿಂದ ಪುನಶ್ಚರಣೆಯನ್ನು ಮಾಡಿಕೊಳ್ಳಲೇ ಬೇಕಾಗುವದು-ಆದ್ದರಿಂದ ಈ ಮಂತ್ರವನ್ನು ವಿಧಿ ವಿಧಾನಗಳನ್ನು ಗುರುಮುಖದಿಂದ ತಿಳಿದುಕೊಂಡು

ವೆಂದು ಶುಭಮುಹೂರ್ತವನ್ನು ನೋಡಿ ಆ ದಿವಸ ಉಪವಾಸವಿದ್ದು ಜಿತೇಂದ್ರಿಯಿಂದ ಭಕ್ತಿಪೂರ್ವಕವಾಗಿ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಧರ್ಮಾಚರಣೆಯ ಪ್ರಕಾರ ಮಾಡಿಕೊಂಡ ನಂತರ ಮಂತ್ರ ಶಿದ್ಧಿಯ ಜಪವನ್ನು ಮಾಡಲಾರಂಭಿಸಬೇಕು ಈ ಮಂತ್ರವನ್ನು ವಂದು ಲಕ್ಷ ಜಪದಿಂದ ಶಿದ್ಧಿಯಾಗುವಡು ವಂದು ಲಕ್ಷ ಜಪ ಮುಗಿದ ಕೂಡಲೇ ಮಂತ್ರ ದೇವತೆಗೆ ಅರ್ಪಿಸಿ ನೀರು ಬಿಡಬೇಕು ಅಂದರೆ ಮಂತ್ರವು ಶಿದ್ಧಿಯಾಗುವದು ಈ ಸಿದ್ಧವಾದ ಮಂತ್ರವನ್ನು ದಿನಾಲೂ ಜಪಿಸುತ್ತಾ ಹೋಗಬೇಕು ಅಂದರೆ ದೇವಿಯು ಪ್ರಸನ್ನಳಾಗಿ ತನಗೆ ಬೇಡಿದಿಷ್ಟಾರ್ಥವನ್ನು ಕೊಡುವಳು.

## ಶಂಖನಿ ಯಕ್ಷಿಣಿ ಮಂತ್ರ ವಿಧಾನ

ಈ ಶಂಖನಿ:ಯಕ್ಷಣಿಯ ಮಂತ್ರವನ್ನು ಜಪಿಸಿದರೆ ಭಕ್ತನ ಭಕ್ತಿಗೆ ಮೆಚ್ಚಿ ಮಂತ್ರದೇವತೆಯು ಪ್ರಸನ್ನಳಾಗಿ ದಿನಾಲೂ ತನಗೆ ಬೇಕಾಗುವಷ್ಟು ಧನವನ್ನು ಕೊಟ್ಟು ಕಾಪಾಡುವಳು ಸಂದೇಹವಿಲ್ಲ.

ಮಂತ್ರ ॥ಓಂ ನಮೋ ಹ್ರೀಂ ಶಂಖಧಾರಣಿ ಶಂಖಾಭರಣೆ
ಹ್ರಾಂ ಹ್ರೀಂ ಕ್ಲಿಂ ಐಂ ಆಂ ನಮೋ ನಮಃ ಸ್ವಹಾ॥

ಈ ಮಂತ್ರವನ್ನು ಪುನಶ್ಚರಣೆಯಿಲ್ಲದೆ ಪಠಿಸಿದರೆ ಫಲವಾಗುವದಿಲ್ಲವಾದ್ದರಿಂದ ಪುನಶ್ಚರಣೆಯನ್ನು ಮಾಡಿಕೊಳ್ಳ ಬೇಕಾಗುವದು ಅವಶ್ಯವಿದ್ದ ಕಾರಣ ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಉಪವಾಸವಿದ್ದು ಗುರುಮುಖದಿಂದ ತಿಳಿದುಕೊಂಡು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ಮಾಡಿಕೊಂಡು ನಂತರ ಮಂತ್ರ ಪುನಶ್ಚರಣೆಯನ್ನು ಮಾಡಿಕೊಳ್ಳಬೇಕು. ಮೊದಲು ಗಣಪತಿದೇವಿಯರ ಪೂಜೆಯನ್ನು ಮಾಡಿ ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ೧ ಲಕ್ಷ ಜಪವನ್ನು ಮಾಡಬೇಕು. ಅಂದರೆ ಮಂತ್ರಸಿದ್ಧಿಯಾಗುವದು. ಆ ಮಂತ್ರವನ್ನು ದಿನಾಲೂ ಜಪಿಸುತ್ತಿದ್ದರೆ ದೇವಿಯು ಪ್ರಸನ್ನಳಾಗಿ ತನಗೆ ಬೇಡಿದಿಷ್ಟಾರ್ಥವನ್ನು ದಯಪಾಲಿಸಿ ಕೊಡುವಳು.

## ಅನುರಾಗಿಣಿ ಯಕ್ಷಿಣಿ ಮಂತ್ರವಿಧಾನ

ಅನುರಾಗಿಣಿ ಯಕ್ಷಿಣಿ ಮಂತ್ರವನ್ನು ಜಪಿಸುವದರಿಂದ ದೇವಿಯು ಪ್ರಸನ್ನಳಾಗಿ ಮನೋಭಿಷ್ಟವನ್ನು ಪೂರ್ಣಮಾಡಿಕೊಡುವಳು. ನಿತ್ಯಧನವನ್ನು ಒದಗಿಸಿ ಕೊಡುವಳು. ಸಂಶಯವಿಲ್ಲ.

ಮಂತ್ರ - || ಓಂ ನಮೋ ಹ್ರೀಂ ಅನುರಾಗಿಣಿ ಮೈಥುನಪ್ರಿಯೆ
ನಮೋನಮಃ ಸ್ವಹಾ ||

ಈ ಮಂತ್ರವನ್ನು ಪುನಶ್ಚರಣೆ ಮಾಡಿಕೊಳ್ಳಬೇಕಾದರೆ ಒಂದು ಸಿದ್ಧಿ ದಿನವನ್ನು ನೋಡಿ ಆ ದಿವಸ ಉಪವಾಸವಾಗಿ ಶುದ್ಧ ಮನಸ್ಸಿನಿಂದ ಸಮಾಧಾನ ಪೂರ್ವಕವಾಗಿ ಶ್ರೀಗುರು ಮೂರ್ತಿಯ ಧ್ಯಾನಯುಕ್ತನಾಗಿ ಶುಚಿರ್ಭೂತನಾಗಿ ಮೊದಲು ತನ್ನ ನಿತ್ಯ ನೇಮಾದಿಗಳನ್ನು ಮಾಡಿಕೊಂಡು ಮಂತ್ರಮೂರ್ತಿಯನ್ನು ಧ್ಯಾನಿಸುತ್ತಾ ಜಪವನ್ನು ಮಾಡಬೇಕು. ಅಂದರೆ ಆ ಮಂತ್ರವು ಸಿದ್ಧಿಯಾಗುವದು. ಆ ಸಿದ್ಧವಾದ ಮಂತ್ರವನ್ನು ದಿನಾಲೂ ಜಪಿಸುತ್ತಿರಬೇಕು. ಅಂದರೆ ದೇವಿಯು ಸಂತುಷ್ಟಳಾಗಿ ಬೇಡಿದ ಇಷ್ಟಾರ್ಥವನ್ನು ಧನ ಧಾನ್ಯಾದಿಗಳನ್ನು ಅನುಗ್ರಹಿಸುವಳು. ಸಂದೇಹವಿಲ್ಲ. ನಂಬಿ ಸಕಲಸಿದ್ಧಿಯನ್ನು ಪಡೆದುಕೊಳ್ಳಬೇಕು.

## ಸುಲೋಚನಾ ಯಕ್ಷಿಣಿ ಮಂತ್ರವಿಧಾನ

ಈ ಸುಲೋಚನಾ ಮಂತ್ರವನ್ನು ಜಪ ಮಾಡುವದರಿಂದ ಮಂದಹಾಸದಿಂದ ದೇವಿಯು ಪ್ರಸನ್ನಳಾಗಿ ಬೇಡಿದ ಇಷ್ಟಾರ್ಥವನ್ನು ಕೊಡುವಳು.

ಮಂತ್ರ— || ಓಂ ನಮೊ ಭೂತೇ ಸುಲೋಚನೆ ಲುವಂ
ನಮೋ ನಮಃ ಸ್ವಹಾ ||

ಈ ಮಂತ್ರವನ್ನು ಶುಭ ದಿನದಲ್ಲಿ ಉಪವಾಸವಿದ್ದು ಶುಚಿರ್ಭೂತನಾಗಿ ತನ್ನ ನಿತ್ಯ ನೇಮಾದಿಗಳನ್ನು ತನ್ನ ಗುರು ಸಾಂಪ್ರದಾಯ ಪ್ರಕಾರ ಮಾಡಿ ಕೊಂಡು ಮುಗಿಸಿಕೊಂಡನಂತರ ಮಂತ್ರ ಪುನರುಚ್ಚರಣೆಯನ್ನು ಆರಂಭಿಸ ಬೇಕು. ಆರಂಭದಲ್ಲಿ ಗಣಪತಿ ಗುರು ದೇವತಾದಿಗಳನ್ನು ನಯವಿನಯ ಭಾವ ದಿಂದ ಪೂಜಿಸಿ ಮಂತ್ರ ಮೂರ್ತಿಯನ್ನು ನೆನೆದು ಕರನ್ಯಾಸಂಗಗಳನ್ನು ಮಾಡಿ ನಂತರ ಜಪವನ್ನು ಮಾಡಲಿಕ್ಕೆ ಆರಂಭಿಸಬೇಕು. ಒಂದು ಲಕ್ಷ ಜಪವು ಮುಗಿದ ಕೂಡಲೆ ಮಂತ್ರ ಮೂರ್ತಿಗೆ ಅರ್ಪಿಸಿ ನೀರು ಬಿಡಬೇಕು. ಅಂದರೆ ಮಂತ್ರಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ದಿನಾಲೂ ಜಪಿಸುತ್ತಿದ್ದರೆ ದೇವಿಯು ಪ್ರಸನ್ನಳಾಗಿ ತನಗೆ ಬೇಕಾಗುವ ಧನಧಾನ್ಯಾದಿ ಸಂಪದವನ್ನು ಅನುಗ್ರಹಿಸುವಳು. ತಾನು ದೇವಿಯನ್ನು ಕುರಿತು ಬೇಕಾದದ್ದನ್ನು ಬೇಡಿ ವಶಮಾಡಿಕೊಳ್ಳತಕ್ಕದ್ದು. ಸಂಶಯವಿಲ್ಲ.

## ಕನಕವತಿ ಯಕ್ಷಿಣಿ ಮಂತ್ರವಿಧಾನ

ಈ ಕನಕವತಿ ಯಕ್ಷಿಣಿ ಮಂತ್ರವನ್ನು ಪಠಣ ಮಾಡುವದರಿಂದ ಮಂತ್ರದೇವತೆಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ನಿಧಿ ದರ್ಶನವನ್ನು ಮಾಡಿಕೊಡುವಳಲ್ಲದೆ ಮನೋಭಿಷ್ಟವನ್ನೂ ಧನಪ್ರಧಾನವನ್ನೂ ಮಾಡುವಳು.

ಮಂತ್ರ – ॥ಓಂ ನಮೋ ಹ್ರೀಂ ಆಗಚ್ಛ ಆಗಚ್ಛ
ಕನವತಿ ನಮೊನಮಃ ಸ್ವಹಾ॥

ಈ ಕನಕವತಿ ಯಕ್ಷಿಣಿ ಮಂತ್ರವನ್ನು ಸಿದ್ಧಿಮಾಡಿಕೊಳ್ಳುವಲ್ಲಿ ಮೊದಲು ಶುಭ ದಿನಗಳನ್ನು ನೋಡಿಕೊಂಡು ಆ ದಿವಸ ತಾನು ಉಪವಾಸ ದಿಂದಿದ್ದು ಮನಶುದ್ಧಿಯನ್ನು ಮಾಡಿಕೊಂಡು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರುಸಾಂಪ್ರದಾಯ ಪ್ರಕಾರ ಮಾಡಿಕೊಂಡು ಆಮೇಲೆ ಮಂತ್ರ ಸಿದ್ಧಿಯ ಕಾರ್ಯವನ್ನು ಆರಂಭಮಾಡಬೇಕು. ಗಣಪತಿಯ ಪೂಜೆಯನ್ನು ದೇವ ದೇವಿಯರ ಪೂಜೆಯನ್ನು ಮಾಡಿದ ನಂತರ ಮಂತ್ರವನ್ನು ಜಪಮಾಡ

ಲಿಕ್ಕೆ ಸುರುವು ಮಾಡಬೇಕು. ಈ ಮಂತ್ರವನ್ನು ಎರಡು ಲಕ್ಷ ಜಪವಾದ ನಂತರ ಮಂತ್ರಮೂರ್ತಿಗೆ ಸಲ್ಲಿಸಿ ಪೂಜೆಯನಿಳುಹಿ ಆಸನದಿಂದ ಏಳಬೇಕು. ಈ ಮಂತ್ರವನ್ನು ದಿನಾಲೂ ಜಪಿಸುತ್ತಿರಬೇಕು. ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ನಿಧಿ ದರ್ಶನವನ್ನು ಮಾಡಿಕೊಡುವಳು.

## ಸುಲಕ್ಷಣಾ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರದ ಜಪವನ್ನು ಮಾಡುವದರಿಂದ ದೇವಿಯು ಪ್ರಸನ್ನಳಾಗಿ ಭಕ್ತನಿಗೆ ಅವನ ಬೇಡಿಕೆಯನ್ನು ಪೂರ್ಣ ಮಾಡಿ ಕೊಟ್ಟು ನಿಧಿಯನ್ನು ತೋರಿಸುವಳು.

ಮಂತ್ರ—॥ಓಂ ಹ್ರೀಂ ಪ್ರಮೋದಾಯೈ
ನಮೋ ನಮಃ ಸ್ವಹಾ॥

ಈ ಮಂತ್ರವನ್ನು ಪುನಶ್ಚರಣೆಯಿಲ್ಲದೆ ಜಪವನ್ನು ಮಾಡಿದರೆ ಫಲವಾಗಲರಿಯದು. ಆದ್ದರಿಂದ ಎಲ್ಲ ಮಂತ್ರಗಳನ್ನು ಶಿದ್ಧಿ ಮಾಡಿಕೊಂಡು ನಂತರ ಜಪವನ್ನು ಮಾಡಿದರೆ ಅದಕ್ಕೆ ತಕ್ಕ ಫಲ ಪ್ರಾಪ್ತವಾಗುವದು. ಅದರಂತೆ ಒಂದು ಶುಭ ದಿನವನ್ನು ನೋಡಿಕೊಂಡು ಆ ದಿನಸ ತಾನು ಉಪವಾಸದಿಂದಿದ್ದು ಸ್ನಾನವನ್ನು ಮಾಡಿ ಶುಚಿರ್ಭೂತನಾಗಿ ತನ್ನ ಗುರು ಸಾಂಪ್ರದಾಯ ಪ್ರಕಾರ ತನ್ನ ನಿತ್ಯ ನೇಮಾದಿಗಳನ್ನು ತೀರಿಸಿಕೊಂಡು ನಂತರ ಈ ಮಂತ್ರವನ್ನು ಜಪ ಮಾಡುವಲ್ಲಿ ಮೊದಲು ನ್ಯಾಸಾದಿಗಳನ್ನು ಮಾಡಿಕೊಂಡು ಮಂತ್ರ ಮೂರ್ತಿಯನ್ನು ಧ್ಯಾನಿಸುತ್ತ ಜಪವನ್ನು ಮಾಡಬೇಕು ೨ ಲಕ್ಷ ಜಪವು ಮುಗಿದ ದಿವಸ ಪಟ್ಟಿ ಲೆಖ್ಖಿಮಾಡಿ ಮಂತ್ರಮೂರ್ತಿಗೆ ಅರ್ಪಿಸಬೇಕು ಅಂದರೆ ಮಂತ್ರಶಿದ್ಧಿಯಾಗುವದು. ಈ ಮಂತ್ರವನ್ನು ದಿನಾಲೂ ಜಪಿಸುತ್ತ ಹೋಗಬೇಕು ಅಂದರೆ ದೇವಿಯು ತಂತುಷ್ಟಳಾಗಿ ಮನೋಭಿಷ್ಟವನ್ನು ಪೂರ್ಣ ಮಾಡುವಳು

## ವಿಲಾಸಿನಿ ಯಕ್ಷಿಣಿ ಮಂತ್ರ ವಿಧಾನವು

ಈ ವಿಲಾಸಿನಿ ಯಕ್ಷಿಣಿಯ ಮಂತ್ರವನ್ನು ಜಪಿಸುವದರಿಂದ ಮಂತ್ರ

ದೇವತೆಯು ಪ್ರಸನ್ನಳಾಗಿ ಸೌಭಾಗ್ಯವನ್ನು ದಯಪಾಲಿಸುವಳು.

ಮಂತ್ರ—॥ ಓಂ ನಮೋ ವರುಜಾಕ್ಷ ವಿಲಾಸಿನಿ ಆಗಚ್ಛ ಆಗಚ್ಛ ಪ್ರಿಯಾಮೇಭವ ಪ್ರಿಯಾಮೇಭವ ಕ್ಲೈಂ ನಮೋನಮಃ ಸ್ವಹಾ ॥

ಈ ಮಂತ್ರವನ್ನು ಪುನಶ್ಚರಣೆಯಿಲ್ಲದೆ ಜಪಿಸಿದರೆ ಫಲವಾಗುವದಿಲ್ಲ. ಆದ್ದರಿಂದ ಒಂದು ಸಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಶುಚಿರ್ಭೂತನಾಗಿ ತನ್ನ ಕುಲಾಚಾರದಂತೆ ತನ್ನ ನಿತ್ಯ ನಿಯಮಾದಿಗಳನ್ನು ತೀರಿಸಿಕೊಂಡು ನಂತರ ಮಂತ್ರಸಿದ್ಧಿಗಾಗಿ ಜಪವನ್ನು ಮಾಡಬೇಕು. ಮೊದಲು ಗಣಪತಿದೇವಿಯರನ್ನು ಪೂಜಿಸಿ ನ್ಯಾಸಾದಿಗಳನ್ನು ಮಾಡಿಕೊಂಡು ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಬೇಕು. ಜಪವು ಸಂಪೂರ್ಣವಾಗಿ ಮುಗಿದ ದಿವಸ ಮಂತ್ರಮೂರ್ತಿಗೆ ಅರ್ಪಿಸಬೇಕು. ಮಂತ್ರಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ದಿನಾಲೂ ಜಪಿಸಬೇಕು. ರಾತ್ರಿ ಕಾಲದಲ್ಲಿ ದೇವಿಯು ಪ್ರಸನ್ನಳಾಗಿ ತನಗೆ ಬೇಡಿದಿಷ್ಟಾರ್ಥವನ್ನು ಕೊಡುವಳು. ಧೈರ್ಯದಿಂದ ಪಡೆದುಕೊಳ್ಳಬೇಕು.

## ಸರ್ವ ವಶೀಕರಣ ಯಕ್ಷಿಣಿ ಮಂತ್ರವಿಧಾನ

ಈ ಸರ್ವ ವಶೀಕರಣ ಯಕ್ಷಿಣಿಯ ಮಂತ್ರವನ್ನು ಪಠಣ ಮಾಡುವದರಿಂದ ದೇವಿಯು ಪ್ರಸನ್ನಳಾಗಿ ಸಕಲವಿದ್ಯಗಳನ್ನು ಪ್ರಾಪ್ತ ಮಾಡಿಕೊಡುವಳು.

ಮಂತ್ರ-॥ಓಂ ನಮೋ ಶ್ರೀಂ ಹ್ರೀಂ ನಮೋಭಗವತೆ ಸರ್ವ ವಶ್ಯಮಾನ ಯಃ ನಮೋನಮಃ ಸ್ವಹಾ ॥

ಈ ವಶೀಕರಣ ಮಂತ್ರವನ್ನು ಮೊದಲು ಸಿದ್ಧಿದಿನಗಳಲ್ಲಿ ಶುಚಿರ್ಭೂತನಾಗಿ ಏಕಾಂತ ಸ್ಥಳದಲ್ಲಿ ಮೌನದಿಂದ ಕುಳಿತುಕೊಂಡು ತನ್ನ ನಿತ್ಯಾಚರಣೆಗಳನ್ನು ತೀರಿಸಿಕೊಂಡು ನಂತರ ಮೇಲೆ ಹೇಳಿದ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಬೇಕು. ಅಂದರೆ ಈ ಮಂತ್ರ ಸಿದ್ಧಿಯಾಗುವದು. ಈ ಸಿದ್ಧ

ವಾದ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ .ಜಪವನ್ನು ಮಾಡುತ್ತಾ ಹೋದರೆ ಯಕ್ಷಿಣಿ ದೇವಿಯು ಸಂತುಷ್ಟಳಾಗಿ ತನಗೆ ಸಕಲ ವಿದ್ಯೆಗಳನ್ನು ಸಂಪಾದಿಸಿ ಕೊಡುವಳು. ತನಗೆ ಬೇಕಾದ ವಿದ್ಯೆಗಳನ್ನು ಸಾಧ್ಯಮಾಡಿಕೊಳ್ಳ ಬೇಕು. ಅವನಿಗೆ ಸಕಲ ವಿದ್ಯೆಗಳು ಸಾಧ್ಯವಾಗುವವು. ಸಂದೇಹವಿಲ್ಲವೆಂದರಿವುದು.

## ಪ್ರಾಣದಾಯಿನಿ ಯಕ್ಷಿಣಿ ಮಂತ್ರವಿಧಾನವು

ಈ ಮಂತ್ರವನ್ನು ಪಠಣ ಮಾಡಿದರೆ ದೇವಿಯು ಪ್ರಸನ್ನಳಾಗಿ ಸರ್ವ ಔಷಧಿಯ ಮೂಲಿಕೆಗಳನ್ನು ಸಿದ್ಧಿ ಮಾಡಿಕೊಡುವಳು. ಬೇಕಾದ ಮೂಲಿಕೆ ಗಳನ್ನು ಸಾಧ್ಯಮಾಡಿಕೊಳ್ಳಬೇಕು.

ಮಂತ್ರ— ||. ಓಂ ನಮೋ ಹ್ರೀಂ ಸರ್ವತೆ ಶ್ರೀಂ ಕ್ಲೀಂ ಸರ್ವ ಔಷಧಿ ಪ್ರಾಣದಾಯನಿ ನಮೋನಮಃ ಸ್ವಹಾ ||

ಈ ಮಂತ್ರವನ್ನು ಶುಭಮುಹೂರ್ತಗಳಲ್ಲಿ ಶಾಂತ ಮನಸ್ಸಿನಿಂದ ತನ್ನ ನಿತ್ಯ ಸ್ನಾನ ಸಂಧ್ಯಾವಂದನೆಗಳನ್ನು ತೀರಿಸಿಕೊಂಡು ನಂತರ ಮಂತ್ರವನ್ನು ಎರಡುಲಕ್ಷ ಜಪವನ್ನು ಮಾಡಿದರೆ ಮಂತ್ರ ಪುನಶ್ಚರಣೆಯಾಗುವದು ಈ ಪುನಶ್ಚರಣೆಯಿಂದ ಸಿದ್ಧವಾದ ಮಂತ್ರವನ್ನು ದಿನಾಲೂ ಒಂದುಸಾವಿರ ಇಲ್ಲವೆ ಎರಡುಸಾವಿರ ಹೀಗೆ ತನ್ನ ಶಕ್ತ್ಯಾನುಸಾರವಾಗಿ ಜಪಿಸುತ್ತಾ ಹೋದರೆ ದೇವಿಯು ಪ್ರಸನ್ನಳಾಗಿ ತನಗೆ ಬೇಕಾದ ಸರ್ವ ಔಷದಿಯ ಎಲ್ಲ ಮೂಲಿಕೆ ಗಳನ್ನು ತನಗೆ ಸಾಧ್ಯ ಮಾಡಿಕೊಡುತ್ತಾಳೆ ಇದನ್ನು ವೈದ್ಯಗಾರರು ಸಂಗ್ರಹಿಸಿಕೊಂಡು ಇದರ ಉಪಯೋಗವನ್ನು ಮಾಡಿಕೊಳ್ಳಬೇಕು.

## ಮಾಹೇಂದ್ರಿ ಯಕ್ಷಿಣಿ ಮಂತ್ರ ವಿಧಾನವು

ಈ ಮಾಹೇಂದ್ರಿ ಯಕ್ಷಿಣಿಯ ಮಂತ್ರವನ್ನು ಜಪಿಸುವದರಿಂದ ದೇವತೆಯು ಪ್ರಸನ್ನಳಾಗಿ ತನಗೆ ಬೇಕಾದಾಗ ತನ್ನ ಇಷ್ಟದಂತೆ ಧನವನ್ನು ಅನುಗ್ರಹಿಸುವಳು. ಸಂದೇಹವಿಲ್ಲವು.

ಮಂತ್ರ— ॥ಓಂ ನಮೊ ಮಾಹೇಂದ್ರಿ ದುಲುಕುಲುಹಂ ಸಃ ಸ್ವಹಾ ॥

ಈ ಮಂತ್ರವನ್ನು ಸಿದ್ಧಿ ದಿನಗಳಲ್ಲಿ ಶುಚಿರ್ಭೂತನಾಗಿ ಮೌನದಿಂದ ಏಕಾಂತ ಸ್ಥಳದಲ್ಲಿ ಕುಳಿತುಕೊಂಡು ಏಕಚಿತ್ತದಿಂದ ಎರಡು ಲಕ್ಷ ಜಪವನ್ನು ಮಾಡಿದರೆ ಈ ಮಂತ್ರಸಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ತನಗೆ ಬೇಕಾದಾಗ ಹತ್ತುಸಾವಿರ ಜಪವನ್ನು ಮಾಡಿದರೆ ಅನ್ನ ದೇವಿಯು ಸಂತುಷ್ಟಳಾಗಿ ತನಗೆ ಬೇಕಾದಾಗ ದ್ರವ್ಯವನ್ನು ಅನುಕೂಲ ಮಾಡಿಕೊಡುವಳು. ಇದನ್ನು ನೆರೆ ನಂಬಿ ಸಿದ್ಧಿಮಾಡಿಕೊಂಡು ಸಾಧ್ಯಮಾಡಿಕೊಳ್ಳಬೇಕು. ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ತನಗೆ ಏನು ಬೇಕೆಂಬುದನ್ನು ಕೇಳಿಕೊಂಡು ತನ್ನ ಬೇಡಿಕೆಯನ್ನು ತ್ವರಿತದಲ್ಲಿಯೇ ಪೂರೈಸಿಕೊಡುವಳು. ಒಟ್ಟನಮೇಲೆ ನಂಬಿಗೆಯಿಂದಲೂ ಭಕ್ತಿಯಿಂದಲೂ ಅರ್ಚಿಸಿ ಪೂಜಿಸತಕ್ಕದ್ದು. ನಂಬಿಗಿಲ್ಲದೆ ಫಲವಿಲ್ಲ.

## ವಿದ್ಯಾ ಪ್ರೀತಿ ಯಕ್ಷಿಣಿ ಮಂತ್ರ ವಿಧಾನ

ಈ ವಿಧ್ಯಾ ಪ್ರೀತಿ ಯಕ್ಷಿಣಿಯ ಮಂತ್ರವನ್ನು ಜಪಿಸುವದರಿಂದ ವಿಧ್ಯಾ ಪ್ರಾಪ್ತಿಯ ದೇವತೆಯು ಪ್ರಸನ್ನಳಾಗಿ ರಾತ್ರಿ ಸಮಯದಲ್ಲಿ ಸ್ವಪ್ನದೊಳಗೆ ಬಂದು ವಿದ್ಯಾದಾನವನ್ನು ಮಾಡುವಳು.

ಮಂತ್ರ— ॥ಓಂ ನಮೋ ಐಂ ಹ್ರೀಂ ಕ್ಲೀಂ ವಿದ್ಯಾಧಾ ಯಿನಿ
ನಮೋ ನಮಃ ಸ್ವಹಾ॥

ಈ ಮಂತ್ರವನ್ನು ಶಿದ್ಧಿ ಮಾಡಿಕೊಂಡು ನಂತರ ದಿನವಂದಕ್ಕೆ ಹತು ಸಾವಿರದಂತೆ ಜಪ ಮಾಡಬೇಕು. ಹೀಗೆ ಮಂದುತಿಂಗಳ ವರೆಗೂ ಪಠಣ ಮಾಡಿದರೆ ಯಕ್ಷಿಣಿದೇವಿಯು ಅರ್ಧ ರಾತ್ರಿಯಲ್ಲಿಪ್ರಸನ್ನಳಾಗಿಬೇಡಿದಿಪ್ದಾರ್ಥ ವನ್ನು ವಿದ್ಯಾದಾನವನ್ನು ಮಾಡಿಕೊಡುವಳು

## ಮನೋನ್ಮನಿ ಯಕ್ಷಿಣಿ ಮಂತ್ರವಿಧಾನ

ಈ ಮನೋನ್ಮನಿ ಯಕ್ಷಿಣಿ ಮಂತ್ರವನ್ನು ಪಠಣ ಮಾಡುವದರಿಂದ ಯಕ್ಷಿಣಿದೇವಿಯು ಸಂತುಷ್ಟಳಾಗಿ ಧನವನ್ನು ದಯಪಾಲಿಸುವಳು.

ಮಂತ್ರ—॥ಓಂ ನಮೋ ಹ್ರೀಂ ಹ್ರೂಂ ಹ್ರಾಂ ಧನಂ
ಕುರು ಕುರು ಸ್ವಹಾ॥

ಈ ಮಂತ್ರವನ್ನು ಜಪಮಾಡುವದರಿಂದ ಯಕ್ಷಿಣಿದೇವಿಯು ಭಕ್ತನ ಭಕ್ತಿಗೆ ಮೆಚ್ಚಿ ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ಧನವನ್ನು ನಿತ್ಯಾನಿತ್ಯಕ್ಕು ಬೇಕಾದಷ್ಟು ಕೊಡುವಳು. ಈ ಮಂತ್ರವನ್ನು ದಿನಾಲೂ ಒಂದು ಸಾವಿರದಂತೆ ಹದಿನೈದು ದಿವಸ ದಿನಾಲೂ ಬಿಡದೇ ಜಪವನ್ನು ಮಾಡಿಮೂರ್ತಿಗೆ ಅರ್ಪಿಸ ಬೇಕು.

## ಪಿಂಗಳ ಯಕ್ಷಿಣಿ ಮಂತ್ರವಿಧಾನವು

ಈ ಮಂತ್ರವನ್ನು ಜಪ ಮಾಡುವದರಿಂದ ಪಿಂಗಳ ಯಕ್ಷಿಣಿಯು ಪ್ರಸನ್ನ ಳಾಗಿ ಭಕ್ತನಿಗೆ ಬೇಕಾದಷ್ಟು ಧಾನ್ಯವನ್ನು ಕೊಟ್ಟು ಕಾಪಾಡುವಳು. ಸಂದೇಹವಿಲ್ಲ.

ಮಂತ್ರ—॥ಓಂ ಹ್ರಾಂ ಹ್ರೀಂ ಹ್ರೂಂ ಐಂ ಸ್ವಹಾ॥

ಈ ಮಂತ್ರವನ್ನು ಪುನಶ್ಚರಣೆಯಿಲ್ಲದೆ ಜಪ ಮಾಡಿದರೆ ಫಲವಾಗುವದಿಲ್ಲ ಆದ ಕಾರಣ ಶುಭದಿನವನ್ನು ನೋಡಿಕೊಂಡು ಹತ್ತು ಸಾವಿರ ಜಪವನ್ನು ಮಾಡಿದರೆ ಮಂತ್ರವು ಶಿದ್ಧಿಯಾಗುವದು. ಆಮೇಲೆ ದಿನವೊಂದಕ್ಕೆ ಐದು ನೂರರಂತೆ ನಾಲ್ವತ್ತೆಂಟು ದಿವಸ ಪಠಿಸಿದರೆ ಯಕ್ಷಿಣಿದೇವಿಯು ಪ್ರಸನ್ನ ಳಾಗಿ ತನಗೆ ನಿತ್ಯಾ ಗೃಹಕ್ಕೆ ಬೇಕಾಗುವ ಧಾನ್ಯಾದಿಗಳನ್ನು ಕೊಟ್ಟು ದಯ ಪಾಲಿಸುವಳು. ನೆರೆನಂಬಿಕೊಂಡು ಜಪಿಸಿ ಈ ಫಲವನ್ನು ಪಡೆದುಕೊಳ್ಳಬೇಕು

## ಕಲಾವತಿ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ಯಕ್ಷಿಣಿ ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ಬಂದು ಅನ್ನವನ್ನು ಬೇಡಿದಿಷ್ಟಾರ್ಥವನ್ನೂ ದಯಪಾಲಿಸುವಳು.

ಮಂತ್ರ—॥ಓಂ ಐಂ ಕ್ಲೀಂ ಸೌಂ ಹ್ರೀಂ ಸ್ವಹಾ॥

ಈ ಮಂತ್ರವನ್ನು ಶಿದ್ಧಿ ಮಾಡಿಕೊಂಡು ನಂತರ ದಿನಾಲೂ ಹತ್ತು ಸಾವಿರದಂತೆ ಹತ್ತು ದಿವಸ ಜಪಿಸಬೇಕು ವಟ್ಟು ವಂದ ಲಕ್ಷ ಜಪವನ್ನು ಮಾಡಿ ಮಂತ್ರಮೂರ್ತಿಗೆ ಅರ್ಪಿಸಬೇಕು. ಮತ್ತು ಆ ದಿವಸ ತನ್ನ ಶಕ್ತ್ಯಾನುಸಾರವಾಗಿ ಅನ್ನ ಸಂತರ್ಪಣೆಯನ್ನು ಮಾಡಬೇಕು. ಅಂದರೆ ದೇವಿಯು ಸಂತುಷ್ಟಳಾಗಿ ಬೇಡಿದಿಷ್ಟಾರ್ಥವನ್ನು ಕೊಟ್ಟು ಕಾಪಾಡುವಳೆಂದು ತಿಳಿಯಬೇಕು. ಸಂದೇಹವಿಲ್ಲವು ಸತ್ಯವಾದದ್ದು.

## ಶಾರದ ಯಕ್ಷಿಣಿ ಮಂತ್ರವಿಧಾನವು

ಈ ಮಂತ್ರವನ್ನು ಜಪ ಮಾಡುವದರಿಂದ ದೇವಿಯು ಸಂತುಷ್ಟಳಾಗಿ ತನಗೆ ಬೇಕಾದ ವಸ್ತ್ರಾದಿಗಳನ್ನು ದಯಪಾಲಿಸುವಳು.

ಮಂತ್ರ—॥ಹ್ರೀಂ ಹ್ರಾಂ ಸೌಂ ಕ್ಲೀಂ ಓಂ ಸ್ವಹಾ॥

ಈ ಮಂತ್ರವನ್ನು ಪುನಶ್ಚರಣೆಯನ್ನು ಮಾಡಿಕೊಂಡು ದಿನಾಲೂ ತನ್ನ ನಿತ್ಯ ಕ್ರಿಯಾಚಾರಗಳನ್ನು ಮುಗಿಸಿಕೊಂಡ ನಂತರ ಈ ಜಪವನ್ನು ದಿನಾಲೂ ವಂದು ಸಾವಿರದಂತೆ ಯಿಪ್ಪತ್ತೊಂದು ದಿವಸ ಬಿಟ್ಟು ಬಿಡದೇ ಮಾಡಬೇಕು. ಮುಗಿದ ದಿವಸ ವಬ್ಬ ಜಂಗಮನನ್ನು ಕರೆದು ಉಣಿಸಬೇಕು. ಹೀಗೆ ಭಕ್ತಿಪೂರ್ವಕವಾಗಿ ಮಾಡಿದಲ್ಲಿ ಅವನಿಗೆ ಅರಿವೆಯು ತಾಪತ್ರಯುವೇ ಯಿಲ್ಲವೆಂದು ಹೇಳುತ್ತೇವೆ ನಿಶ್ಚಯುವಾದದ್ದು.

## ಕಾರಿಣಿ ಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ಕಾರಿಣಿ ಯಕ್ಷಿಣಿದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ಬಂದು ಧನ ಧಾನ್ಯಾದಿಗಳನ್ನು ಕೊಟ್ಟು ದಯ ಪಾಲಿಸುವಳು.

ಮಂತ್ರ—॥ಓಂ ಹ್ರಾಂ ಹ್ರೆಂ ಹ್ರೂಂ ಕ್ಲಿಂ ಸ್ವಹಾ॥

ಈ ಮಂತ್ರವನ್ನು ದಿನಾಲೂ ಎರಡು ಸಾವಿರದಂತೆ ಯಿಪ್ಪತ್ತೊಂದು ದಿವಸ ಪಠಿಸಲು ದೇವಿಯು ಸಂತುಷ್ಟಳಾಗಿ ತನ್ನ ಬೇಡಿಕೆಗಳನ್ನು ಪೂರೈಸಿ ಕೊಟ್ಟು ತನ್ನ ಗೃಹಕೃತ್ಯಕ್ಕೆ ಬೇಕಾಗುವ ಧನ ಧಾನ್ಯಾದಿಗಳನ್ನು ಸಕಾಲಕ್ಕೆ ಕೊಡುತ್ತಾ ಯಿರುವಳು ಯಿದನ್ನು ಅಂದರೆ ಈಮಂತ್ರವನ್ನು ಹಾಗೇಪಠಿಸಿದರೆ ಫಲವಾಗುವದಿಲ್ಲ ಶ್ರೀ ಗುರು ಮುಖದಿಂದ ತಿಳಿದುಕೊಂಡು ಪುನಶ್ಚರಣೆಯನ್ನು ಮಾಡಿಕೊಂಡು ಜಪವನ್ನು ಮಾಡತೊಡಗಲು ಶೀಘ್ರವಾಗಿ ಫಲ ಪ್ರಾಪ್ತಿ ಯಾಗುವದು ಯಿದನ್ನರಿತು ಮಾಡುವದು ಯೋಗ್ಯವು.

## ಸೌಂದರಿ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರವನ್ನು ಪಠಣ ಮಾಡುವದರಿಂದ ಸೌಂದರಿ ಯಕ್ಷಿಣಿ ದೇವಿಯು ಪ್ರಸನ್ನಳಾಗಿ ತನಗೆ ಬೇಡಿದ್ದನ್ನು ಕೊಟ್ಟು ನಿಧಿಯನ್ನು ತೋರಿಸು ವಳು ಸಂಶಯವಿಲ್ಲ

ಮಂತ್ರ—॥ಓಂ ಐಂ ಹ್ರಿಂ ಹ್ರೈಂ ಆಗಚ್ಛ ಸ್ವಹಾ॥

ಈ ಮಂತ್ರವನ್ನು ಶಿದ್ಧಿ ದಿನಗಳನ್ನು ನೋಡಿಕೊಂಡು ಆ ದಿವಸ ಶುಚಿರ್ಭೂತನಾಗಿ ಶ್ರೀಗುರು ಮೂರ್ತಿಯಿಂದ ತಿಳಿದುಕೊಂಡು ಈ ಮಂತ್ರ ವನ್ನು ಶಿದ್ಧ ಮಾಡಿಕೊಂಡ ನಂತರ ದಿನಾಲೂ ಹದಿನೈದುನೂರು ಜಪದಂತೆ ವಂದು ತಿಂಗಳ ವರೆಗೂ ಮಾಡಬೇಕು ಅಂದರೆ ದೇವಿಯು ಸಂತುಷ್ಟಳಾಗಿ ತನಗೆ ನಿಧಿಯನ್ನುತೋರಿಸಿ ಕೊಡುವಳು.

## ಶುಭಾಂಗಿ ಯಕ್ಷಿಣಿಮಂತ್ರ ವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ಯಕ್ಷಿಣಿದೇವಿಯು ಸಂತುಷ್ಟಳಾಗಿ ತನಗೆ ರಾತ್ರಿ ಸ್ವಪ್ನದಲ್ಲಿ ಬಂದು ನಾಣ್ಯಗಳನ್ನು ಅನುಗ್ರಹಿಸುವಳು.

ಮಂತ್ರ—॥ಓಂ ಕ್ಲೀಂ ಸೌಂ ಹ್ರೀಂ ಸ್ವಹಾ॥

ಈ ಮಂತ್ರವನ್ನು ಹಿಂದೆ ಹೇಳಿದ ಪ್ರಕಾರದಂತೆ ಶಿದ್ಧಿಯನ್ನು ಮಾಡಿಕೊಂಡು ದಿನಾಲೂ ವಂದು ಸಾವಿರದಂತೆ ಹದಿನೈದು ದಿವಸಗಳ ವರಿಗೂ ಜಪವನ್ನು ಮಾಡಬೇಕು ವಟ್ಟು ಜಪವು ಪೂರ್ಣ ಮುಗಿದ ಮೇಲೆ ದೇವಿಗೆ ಅರ್ಪಿಸಿ ನೀರು ಬಿಡಬೇಕು ಅಂದರೆ ದೇವಿಯು ಸಂತುಷ್ಟಳಾಗಿ ತನಗೆ ನಿತ್ಯಕ್ಕೂ ನಾಣ್ಯಗಳನ್ನು ದಯಪಾಲಿಸುವಳು.

## ನೇತ್ರವತಿ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರವನ್ನು ಪಠಣ ಮಾಡವದರಿಂದ ದೇವಿಯು ಪ್ರಸನ್ನಳಾಗಿ ತನಗೆ ಬೇಕಾದದ್ದನ್ನು ವದಗಿಸಿಕೊಟ್ಟು ಸರ್ವ ಕಾರ್ಯಗಳನ್ನು ಸಾಧ್ಯಮಾಡಿ ಕೊಡುವಳು.

ಮಂತ್ರ—ಓಂ ಶ್ರೀಂ ಕ್ರಾಂ ಕ್ರಿಂ ಹ್ರಿಂ ಐಂ ಸ್ವಹಾ

ಈ ಮಂತ್ರವನ್ನು ಹಿಂದೆ ಹೇಳಿದ ಪ್ರಕಾರ ಶ್ರೀಗುರು ಮುಖದಿಂದ-ತಿಳಿದುಕೊಂಡು ಶಿದ್ಧಿಯನ್ನು ಮಾಡಿಕೊಂಡು ನಂತರ ದಿನಾಲೂ ಹತ್ತು ಸಾವಿರದಂತೆ ಹತ್ತು ದಿವಸ ಮಾಡಬೇಕು ಅಂದರೆ ವಂದು ಲಕ್ಷ ಜಪವಾಗುವದು ಅದನ್ನು ಮಂತ್ರ ಮೂರ್ತಿಗೆ ಅರ್ಪಿಸಬೇಕು ಅಂಪರೆ ದೇವಿಯು ಪ್ರಸನ್ನಳಾಗಿ ತನ್ನ ಸರ್ವ ಕಾರ್ಯಗಳನ್ನು ಸರಿಯಾಗಿ ಸಾಗಿಸಿ ಕೊಡುವಳು ಸಂದೇಹವಿಲ್ಲವು.

## ಪುರವಾಶಿ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ಯಕ್ಷಿಣಿ ದೇವತೆಯು ಭಕ್ತನ ತಪೋಬಲಕ್ಕೆ ಮೆಚ್ಚಿ ಸಂತುಷ್ಟಳಾಗಿ ಸಕಾಲಕ್ಕೆ ಸರಿಯಾಗಿ ಧನವನ್ನು ದಯಪಾಲಿಸುವಳೆಂದು ತಿಳಿಯಬೇಕು

ಮಂತ್ರ—ಓಂ ಐಂ ಕ್ಲೀಂ ಹ್ರೀಂ ಕುರು ಕುರು ಸ್ವಹಾ।

ಈ ಮಂತ್ರವನ್ನು ಮೇಲೆ ಹೇಳಿದ ಪ್ರಕಾರ ಶಿದ್ಧಿ ಮಾಡಿಕೊಂಡು ದಿನಾಲೂ ಹತ್ತು ಸಾವಿರದಂತೆ ಮೂರು ತಿಂಗಳ ವರೆಗೂ ಪಠಣ ಮಾಡಬೇಕು ಅಂದರೆ ದೇವಿಯು ಸಂತುಷ್ಟಳಾಗಿ ತನ್ನ ಗೃಹಕೃತ್ಯಕ್ಕೆ ಬೇಕಾಗುವದಕ್ಕೆ ಧನವನ್ನು ಕೊಡುವಳು ಮತ್ತು ತನ್ನ ಯಾವತ್ತೂ ಆಪತ್ತನ್ನು ದೂರಮಾಡಿ ಸುಖಿಯಾಗಿ ಕಾಲ ಕಳೆಯುವಂತೆ ಮಾಡುವಳು ಯಿದೆಲ್ಲವೂ ದೇವಿಯ ಕೃಪಾದೃಷ್ಟಿಯಿಂದಿರುವದು.

## —ಸ್ವಗಣಿ ಯಕ್ಷಿಣಿ ಮಂತ್ರ ವಿಧಾನ—

ಈ ಮಂತ್ರವನ್ನು ಪಠಣ ಮಾಡುವದರಿಂದ ಶ್ರೀದೇವಿಯು ಪ್ರಸನ್ನಳಾಗಿ ತನ್ನ ಮನೋಭಿಷ್ಟವನ್ನು ಪೂರೈಸಿ ಕೊಡುವಳು ಬೇಕಾದದ್ದು ಬೇಡಿಕೊಳ್ಳಿರಿ.

ಮಂತ್ರ—ಓಂ ಐಂ ಸೌಂ ಹ್ರಿಂ ಕ್ರೌಂ ಸ್ವಹಾ

ಈ ಮಂತ್ರವನ್ನು ಶಿದ್ಧಿ ಮಾಡಿಕೊಂಡು ನಂತರ ದಿನಾಲೂ ಹತ್ತು ಸಾವಿರದಂತೆ ಯಿಪ್ಪತ್ತು ದಿವಸ ಪಠಿಸಲು ಎರಡು ಲಕ್ಷ ಜಪವಾಗುವವು ಅವುಗಳನ್ನು ಮಂತ್ರದೇವಿಗೆ ಅರ್ಪಿಸಬೇಕು ಆ ದಿವಸ ವಬ್ಬ ಅತಿಥಿಗೆ ಅನ್ನವನ್ನು ಕೊಡಬೇಕು ಆ ದಿವಸ ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ತಾನು ಬೇಡಿದ್ದನ್ನು ಅನುಕೂಲಿಸಿ ಕೊಡುವಳು.

## ಶುಭಾಮೃತಿ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಸಂತುಷ್ಟಳಾಗಿ ತನಗೆ ಸಕಲ ಸಿದ್ಧಿಗಳನ್ನು ದಯಪಾಲಿಸಿ ಕೊಡುವಳು.

ಮಂತ್ರ—ಓಂ ಕ್ಲಿಂ ಹ್ರೀಂ ಕ್ರಾಂ ಸೌಂ ಐಂ ಸ್ವಹಾ॥

ಈ ಮಂತ್ರವನ್ನು ಮೇಲೆ ಹೇಳಿದಂತೆ ಶಿದ್ಧಿಯನ್ನು ಮಾಡಿಕೊಂಡು ಆ ಮೇಲೆ ದಿನಾಲೂ ವಂದು ಸಾವಿರದಂತೆ ಇಪ್ಪತ್ತೇಳು ದಿನಸ ಜಪಿಸಬೇಕು ಹೀಗೆ ಜಪಿಸಿ ಜಪವನ್ನು ಸಂಪೂರ್ಣಮಂಗಲದ ಬಳಿಕ ರಾತ್ರಿಯಲ್ಲಿ ದೇವಿಯು ಪ್ರಸನ್ನಳಾಗಿ ತನ್ನ ಸರ್ವ ಶಿದ್ಧಿಗಳನ್ನು ದಯಪಾಲಿಸಿ ಕೊಡುವಳು ನಂಬಿ ಪಡೆದುಕೊಳ್ಳಬೇಕು.

## ನಿವಾಶಿನಿ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರವನ್ನು ಮೇಲೆ ಹೇಳಿದ ಪ್ರಕಾರ ಶಿದ್ಧಿ ಮಾಡಿಕೊಂಡು ಸ್ನಾನ ಸಂಧ್ಯಾವಂದನೆಗಳನ್ನು ಮಾಡಿಕೊಂಡು ಜಪವನ್ನು ಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನ್ನ ಸಕಲ ಬೇಡಿಕೆಗಳನ್ನು ಪೂರೈಸಿ ಕೊಡುವಳು

ಮಂತ್ರ—ಓಂ ನಮೋ ಹ್ರೀ ಐಂ ಕ್ಲಿಂ ಕ್ರೌಂಸ್ವಹಾ

ಈ ಮಂತ್ರವನ್ನು ದಿನಾಲೂ ಎರಡು ನೂರರಂತೆ ವಂದು ತಿಂಗಳ ವರೆಗೂ ಜಪವನ್ನು ಮಾಡಬೇಕು ಹೀಗೆ ಮಾಡುವದರಿಂದ ಮಂತ್ರ ದೇವತೆಯು ಸಂತುಷ್ಟಳಾಗಿ ತನಗೆ ತನ್ನ ಬೇಡಿಕೆಗಳನ್ನು ಪೂರ್ಣಮಾಡಿ ಕೊಡುವಳು ಮತ್ತು ಧನಧಾನ್ಯಾದಿಗಳನ್ನೂ ಸಹ ಕೊಡುವಳು.

## ಜ್ವಾಲಿನಿ ಯಕ್ಷಿಣಿ ಮಂತ್ರ ವಿಧಾನ

ಈ ಮಂತ್ರವನ್ನು ಮೇಲೆ ಹೇಳಿದ ಪ್ರಕಾರಶಿದ್ಧಿಯನ್ನು ಮಾಡಕೊಂಡು ನಂತರ ದಿನದಿನಕ್ಕೆ ವಂದು ಸಾವಿರದಂತೆ ಜಪವನ್ನು ಮಾಡುತ್ತ ಹೋದರೆ

ದೇವಿಯು ಪ್ರಸನ್ನಳಾಗಿ ತನಗೆ ಧನವನ್ನು ಕೊಡುವಳು.

ಮಂತ್ರ—ಓಂ ನಮೋ ಕ್ಲಿಂ ಹ್ರೀಂ ಐಂ ಸ್ರೌಂ ಸ್ವಹಾ

ಈ ಮಂತ್ರವನ್ನು ಪ್ರತಿ ದಿವಸ ಒಂದು ಸಾವಿರದಂತೆ ಪಠಿಸುತ್ತಾ ಹೋಗಬೇಕು ಒಂದು ತಿಂಗಳ ವರೆಗೂ ಜಪವನ್ನು ಮಾಡಬೇಕು ಹೀಗೆ ಮಾಡುವದರಿಂದ ಶ್ರೀದೇವಿಯು ಪ್ರಸನ್ನಳಾಗಿ ಧನವನ್ನು ದಯಪಾಲಿಸಿ ಕೊಡುತ್ತಾಳೆ ಬೇಡಿಕೊಳ್ಳಿರಿ.

## ಶುಕ್ರಾಂಬರಿ ಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ಯಕ್ಷಿಣಿ ದೇವಿಯು ಪ್ರಸನ್ನಳಾಗಿ ತನಗೆ ನಿಧಿಯನ್ನು ಕೊಟ್ಟು ಕಾಪಾಡುವಳೆಂದು ತಿಳಿಯಬೇಕು.

ಮಂತ್ರ ॥ಓಂ ಐಂ ಹ್ರೀಂ ಹ್ರಾಂ ಹ್ರೂಂ ಶ್ರೀಂ ಸ್ವಹಾ॥

ಈ ಮಂತ್ರವನ್ನು ಮೇಲೆ ಹೇಳಿದ ಪ್ರಕಾರ ಸಿದ್ಧಿ ಮಾಡಿಕೊಂಡು ನಂತರ ದಿನವೊಂದಕ್ಕೆ ಹತ್ತು ಸಾವಿರದಂತೆ ಹತ್ತು ದಿವಸ ಪಠಣ ಮಾಡಿದರೆ ಜಪಸಂಖ್ಯಾಸಮಾಪ್ತಿಯಾಗುವದು. ಆ ದಿವಸ ಒಂದು ಲಕ್ಷ ಜಪವು ಮಂತ್ರ ಮೂರ್ತಿಗೆ ಸಲ್ಲಿಸಿ ಪೂಜಾ ಸಮಾಪ್ತಿಯನ್ನು ಮಾಡಬೇಕು. ಆ ದಿವಸ ರಾತ್ರಿ ದೇವಿಯು ಪ್ರಸನ್ನಳಾಗಿ ತನಗೆ ನಿಧಿಯನ್ನು ತೋರಿಸಿಕೊಡುವಳು.

## ದೇವಶಕ್ತಿ ಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಜಪಮಾಡುವದರಿಂದ ಯಕ್ಷಿಣಿದೇವಿಯು ಸಂತುಷ್ಟಳಾಗಿ ತನ್ನ ಸಕಲಭಿಷ್ಟವನ್ನು ಕೊಡುವಳು.

ಮಂತ್ರ—॥ಓಂನಮೋ ಕ್ಲಿಂ ಸೌಂ ಹ್ರೀಂ ಕ್ರಿಂ ಸ್ವಹಾ ॥

ಈ ಮಂತ್ರವನ್ನು ಹಿಂದೆ ಹೇಳಿದ ಪ್ರಕಾರ ಸಿದ್ಧಿ ಮಾಡಿಕೊಂಡು ನಂತರ ದಿನಾಲೂ ಒಂದು ಸಾವಿರದಂತೆ ಇಪ್ಪತ್ತು ದಿವಸ ಜಪವನ್ನು ಮಾಡಬೇಕು. ಈ ಜಪ ಸಂಖ್ಯಾ ದಿನಗಳು ಮುಗಿದಮೇಲೆ ಇಪ್ಪತ್ತು ಸಾವಿರ ಮಂತ್ರವನ್ನು ಪಠಣ ಮಾಡಿದ್ದು ಮಂತ್ರಮೂರ್ತಿಗೆ ಅರ್ಪಿತವೆಂದು ನೀರು ಬಿಡಬೇಕು. ಆ ದಿವಸ ರಾತ್ರಿ ಸ್ವಪ್ನದಲ್ಲಿ ತನ್ನ ಮನೋಭೀಷ್ಟ ಕಾರ್ಯವನ್ನು ಮಾಡಿ ಕೊಡುವಳು. ಸಂದೇಹವಿಲ್ಲ

## ಪ್ರೇತಾ ಶನಿ ಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಪಠಣಮಾಡುವದರಿಂದ ಶ್ರೀದೇವಿಯು ಪ್ರಸನ್ನಳಾಗಿ ಭೂತ ಪ್ರೇತಗಳ ಬಾಧೆಯನ್ನು ಪರಿಹರಿಸಿ ತನಗೆ ಬೇಕಾದ ಇಷ್ಟವನ್ನು ದೊರಕಿಸಿ ಕೊಡುವಳು.

ಮಂತ್ರ— ||ಓಂ ಐಂ ಹ್ರೀಂ ಕ್ಲೀಂ ಸೌಂ ಕ್ರಾಂ ನಮಃ ||

ಈ ಮಂತ್ರವನ್ನು ಮೇಲೆ ಬರೆದಂತೆ ಪುನಶ್ಚರಣೆಯನ್ನು ಮಾಡಿಕೊಂಡು ದಿನಾಲೂ ಒಂದು ಸಾವಿರದಂತೆ ಇಪ್ಪತ್ತೈದು ದಿವಸ ಜಪವನ್ನು ಮಾಡಲು ದೇವಿಯು ಪ್ರಸನ್ನಳಾಗಿ ಭೂತ ಪ್ರೇತಗಳ ಬಾಧೆಯನ್ನು ಪರಿಹಾರಮಾಡಿ ತನಗೆ ಬೇಕಾಗುವ ಇಷ್ಟಾರ್ಥಗಳನ್ನು ಪೂರೈಸಿಕೊಡುವಳು. ಇದನ್ನು ನೆರೆ ನಂಬಿ ಭೂತ ಬಾಧೆಯಿದ್ದವರು ಪರಿಹಾರಮಾಡಿಕೊಂಡು ಸುಖಿಯಾಗಿರಬೇಕೆಂದು ಸೂಚಿಸಲು ಸಂದೇಹವಿಲ್ಲ.

## ಮಾಲಿನಿ ಯಕ್ಷಿಣಿ ಮಂತ್ರವಿಧಾನ

ಈ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಸಂತುಷ್ಟಳಾಗಿ ತನಗೆ ಧಾನ್ಯಾದಿಗಳನ್ನು ಕೊಡುವಳು.

ಮಂತ್ರ – ||ಓಂ ನಮೋ ಸೌಂ ಕ್ರಾಂ ಕ್ರೀಂ ಹ್ರೀಂ ಸ್ವಹಾ||

ಈ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಒಂದು ತಿಂಗಳ ವರೆಗೂ ಜಪವನ್ನು ಮಾಡಬೇಕು. ಸಂಪೂರ್ಣವಾಗಿ ಮುಗಿದಮೇಲೆ ಅನ್ನ ಸಂತರ್ಪಣೆಯನ್ನು ಮಾಡಿ ತನ್ನ ಜಪವನ್ನು ಮುಗಿಸಿಕೊಳ್ಳತಕ್ಕದ್ದು. ಆ ದಿವಸ ರಾತ್ರಿ ಸ್ವಪ್ನದಲ್ಲಿ ಮಂತ್ರದೇವತೆಯು ಪ್ರಸನ್ನಳಾಗಿ ತನ್ನ ಮನೋಭಿಷ್ಟವನ್ನು ಪೂರ್ಣಮಾಡಿ ಧಾನ್ಯಾದಿಗಳ ಕೊರತೆಗಳನ್ನು ದೂರಮಾಡಿ ಸಲಹುವಳು.

## ವಾಹಿನಿ ಯಕ್ಷಿಣಿ ಮಂತ್ರವಿಧಾನ

ಈ ಯಕ್ಷಿಣಿ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಪ್ರಸನ್ನಳಾಗಿ ತನಗೆ ದಿವ್ಯಾಂಜನವನ್ನು ಕೊಡುವಳು.

ಮಂತ್ರ— || ಓಂ ಕ್ರಾಂ ಕ್ರೀಂ ಕ್ರೇಂ ಹ್ರೀಂ ಐಂ ಸ್ವಹಾ ||

ಈ ಮಂತ್ರವನ್ನು ಸಿದ್ಧಿ ಮಾಡಿಕೊಂಡು ಆಮೇಲೆ ದಿನಾಲೂ ಒಂದು

ಸಾವಿರದಂತೆ ಒಂದು ತಿಂಗಳವರೆಗೂ ಜಪವನ್ನು ತಪ್ಪದೆ ಮಾಡಬೇಕು. ಈ ಕಾರ್ಯವು ಸಂಪೂರ್ಣವಾಗಿ ಮುಗಿದ ಮೇಲೆ ಮಂತ್ರಮೂರ್ತಿಗೆ ನೀರು ಬಿಟ್ಟು ಅನ್ನಸಂತರ್ಪಣೆಯನ್ನು ಮಾಡಬೇಕು. ಹೀಗೆ ಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನಗೆ ದಿವ್ಯಾಂಜನವನ್ನು ಕೊಡುವಳು.

## ವಿಲೋಕಿನಿ ಯಕ್ಷಿಣಿ ಮಂತ್ರವಿಧಾನ

ಈ ಯಕ್ಷಿಣಿಯ ಮಂತ್ರವನ್ನು ಪಠಣ ಮಾಡುವದರಿಂದ ಮಂತ್ರದೇವತೆಯು ಸಂತುಷ್ಟಳಾಗಿ ಧನಧಾನ್ಯಾದಿಗಳನ್ನು ಒದಗಿಸಿ ಕೊಡುವಳು.

ಮಂತ್ರ — ॥ ಓಂ ನಮೋ ಐಂ ಹ್ರೀಂ ಕ್ಲೀಂ ಐಂ ಶ್ರೀಂ ಸ್ವಹಾ॥

ದಿನಾಲೂ ಈ ಮಂತ್ರವನ್ನು ಎರಡು ನೂರರಂತೆ ಹದಿನೈದು ದಿವಸ ತಪ್ಪದೇ ಜಪವನ್ನು ಮಾಡಬೇಕು ಈ ಜಪವನ್ನುಮಾಡುವಾಗ ಜಿತೇಂದ್ರಿಯನಾಗಿರತಕ್ಕದ್ದು. ಮತ್ತು ಮಿತಿ ಹಾರದಿಂದಲೂ ಮನಸ್ಸು ಶಾಂತತೆಯಿಂದಲೂ ತಾನು ಹಿಡಿದ ಜಪವನ್ನು ಪೂರೈಸತಕ್ಕದ್ದು. ಹೀಗೆ ಮಾಡಿದ್ದಾದರೆ ದೇವಿಯು ಪ್ರಸನ್ನಳಾಗಿ ಧನಧಾನ್ಯಾದಿಗಳನ್ನು ಕೊಡುವಳು. ಇದನ್ನು ಚನ್ನಾಗಿ ನಂಬಿ ಸುಖ ಶಾಂತಿಗಳನ್ನು ಹೊಂದತಕ್ಕದ್ದು.

## ಲೋಕಿನಿ ಯಕ್ಷಿಣಿ ಮಂತ್ರವಿಧಾನ

ಈ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ ದೇವತೆಯು ಪ್ರಸನ್ನಳಾಗಿ ತಾನು ಬೇಡಿದ ಇಷ್ಟಾರ್ಥಗಳನ್ನು ಒದಗಿಸಿ ಕೊಡುವಳು.

ಮಂತ್ರ—॥ ಓಂ ಹ್ರೀಂ ಸೌಂ ಕ್ರೌಂ ಶ್ರೀಂ ಸ್ವಹಾ॥

ಈ ದೇವತೆಯ ಮಂತ್ರವನ್ನು ನಿತ್ಯದಂತೆ ತನ್ನ ಕರ್ಮಾಚರಣೆಗಳನ್ನು ತೀರಿಸಿಕೊಂಡು ನಂತರ ಈ ಮಂತ್ರದ ಜಪವನ್ನು ಮಾಡಬೇಕು. ದಿನಾಲೂ ಹತ್ತು ಸಾವಿರದಂತೆ ಹತ್ತು ದಿವಸ ಜಪವನ್ನು ಆಚರಿಸಬೇಕು. ಈ ಜಪವು ಸಂಪೂರ್ಣ ಮುಗಿದಮೇಲೆ ಜಪಸಂಖೆಯಷ್ಟು ದೇವತೆಗೆ ನೀರು ಬಿಟ್ಟು ಅರ್ಪಿಸಬೇಕು. ತನ್ನ ಮನೋಭಿಷ್ಟವನ್ನು ಪೂರ್ಣಮಾಡುವಳು.

## ಶುಭಪ್ರಿಯೆ ಯಕ್ಷಿಣಿ ಮಂತ್ರವಿಧಾನ

ಈ ದೇವತೆಯ ಮಂತ್ರವನ್ನು ಜಪಮಾಡುವದರಿಂದ ದೇವಿಯು ಪ್ರಸನ್ನಳಾಗಿ ಬೇಡಿದಿಷ್ಟಾರ್ಥವನ್ನು ಪೂರೈಸುವಳು

ಮಂತ್ರ—॥ಓಂ ಐಂ ಹ್ರೀಂ ಹ್ರಾಂ ಹ್ರೂಂ ಶ್ರೀಂ ಸ್ವಹಾ॥

ಈ ಮಂತ್ರವನ್ನು ದಿನಾಲೂ ಒಂದು ಸಾವಿರದಂತೆ ನಿತ್ಯಾನುಕಾಲದಲ್ಲಿ ಮಾಡಿಕೊಳ್ಳುತ್ತಿರಲು ಅವನಿಗೆ ಬಡತನ ಭಯವೇ ಇಲ್ಲದಂತಾಗುವದು. ಸಕಲರಲ್ಲಿ ತಾನು ಪ್ರೀತಿಯುಳ್ಳವನಾಗಿರುವನಲ್ಲದೆ ಇವನಿಗೆ ಯಾವ ತರದ ಕೊರತೆಗಳಿಲ್ಲವೆಂದರಿವುದು. ದೇವತೆಯು ಪ್ರಸನ್ನಳಾಗಿ ಸದಾ ಇವನನ್ನು ಕಾಪಾಡುತ್ತಿರುವಳು ಸಂದೇಹವಿಲ್ಲ

## ವೈಜಂತಿಯ ಯಕ್ಷಿಣಿ ಮಂತ್ರವಿಧಾನ

ಈ ದೇವಿಯ ಮಂತ್ರವನ್ನು ಪಠಣಮಾಡುವದರಿಂದ ಯಕ್ಷಿಣಿ ದೇವತೆಯು ಪ್ರಸನ್ನಳಾಗಿ ತನಗೆ ವಸ್ತ್ರಾಭರಣಗಳನ್ನು ಕೊಡುವಳು.

ಮಂತ್ರ—॥ ಓಂ ನಮೋ ಭಗವತಿ ವಿಶ್ವರೂಪಿ ಐಂ ಹ್ರೀಂ ಸ್ವಹಾ॥

ಈ ಮಂತ್ರವನ್ನು ದಿನಾಲೂ ಹದಿನೈದುನೂರು ಜಪದಂತೆ ಇಪ್ಪತ್ತೇಳು ದಿವಸದ ವರೆಗೂ ಮಾಡಬೇಕು. ಈ ದಿವಸಗಳು ಮುಗಿದಮೇಲೆ ಜಪವನ್ನು ಸಮಾಪ್ತಿಯನ್ನು ಮಾಡಿಕೊಳ್ಳಬೇಕು. ದೇವಿಯು ಸಂತುಷ್ಟಳಾಗಿ ತನಗೆ ಬೇಕಾಗುವ ವಸ್ತ್ರಾಭರಣಗಳನ್ನು ಕೊಟ್ಟು ಕಾಪಾಡುವಳೆಂದು ತಿಳಿಯಬೇಕು.

## ಸಮಾಕ್ಷಿಯಕ್ಷಿಣಿ ಮಂತ್ರವಿಧಾನ

ಈ ಯಕ್ಷಿಣಿಯ ಮಂತ್ರವನ್ನು ಜಪಿಸುವದರಿಂದ ಯಕ್ಷಿಣಿ ದೇವತೆಯು ಸಂತುಷ್ಟಳಾಗಿ ತನಗೆ ಧನವನ್ನು ದಯಪಾಲಿಸುವಳು ಸಂದೇಹವಿಲ್ಲ.

ಮಂತ್ರ—॥ ಓಂ ಐಂ ಹ್ರೀಂ ಶ್ರೀಂ ಕ್ರೌಂ ಹ್ರಃ ಸ್ವಹಾ ॥

ಈ ಮಂತ್ರವನ್ನು ಜಪ ಮಾಡಬೇಕಾದರೆ ದಿನವೊಂದಕ್ಕೆ ೧೦೮ ಜಪವನ್ನು ಮಾಡಬೇಕು. ಹೀಗೆ ಒಂದುವರೆ ತಿಂಗಳ ವರೆಗೂ ಮಾಡಬೇಕು. ಅಂದರೆ ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ಧನವನ್ನು ಕೊಡುವಳು. ಅಲ್ಲದೆ ತನ್ನ ಸಕಲ ಕಾರ್ಯಗಳನ್ನು ಸಹ ಮಾಡಿಕೊಡುವಳು. ನೆರೆನಂಬಿ ಸಾಧಿಸಿಕೊಳ್ಳಬೇಕು. ಸಂಶಯವಿಲ್ಲ.

## ಚಕ್ಷೂ ಯಕ್ಷಿಣಿ ಮಂತ್ರವಿಧಾನ

ಈ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಸಂತುಷ್ಟಳಾಗಿ ತನ್ನಮನೋಭಿಷ್ಟವನ್ನು ಪೂರ್ಣಮಾಡಿ ಧನಧಾನ್ಯಾದಿಗಳನ್ನು ಕೊಡುವಳು.

ಮಂತ್ರ— ॥ಓಂ ಹ್ರೀಂ ಸೌಂ ಐಂ ಹ್ರಾಂ ಕ್ರೌಂ ಸ್ವಹಾ ॥

ಈ ಮಂತ್ರವನ್ನು ಜಪ ಮಾಡುವದರಿಂದ ಯಕ್ಷಿಣಿ ದೇವತೆಯು ಸಂತುಷ್ಟಳಾಗಿ ತನಗೆ ಬೇಕಾದ ಫಲಗಳನ್ನು ಕೊಟ್ಟು ಕಾಪಾಡುವಳೆಂದು ತಿಳಿಯತಕ್ಕದ್ದು. ಇದನ್ನು ದಿನಾಲೂ ಒಂದು ಸಾವಿರದಂತೆ ಹತ್ತು ದಿವಸ ಮಾಡಿ ಮುಗಿಸಿಕೊಳ್ಳಬೇಕು. ಆ ದಿನ ರಾತ್ರಿ ಸ್ವಪ್ನದಲ್ಲಿ ತನ್ನ ಇಷ್ಟವನ್ನು ದಯಪಾಲಿಸುವಳು.

## ಮಾಯಕಾ ಯಕ್ಷಿಣಿ ಮಂತ್ರವಿಧಾನ

ಈ ದೇವಿಯ ಮಂತ್ರವನ್ನು ಜಪ ಮಾಡುವದರಿಂದ ಮಂತ್ರ ದೇವತೆಯು ಸಂತುಷ್ಟಳಾಗಿ ತನಗೆ ಧನಧಾನ್ಯಾದಿಗಳನ್ನು ದಯಪಾಲಿಸುವಳು.

ಮಂತ್ರ— ॥ಓಂ ನಮೋ ಐಂ ಸೌಂ ಕ್ರೌಂ ಶ್ರೀಂ ಹ್ರೀಂ ಸ್ವಹಾ ॥

ಈ ಯಕ್ಷಿಣಿಯು ಮಂತ್ರವನ್ನು ದಿನಾಲೂ ಎರಡು ನೂರರಂತೆ ಒಂದು ತಿಂಗಳ ವರೆಗೂ ಪಠಿಸುತ್ತಾ ಇದ್ದರೆ ಮಾಯಕಾ ಯಕ್ಷಿಣಿದೇವಿಯು ಸಂತುಷ್ಟಳಾಗಿ ತನಗೆ ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ಧನಧಾನ್ಯಾದಿಗಳನ್ನು ಕೊಡುವಳಲ್ಲದೆ ತನ್ನ ಸಕಲ ಕಾರ್ಯಗಳನ್ನು ಸಹ ಕ್ರಮವಾಗಿ ಸಾಗಿಸಿಕೊಡುವಳು. ನಂಬಿ ಭಜಿಸಿ ಪಡೆದುಕೊಳ್ಳಬೇಕು. ಸಂದೇಹವಿಲ್ಲ.

## ವಾಣಿ ಯಕ್ಷಿಣಿ ಮಂತ್ರವಿಧಾನವು

ಈ ಯಕ್ಷಿಣಿಯು ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಪ್ರಸನ್ನಳಾಗಿ ತನಗೆ ಬೇಡಿದಿಷ್ಟಾರ್ಥವನ್ನು ಕೊಡುವಳು. ಬೇಕಾದದ್ದನ್ನು ಕೇಳಿಕೊಳ್ಳಬೇಕು.

ಮಂತ್ರ—॥ಓಂ ಹ್ರೀಂ ಐಂ ಸೌಂ ಶ್ರೀಂ ಕ್ಲೀಂ ಸ್ವಹಾ॥

ಈ ಮಂತ್ರವನ್ನು ಸಿದ್ಧಿ ಮಾಡಿಕೊಂಡು ದಿನಾಲೂ ಎರಡು ಸಾವಿರದಂತೆ ಇಪ್ಪತ್ತು ದಿವಸ ಜಪಿಸಬೇಕು. ಈ ಮಂತ್ರವು ಮುಗಿದಮೇಲೆ ಮಂತ್ರಮೂರ್ತಿಗೆ ಅರ್ಪಿಸಬೇಕು. ರಾತ್ರಿ ಸ್ವಪ್ನದಲ್ಲಿ ದೇವತೆಯು ಪ್ರಸನ್ನಳಾಗಿ ತನ್ನ ಬೇಡಿಕೆಗಳನ್ನು ಸಕಾಲಕ್ಕೆ ಸರಿಯಾಗಿ ಒದಗಿಸಿಕೊಡುವಳು. ನಂಬಿ ಪ್ರಾರ್ಥಿಸಿ ಬೇಡಿಕೊಳ್ಳಬೇಕು.

## ಕಲ್ಯಾಣಿ ಯಕ್ಷಿಣಿ ಮಂತ್ರವಿಧಾನ

ಈ ದೇವತೆಯ ಮಂತ್ರವನ್ನು ಪಠಣಮಾಡುವದರಿಂದ ಮಂತ್ರದೇವತೆಯು ಪ್ರಸನ್ನಳಾಗಿ ತನಗೆ ಸಾಣ್ಯಗಳನ್ನು ದಯಪಾಲಿಸುವಳು.

ಮಂತ್ರ—॥ ಓಂ ಐಂ ಹ್ರೀಂ ಕಲ್ಯಾಣ್ಯೈ ನಮಃ ಸ್ವಹಾ॥

ಈ ಮಂತ್ರವನ್ನು ದಿನಾಲೂ ಹತ್ತುಸಾವಿರದಂತೆ ಮೂವತ್ತು ದಿವಸ ಜಪಿಸಬೇಕು. ಅಂದರೆ ಮಂತ್ರ ಜಪವು ಸಂಪೂರ್ಣ ಮುಗಿಯುವದು. ಆ ದಿವಸ ದೇವಿಗೆ ಅರ್ಪಿಸಿ ನೀರು ಬಿಡಬೇಕು. ಆ ದಿವಸ ದೇವಿಯು ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ತನ್ನ ಬಯಕೆಗಳನ್ನು ಪೂರೈಸಿಕೊಡುತ್ತಾಳೆ. ಬೇಡಿಕೊಳ್ಳಿರಿ.

## ರೂಪಿಣಿ ಯಕ್ಷಿಣಿ ಮಂತ್ರವಿಧಾನ

ಈ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ ತನ್ನ ಇಷ್ಟದಂತೆ ಮಂತ್ರ ದೇವತೆಯು ಪ್ರಸನ್ನಳಾಗಿ ಧನವನ್ನು ಪ್ರಾಪ್ತಮಾಡಿಕೊಡುವಳು ಸಂದೇಹವಿಲ್ಲ.

ಮಂತ್ರ — ॥ಓಂ ಸೌಂ ಕ್ರೌಂ ಹ್ರೀ ಶ್ರೀ ಸ್ವಹಾ॥

ಈ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಸಂತುಷ್ಟಳಾಗುವಳು. ಆದ ಕಾರಣ ದಿನಾಲೂ ಒಂದು ಸಾವಿರದಂತೆ ಹದಿನೈದು ದಿವಸ ಜಪವನ್ನು ಮಾಡಬೇಕು. ಜಪವು ಸಂಪೂರ್ಣ ಮುಗಿದದಿವಸ ಇಂತಿಷ್ಟು ಮಂತ್ರ ಜಪವು ಮಂತ್ರಮೂರ್ತಿಗೆ ಸಲ್ಲಲೆಂದು ನೀರು ಬಿಡಬೇಕು. ಅಂದರೆ ತನ್ನ ಕಾರ್ಯ ಸಾಧಿಸುವದೆಂದು ತಿಳಿಯಬೇಕು.

## ಪ್ರೇತಾಸಿನಿ ಯಕ್ಷಿಣಿ ಮಂತ್ರವಿಧಾನ

ಈ ಪ್ರೇತಾಸಿನಿ ಮಂತ್ರವನ್ನು ಜಪ ಮಾಡುವದರಿಂದ ದೇವತೆಯು ಪ್ರಸನ್ನಳಾಗಿ ತನಗೆ ಬೇಡಿದಿಷ್ಟಾರ್ಥವನ್ನು ಕೊಡುವಳು. ಸಕಾಲಕ್ಕೆ ಒದಗಿಸಿಕೊಡುವಳು. ಸಂದೇಹವಿಲ್ಲ.

ಮಂತ್ರ — ॥ಓಂ ನಮೋ ಪ್ರೇತಾಸಿನಿ ಹ್ರೀಂ ಐಂ ಸ್ವಹಾ॥

ಈ ಮಂತ್ರವನ್ನು ಸಿದ್ಧಿ ಮಾಡಿಕೊಂಡು ದಿನಾಲೂ ಒಂದು ನೂರಾ ಎಂಟರಂತೆ ಒಂದು ವಾರದ ವರೆಗೂ ಭಯಭಕ್ತಿಯಿಂದ ನಂಬಿಗೆಯನ್ನಿಟ್ಟು

ಪಠಣ ಮಾಡಬೇಕು. ಮಂತ್ರದೇವತೆಯು ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ತನಗೆ ಬೇಡಿದಿಷ್ಟಾರ್ಥವನ್ನು ಕೊಡುವಳು. ಮತ್ತು ಭೂತ ಪ್ರೇತಾದಿಗಳ ಭಯವನ್ನು ಸಹ ಪರಿಹರಿಸುವಳು.

### ಭದ್ರಿನಿ ಯಕ್ಷಿಣಿ ಮಂತ್ರ ವಿಧಾನ

ಈ ಭದ್ರಿನಿ ಮಂತ್ರವನ್ನು ಪಠಣ ಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನ್ನ ವಾದ ವಿವಾದದಲ್ಲಿ ವಿಜಯವನ್ನು ಕೊಟ್ಟು ಕಾಪಾಡುವಳು.

ಮಂತ್ರ—ಓಂ ಐಂ ಹ್ರೀಂ ಹ್ರೂಂ ಸೌಂ ಹ್ರೇಂ ಸ್ವಹಾ॥

ಈ ಮಂತ್ರವನ್ನು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಮತಾನುಸಾರವಾಗಿ ತೀರಿಸಿಕೊಂಡ ನಂತರ ಸದರಿ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಹತ್ತು ದಿವಸ ಜಪವನ್ನು ಮಾಡಬೇಕು ಹೀಗೆ ಮಾಡುವದರಿಂದ ರಾತ್ರಿ ಸ್ವಪ್ನದಲ್ಲಿ ದೇವಿಯು ಪ್ರಸನ್ನಳಾಗಿ ವಾದ ವಿವಾದದಲ್ಲಿ ಜಯವನ್ನು ವುಂಟು ಮಾಡಿಕೊಡುವಳು ಪ್ರಸಂಗಾನುಸಾರವಾಗಿ ಉಪಯೋಗಿಸಿಕೊಳ್ಳಬೇಕು.

### —ನಿಶಾದೇವಿ ಯಕ್ಷಿಣಿ ಮಂತ್ರ ವಿಧಾನ—

ಈ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಸಂತುಷ್ಟಳಾಗಿ ತನಗೆ ನಿತ್ಯ ಧನವನ್ನು ಕೊಟ್ಟು ಗೃಹಕಾರ್ಯವನ್ನು ಸಾಗಿಸುವಳು ಸಂದೇಹವಿಲ್ಲ ನಂಬಿದಷ್ಟು ಫಲ.

ಮಂತ್ರ॥—ಓಂ ನಮೊ ಭಗವತೆ ನಿಶಾದೇವಿ ಹ್ರೀಂ ಸ್ವಹಾ॥

ಈ ಮಂತ್ರವನ್ನು ಶಿದ್ಧಿ ಮಾಡಿಕೊಂಡು ದಿನಾಲೂ ವಂದು ಸಾವಿರದಂತೆ ವಂದು ತಿಂಗಳ ವರೆಗೆ ಜಪವನ್ನು ಮಾಡಿದರೆ ಮಂತ್ರದೇವತೆಯು ಸಂತುಷ್ಟಳಾಗಿ ರಾತ್ರಿ ಸ್ವಪ್ನದಲ್ಲಿ ಬಂದು ತನಗೆ ಗೃಹಕೃತ್ಯಕ್ಕೆಬೇಕಾಗುವಷ್ಟು ಧನವನ್ನು ಕೊಡುವಳು. ನಂಬಿಗೆಯಿಂದ ಈ ಕಾರ್ಯವನ್ನು ಪೂರೈಸಿಕೊಳ್ಳಬೇಕು ನಿಮ್ಮ ನಂಬಿಗೆಯು ಯಿದ್ದಷ್ಟು ಶೀಘ್ರ ಫಲವು.

### —ಲೋಕಿನಿ ಯಕ್ಷಿಣಿ ಮಂತ್ರ ವಿಧಾನ—

ಈ ದೇವಿಯ ಮಂತ್ರವನ್ನು ಜಪ ಮಾಡುವದರಿಂದಮಂತ್ರದೇವತೆಯು ಪ್ರಸನ್ನಳಾಗಿ ತನಗೆ ಅನ್ನ ವಸ್ತ್ರಾದಿಗಳನ್ನು ಕೊಡುವಳು

ಮಂತ್ರ—॥ಓಂ ಐಂ ಹ್ರೀಂ ಕ್ಲೀಂ ಸೌಂ ಕ್ರೌಂ ಸ್ವಹಾ॥

ಈ ಲೋಕಿನಿ ಯಕ್ಷಿಣಿಯ ಮಂತ್ರವನ್ನು ನಿನಾಲೂ ಮಂದನೂರಾ ಎಂಟರಂತೆ ಪಠಣ ಮಾಡಿದರೆ ಸರ್ವಾರಿಷ್ಟವೆಲ್ಲವೂ ಪರಿಹಾರವಾಗುವವು ಮತ್ತು ತನಗೆ ಬೇಡಿದ ವಡವೆಗಳನ್ನು ಸರಿಯಾಗಿ ಕೊರತೆ ಬೀಳದಂತೆ ಸದಾ ನಡಿಸಿಕೊಡುವವಳು ನಂಬಿಗೆಯಿಂದ ಭಜಿಸಿ ಸುಖವನ್ನು ಹೊಂದಬೇಕು.

—ರಕ್ತಾಂಗಿ ಯಕ್ಷಿಣಿ ಮಂತ್ರ ವಿಧಾನ—

ಈ ರಕ್ತಾಂಗಿ ಯಕ್ಷಿಣಿಯ ದೇವತೆಯನ್ನು ಪೂಜಿಸುವದರಿಂದ ಧನ ಧಾನ್ಯಾದಿಗಳು ಸಮೃದ್ಧಿಯಾಗಿ ದೊರೆತು ಸುಖಿಯಾಗಿಯಿರಿಸುವಳು ನಂಬಿ ಪಡೆದುಕೊಳ್ಳಬಹುದು.

ಮಂತ್ರ — ಓಂ ಹ್ರೀಂ ಐಂ ರಕ್ತಾಂಗಿನಿದೇವಿ ಕುರು ಕುರು ಸ್ವಹಾ||

ಈ ಮಂತ್ರವನ್ನು ಶುಚಿರ್ಭೂತನಾಗಿ ದಿನಾಲೂ ಹತ್ತುಸಾವಿರದಂತೆ ಹತ್ತುದಿವಸ ಬಿಡದೆ ಜಪವನ್ನು ಮಾಡಿ ಮಂತ್ರದೇವತೆಗೆ ಅರ್ಪಿಸಬೇಕು ಆ ದಿವಸ ರಾತ್ರಿ ಸ್ವಪ್ನದಲ್ಲಿ ಮಂತ್ರದೇವತೆಯು ಪ್ರಸನ್ನಳಾಗಿ ಧನಧಾನ್ಯಾದಿಗಳನ್ನು ಅನುಗ್ರಹಿಸುವಳು ಮತ್ತು ತನ್ನ ಯಾವ ಕಾರ್ಯವನ್ನಾದರೂ ತನ್ನ ದಯಾದೃಷ್ಟಿಯಿಂದ ತನ್ನಂತೆ ಮಾಡಿಕೊಡುವಳು ನಂಬಿಗೆಯಿಂದ ಭಜಿಸಿ ಫಲವನ್ನು ಹೊಂದಬೇಕು.

—ವಾಣಿ ಯಕ್ಷಿಣಿ ಮಂತ್ರ ವಿಧಾನ—

ಈ ದೇವತೆಯನ್ನು ಪೂಜಿಸುವದರಿಂದ ವಾಕ್ಸಿದ್ಧಿಗಳು ದೊರಕುವವು ಮತ್ತು ಎಲ್ಲ ಕಾರ್ಯಗಳೂ ಸಾಧ್ಯವಾಗುವವು ಸಂದೇಹವಿಲ್ಲ ನಂಬಿದಷ್ಟು ಫಲಂ

ಮಂತ್ರ — ಓಂ ನಮೋ ಭಗವತೆ ಹ್ರೀಂ ಐಂ ಹ್ರೌಂ ಸ್ವಹಾ||

ಈ ಮಂತ್ರವನ್ನು ಜಪವನ್ನು ಮಾಡಬೇಕಾದರೆ ಮನಸ್ಸು ಶುದ್ಧಿಯನ್ನು ಮಾಡಿಕೊಂಡು ದಿನಾಲೂ ಏರಡುನೂರರಂತೆ ಹವಿನ್ನೈದು ದಿವಸ ಜಪಿಸಿದರೆ ತನಗೆ ವಾಕ್ಸಿದ್ಧಿಯುಂಟಾಗುವದು ಯಿದನ್ನು ಮಾಡಿಕೊಳ್ಳಬೇಕಾದರೆ ಜಿತೇಂದ್ರಿಯನಾಗಿದ್ದು ಮಿತಿಹಾರದಿಂದ ಮಾಡಿ ಸಮಾಪ್ತಿಯನ್ನು ಮಾಡಿಕೊಳ್ಳತಕ್ಕದ್ದು ಅಂದರೆ ಮಂತ್ರದೇವತೆಯು ಸಂತುಷ್ಟಳಾಗಿ ತನ್ನ ಬಯಕೆಯನ್ನು ಪೂರೈಸವಳು.

—ಮಾತಂಗಿ ಯಕ್ಷಿಣಿ ಮಂತ್ರ ವಿಧಾನ—

ಈ ಮಂತ್ರ ದೇವತೆಯನ್ನು ಆರಾಧಿಸುವುದರಿಂದ ತಮ್ಮ ಸಕಲ ವ್ಯಾಜ್ಯಗಳೂ ವಾದ ವಿವಾದಗಳೂ ಫಲಪ್ರದವಾಗಿ ಜಯಪ್ರದವಾಗುವವು ಪ್ರಸಂಗಾನುಸಾರ ಯಿದರ ಉಪಯೋಗವನ್ನು ಮಾಡಿಕೊಂಡು ಸುಖಿಯಾಗಿರ ಬೇಕು ಮತ್ತು ಅಂಜನವನ್ನು ದಯಪಾಲಿಸುವಳು.

ಮಂತ್ರ—ಓಂ ಐಂ ಹ್ರೀಂ ಶ್ರಾಂ ಕ್ರೀಂ ಕ್ರೋಂ ಸ್ವಹಾ॥

ಈ ಮಂತ್ರವನ್ನು ಜಪಿಸುವದು ಹೇಗೆಂದರೆ - ತಾನು ದಿನಾಲೂ ಸ್ನಾನ ಸಂಧ್ಯಾವಂದನೆಗಳನ್ನು ಮಾಡಿಕೊಳ್ಳುವಂತೆ ಮಾಡಿಕೊಂಡು ನಂತರ ಈ ಜಪವನ್ನು (ಈ ಮಂತ್ರವನ್ನು) ಪಠಣಮಾಡಲಿಕ್ಕೆ ಆರಂಭಿಸಬೇಕು ಯಿದನ್ನು ದಿನಾಲೂ ಹತ್ತು ಸಾವಿರದಂತೆ ಯಿಪ್ಪತ್ತು ದಿವಸ ಬಿಡದೇ ಮಾಡಬೇಕು ಪೂರ್ಣ ಮುಗಿದ ನಂತರ ಮಂತ್ರ ಮೂರ್ತಿಗೆ ಅರ್ಪಿಸಿ ವಬ್ಬ ಅತಿಥಿಗೆ ಊಟವನ್ನು ಮಾಡಿಸಬೇಕು ಅಂದರೆ ತನಗೆ ದೇವಿಯು ಪ್ರಸನ್ನಳಾಗಿ ಫಲಪ್ರದಾನವನ್ನು ಮಾಡುವಳು ಸಂದೇಹವಿಲ್ಲ.

—ಶರ್ವಾಣಿ ಯಕ್ಷಿಣಿ ಮಂತ್ರ ವಿಧಾನ—

ಈ ದೇವತೆಯನ್ನು ಅರ್ಚಿಸುವದರಿಂದ ಧನಪ್ರಾಪ್ತಿಯಾಗುವದಲ್ಲದೆ ತನ್ನ ಮನೋಭಿಪ್ರಾಯಗಳು ಸಹ ಶಿದ್ಧಿಯಾಗುವವು ನಂಬಿ ಪೂಜಿಸಿ ಫಲವನ್ನು ಪಡೆದುಕೊಳ್ಳಬೇಕು.

ಮಂತ್ರ—ಓಂ ನಮೋ ಭಗವತಿ ಶರ್ವಾಣಿದೇವಿ ಆಗಚ್ಛ ಆಗಚ್ಛ ಸ್ವಹಾ॥

ಈ ಮಂತ್ರವನ್ನು ದಿನಾಲೂ ವಂದು ಸಾವಿರದಂತೆ ಯಿಪ್ಪತ್ತು ದಿವಸ ವರೆಗೂ ಪಠಣ ಮಾಡಬೇಕು. ಅಂದರೆ ಮಂತ್ರದೇವತೆಯು ಪ್ರಸನ್ನಳಾಗಿ ತನಗೆ ಸಕಲ ಶಿದ್ಧಿಗಳನ್ನುಂಟು ಮಾಡುವಳು ಮತ್ತು ತನ್ನ ಗೃಹಕೃತ್ಯಕ್ಕೆ ಬೇಕಾಗುವ ಧನಧಾನ್ಯಾದಿಗಳನ್ನು ಕೊಟ್ಟು ಕಾಪಾಡುವಳು ಸಂದೇಹವಿಲ್ಲ.

—ಸತ್ಯಯಕ್ಷಿಣಿ ಮಂತ್ರ ವಿಧಾನ—

ಈ ಸತ್ಯಯಕ್ಷಿಣಿಯನ್ನು ಆರಾಧಿಸಿದರೆ ಅವ ಫಲಪ್ರಾಪ್ತಿಯಾಗುವ ದೆಂದರೆ ತನ್ನ ಸತ್ಯತನದ ಭಕ್ತನ ಭಕ್ತಿಗೆ ಮೆಚ್ಚಿ ಸದಾ ನಿಧಿಯನ್ನು ಕೊಟ್ಟು ಕಾಪಾಡುವಳು ಸಂಶಯವಿಲ್ಲ.

ಮಂತ್ರ—ಓಂ ಐಂ ಹ್ರೀಂ ಕ್ಲೀಂ ಸೌಂ ಕ್ರಾಂ ಶ್ರೀಂ ಸ್ವಹಾ

ಈ ಮಂತ್ರವನ್ನು ಪಠಣ ಮಾಡಬೇಕಾದರೆ ತಾನು ಶುದ್ಧ ಮನಸ್ಸಿನಿಂದ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಮತಾನುಸಾರವಾಗಿ ಮಾಡಿಕೊಂಡು ನಂತರ ಈ ಮಂತ್ರವನ್ನು ಪಠಣ ಮಾಡಬೇಕು ದಿನಾಲೂ ಹತ್ತುಸಾವಿರದಂತೆ ಹತ್ತು ದಿವಸದ ವರೆಗೂ ಪಠಣ ಮಾಡಬೇಕು ಕಡೇ ದಿವಸ ಈ ವಂದು ಲಕ್ಷ ಜಪವನ್ನು ಮಂತ್ರಮೂರ್ತಿಗೆ ಅರ್ಪಿಸಬೇಕು. ಆ ದಿವಸ ರಾತ್ರಿ ಸ್ವಪ್ನದಲ್ಲಿ ದೇವತೆಯು ಪ್ರಸನ್ನಳಾಗಿ ದಿನಾಲೂ ನಿಧಿಯನ್ನು ದಯಪಾಲಿಸುವಳು. ನಂಬಿಗೆಯಿಂದ ಭಜಿಸಿ ಫಲವನ್ನು ಹೊಂದಿರಿ.

## ಜ್ರಂಭಿಕೆ ಯಕ್ಷಿಣಿ ಮಂತ್ರವಿಧಾನ

ಈ ಜ್ರಂಭಿಕೆಯ ಯಕ್ಷಿಣಿಯು ಮಂತ್ರ ಪಠಣ ಮಾಡುವದರಿಂದ ಫಲವಾಗುವದೆಂದು ಅಂದರೆ ಧನ-ಧಾನ್ಯಾದಿಗಳನ್ನು ಸಮೃದ್ಧಿಯಾಗುವದು.

ಮಂತ್ರ— ॥ಓಂ ನಮೋ ಜ್ರಂಭಿಕೆದೇವಿ ಕುರುಕುರುಸ್ವಹಾ॥

ಈ ಮಂತ್ರವನ್ನು ಶಿದ್ಧಿ ದಿನಗಳಲ್ಲಿ ಶುಚಿರ್ಭೂತನಾಗಿ ಮೌನದಿಂದ ಕುಳಿತುಕೊಂಡು ತನ್ನ ನಿತ್ಯ ಕರ್ಮಾದಿಗಳನ್ನು ತೀರಿಸಿಕೊಂಡ ನಂತರ ಮೇಲೆ ಬರೆದ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಹತ್ತು ದಿವಸ ಮಾಡುವದರಿಂದ ಮಂತ್ರ ಶಿದ್ಧಿಯಾಗುವದು. ಈ ಶಿದ್ಧವಾದ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಹತ್ತು ದಿವಸ ಮಾಡುವದರಿಂದ ಮಂತ್ರಶಿದ್ಧಿಯಾಗುವದು. ಈ ಸಿದ್ಧವಾದ ಮಂತ್ರವನ್ನು ದಿನಾಲೂ ಒಂದು ಸಾವಿರದಂತೆ ಒಂದು ತಿಂಗಳವರೆಗೂ ಪಠಣಮಾಡಿದರೆ ದೇವಿಯು ಪ್ರಸನ್ನಳಾಗಿ ರಾತ್ರಿ ಕಾಲದಲ್ಲಿ ಸ್ವಪ್ನದಲ್ಲಿ ತನಗೆ ಧನ-ಧಾನ್ಯಾದಿಗಳನ್ನು ಕೊಡುವಳೆಂದು ತಿಳಿಯಬೇಕು.

## ಶಕುನಿ ಯಕ್ಷಿಣಿ ಮಂತ್ರ ವಿಧಾನ

ಈ ಶಕುನಿ ಯಕ್ಷಿಣಿ ಮಂತ್ರವನ್ನು ಪಠಣ ಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನಗೆ ಬೇಕಾಗುವ ವಸ್ತ್ರಾದಿಗಳನ್ನು ಕೊಡುವಳೆಂದು ತಿಳಿಯಬೇಕು

ಮಂತ್ರ – ॥ಓಂ ಐಂ ಹ್ರೀಂ ಆಗಚ್ಛ ಆಗಚ್ಛ ಸ್ವಹಾ॥

ಈ ಮಂತ್ರನನ್ನು ಶುಭ ದಿನಗಳನ್ನು ನೋಡಿಕೊಂಡು ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಧರ್ಮಾನುಸಾರವಾಗಿ ತೀರಿಸಿಕೊಂಡ ನಂತರ ಈ ಮಂತ್ರವನ್ನು ಪಠಣ ಮಾಡಲಿಕ್ಕೆ ಆರಂಭವಮಾಡಬೇಕು. ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಿದರೆ ಮಂತ್ರವು ಸಿದ್ಧಿಯಾಗುವದು. ಆ ಮೇಲೆ ಯಾವ ಕಾರ್ಯಕ್ಕಾದರೂ ಇದನ್ನು ಉಪಯೋಗ ಮಾಡಿಕೊಳ್ಳಬೇಕು. ದಿನಾಲೂ ಐದುನೂರರಂತೆ ಈ ಮಂತ್ರವನ್ನು ಮೂರು ತಿಂಗಳವರೆಗೂ ಜಪವನ್ನು ಮಾಡಿ ಇದರ ಲೆಕ್ಕವು ಮುಗಿದ ಮೇಲೆ ವಟ್ಟು ಇಂತಿಷ್ಟು ಜಪವು ಇಷ್ಟು ದಿನಗಳಲ್ಲಿ ಜಪವನ್ನು ಮಾಡಿದ್ದು ಶಕುನಿ ಯಕ್ಷಿಣಿ ದೇವಿಯೇ ನಿನ್ನ ಪಾದಕ್ಕೆ ಅರ್ಪಿತವಾಲಿ ಎಂದು ಹೇಳಿ ನೀರನ್ನು ಬಿಡಬೇಕು. ಮತ್ತು ಆ ದಿವಸ ತನ್ನ ಶಕ್ತ್ಯಾನುಸಾರವಾಗಿ ಅನ್ನ ಸಂತರ್ಪಣೆಯನ್ನು ಮಾಡಬೇಕು, ಇಷ್ಟು ಜಪ ಮತ್ತು ಅನ್ನ ಸಂತರ್ಪಣೆ ಮಾಡಿದ್ದಕ್ಕೆ ದೇವಿಯು ರಾತ್ರಿ ಸ್ವಪ್ನದಲ್ಲಿ ಬಂದು ತನಗೆ ಅಂಜನವನ್ನು ಸದಾ ತನಗೆ ಬೇಕಾಗುವಷ್ಟು ವಸ್ತ್ರಾದಿಗಳನ್ನು ಕೊಡುವೆನೆಂದು ಹೇಳಿ ಅದೃಶ್ಯಳಾಗುವಳು ಆ ಪ್ರಕಾರಕ್ಕೆ ಸಕಾಲಕ್ಕೆ ಬೇಕಾದಾಗ ವಸ್ತ್ರಗಳು (ಅರಿವೆಗಳು) ದೊರೆಯುತ್ತವೆ. ಅಡಚಣೆಯಾಗುದಿಲ್ಲ. ನಿಜವಾಗಿ ನಂಬಿ ಪಡೆದುಕೊಳ್ಳಬೇಕು.

## ಮರುತಿನಿ ಯಕ್ಷಿಣಿ ಮಂತ್ರವಿಧಾನವು

ಮರುತಿ ಯಕ್ಷಿಣಿಯ ದೇವಿತೆಯನ್ನು ಪೂಜಿಸುವದರಿಂದ ದೇವಿಯು ಪ್ರಸನ್ನಳಾಗಿ ತನಗೆ ಬೇಕಾದಾಗ ನಿಧಿಯನ್ನು ಕೊಟ್ಟು ಕಾಪಾಡುವಳು. ಸಂದೇಹವಿಲ್ಲವು.

ಮಂತ್ರ— ॥ಓಂ ಹ್ರೀಂ ಹ್ರೊಂ ಹ್ರೈ ಹ್ರಃ ಸ್ವಹಾ॥

ಈ ಮಂತ್ರವನ್ನು ಪಠಿಸುವ ಕ್ರಮವೆಂತೆಂದೊಡೆ ಸಿದ್ಧಿ ದಿನದಲ್ಲಿ ಸ್ನಾನ ಮೊದಲಾದ ಸತ್ಕ್ರಿಯಗಳನ್ನು ತೀರಿಸಿಕೊಂಡು ನಂತರ ಸದರಿ ಮಂತ್ರವನ್ನು ಎರಡು ಲಕ್ಷ ಜಪವನ್ನು ಮಾಡಬೇಕು. ಅಂದರೆ ಈ ಮಂತ್ರವು ಪುನಶ್ಚರಣೆಯಿಂದ ಸಿದ್ಧವಾದ ಮಂತ್ರವನ್ನು ದಿನವೊಂದಕ್ಕೆ ಎರಡುನೂರರಂತೆ ನಾಲ್ವತ್ತೆಂಟು ದಿವಸ ಬಿಡದೇ ಜಿತೇಂದ್ರಿಯಾಗಿ ಪಠಣ ಮಾಡಬೇಕು. ಅಂದರೆ ಮಂತ್ರವು ಮುಗಿದ ದಿವಸ ಮಂತ್ರ ಮೂರ್ತಿಗೆ ಅರ್ಘ್ಯವನ್ನು ಕೊಡಬೇಕು.

ಆ ದಿವಸ ರಾತ್ರಿ ಕಾಲದಲ್ಲಿ ಮರುತಿದೇವಿಯು ಪ್ರಸನ್ನಳಾಗಿ ಸ್ವಪ್ನದಲ್ಲಿ ಬಂದು ತನ್ನ ಗೃಹಕೃತ್ಯಕ್ಕೆ ಬೇಕಾಗುವಷ್ಟು ನಿಧಿಯನ್ನು ದಿನಾಲೂ ವದಗಿಸಿ ಕೊಡುವಳು ಸಂಶಯವಿಲ್ಲ ಕಷ್ಟ ಜೀವಿಗಳು ಈ ದೇವತೆಗೆ ಮರೆಹೊಕ್ಕು ತಮ್ಮ ಕಷ್ಟವನ್ನು ಕಳೆದುಕೊಳ್ಳಬೇಕು.

## ಪೂತಿನಿ ಯಕ್ಷಿಣಿ ಮಂತ್ರ ವಿಧಾನ

ಈ ಪೂತಿನಿ ದೇವಿಯನ್ನು ಪೂಜಾ ಮಾಡೋಣದರಿಂದ ಮಂತ್ರ ದೇವತೆಯು ಪ್ರಸನ್ನಳಾಗಿ ತನಗೆ ಬೇಡಿದಿಷ್ಟಾರ್ಥವನ್ನು ಕೊಡುವಳೆಂದು ತಿಳಿಯಬೇಕು.

ಮಂತ್ರ— ||ಓಂ ನಮೊಭಗವತೆ ಪೂತಿನಿದೇವಿ ನಮೋನಮಃಸ್ವಹಾ||

ಈ ಮಂತ್ರವನ್ನು ಶಿದ್ಧಿ ದಿನಗಳಲ್ಲಿ ಶುಚಿಭೂರ್ತನಾಗಿ ತನ್ನ ಗುರು ಸಾಂಪ್ರದಾಯ ಪ್ರಕಾರ ತನ್ನ ನಿತ್ಯ ಕರ್ಮಾದಿಗಳನ್ನು ನೇಮದಂತೆ ತೀರಿಸಿ ಕೊಂಡು ನಂತರ ಮೇಲೆ ಬರೆದ ಪೂತಿನಿ ಯಕ್ಷಿಣಿಯ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಬೇಕು. ಅಂದರೆ ಆ ಮಂತ್ರವು ತನಗೆ ಶಿದ್ಧಿಯಾಗುವದು. ಆ ಶಿದ್ದವಾಗಿರಲ್ಪಟ್ಟಂತಾ ಮಂತ್ರವನ್ನು ದಿನಾಲೂ ಒಂದು ಸಾವಿರದಂತೆ ಒಂದುತಿಂಗಳವರೆಗೂ ಬಿಟ್ಟುಬಿಡದಲೇ ದಿನಾಲೂ ಪಠಣ ಮಾಡಬೇಕು. ಒಟ್ಟು ದಿವಸಗಳು ಮತ್ತು ಜಪ ಸಂಖ್ಯಾ ಮುಗಿದಕೂಡಲೇ ಆ ದಿವಸ ಮಂತ್ರ ದೇವತೆಗೆ ಇಷ್ಟು ಮಂತ್ರ ಜಪವು ನಿನಗೆ ಸಲ್ಲಲಿ ಎಂದು ನೀರು ಬಿಡಬೇಕು. ಮತ್ತು ಓರ್ವ ಅನಾಥನಿಗೆ ಭೋಜನವನ್ನು ಮಾಡಿಸಬೇಕು. ಅಂದರೆ, ದೇವಿಯು ಸಂತುಷ್ಟಳಾಗಿ ಬೇಡಿದಿಷ್ಟಾರ್ಥವನ್ನು ಒದಗಿಸಿ ಕೊಡುತ್ತಾಳೆ.

## ಸಂಸನ್ನೆ ಯಕ್ಷಿಣಿ ಮಂತ್ರ ವಿಧಾನ

ಈ ದೇವತೆಯು ಪೂಜಾ ಮಾಡೋಣದರಿಂದ ಯಾವ ಫಲ ಪ್ರಾಪ್ತವಾಗುವದೆಂದರೆ ಮಂತ್ರದೇವತೆಯು ಪ್ರಸನ್ನಳಾಗಿ ತನ್ನ ಬೇಡಿಕೆಗಳನ್ನು ಪೂರೈಸಿ ಕೊಡುವಳು ಮತ್ತು ದಿನಾಲೂ ನಾಣ್ಯಗಳನ್ನು ಅನುಗ್ರಹಿಸುವಳು.

ಮಂತ್ರ ||ಓಂ ಹ್ರೀಂ ಐಂ ಸಾಕ್ರಾಂ ಶ್ರೀಂ ಸ್ವಹಾ||

ಈ ಮಂತ್ರವನ್ನು ಶಿದ್ಧಿ ದಿನದಲ್ಲಿ ಶಾಂತ ಮನಸ್ಸಿನಿಂದ ಸ್ನಾನ ಸಂಧ್ಯಾ

ವಂದನೆಗಳನ್ನು ತನ್ನ ಗುರುಸಾಂಪ್ರದಾಯು ಪ್ರಕಾರ ಮಾಡಿಕೊಂಡು ಆ ಮೇಲೆ ಮಂತ್ರವನ್ನು ಜಪ ಮಾಡಲಾರಂಭಿಸಬೇಕು. ಈ ಮಂತ್ರವನ್ನು ಎರಡು ಲಕ್ಷ ಜಪವನ್ನು ಮಾಡಿದರೆ ಮಂತ್ರಶಿದ್ಧಿಯಾಗುವದು ಆ ಮೇಲೆ ಇದೇ ಮಂತ್ರವನ್ನು ದಿನಾಲೂ ಒಂದು ಸಾವಿರದಂತೆ ಇಪ್ಪತ್ತು ದಿವಸ ಪಠಣ ಮಾಡಬೇಕು ಹೀಗೆ ಇಪ್ಪತ್ತು ಸಾವಿರ ಜಪವು ಸಂಪೂರ್ಣ ಮುಗಿದ ಮೇಲೆ ಮಂತ್ರ ದೇವತೆಗೆ ಸಲ್ಲಿಸಿ ನೀರುಬಿಡಬೇಕು. ಆ ದಿವಸ ಒಬ್ಬ ಅತಿಥಿಯನ್ನು ಊಟ ಮಾಡಿಸಬೇಕು. ಅಂದರೆ ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ಬಂದು ತನ್ನ ಇಷ್ಟವನ್ನು ಪೂರ್ಣ ಮಾಡಿ ಸಾಣ್ಯಗಳನ್ನು ದಿನಾಲೂ ದಯಪಾಲಿಶುವಳು.

## ಶಂಕಿನಿ ಯಕ್ಷಿಣಿ ಮಂತ್ರ ವಿಧಾನ

ಈ ಶಂಕಿನಿ ದೇವತೆಯನ್ನು ಪೂಜಿಸುವದರಿಂದ ಮಂತ್ರ ದೇವತೆಯು ಪ್ರಸನ್ನಳಾಗಿ ತನಗೆ ಬೇಕಾಗುವ ಧನವನ್ನು ದಯಪಾಲಿಸಿಕೊಡುವಳು.

ಮಂತ್ರ— ||ಓಂ ನಮೊ ಶಂಕಿನಿ ದೇವಿ ಕುರುಕುರುಸ್ವಹಾ||

ಈ ಮಂತ್ರ ಶುಚಿರ್ಭೂತನಾಗಿ ಶುಭದಿನದಲ್ಲಿ ಮೌನದಿಂದ ಕುಳಿತುಕೊಂಡು ಮೇಲಿನ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಬೇಕು ಅಂದರೆ ಮಂತ್ರವು ಶಿದ್ಧಿಯಾಗುವದು, ಈ ಶಿದ್ಧವಾದ ಮಂತ್ರವನ್ನು ದಿನಾಲೂ ಎರಡು ಸಾವಿರದಂತೆ ಹದಿನೈದು ದಿವಸ ಬಿಡದೇ ಪಠಣ ಮಾಡಬೇಕು. ಕಡೇ ದಿವಸ ಒಟ್ಟು ಜಪವನ್ನು ಮಂತ್ರಮೂರ್ತಿಗೆ ಅರ್ಪಿಸಬೇಕು. ಅಂದರೆ ದೇವಿಯು ಸಂತುಷ್ಟಳಾಗಿ ತನ್ನ ಎಲ್ಲ ಕಾರ್ಯಗಳನ್ನು ಅನುಕೂಲವಾಗಿ ನಡೆಯಿಸಿಕೊಟ್ಟು ತನ್ನ ಗೃಹ ಕೃತ್ಯಕ್ಕೆ ಬೇಕಾಗುವ ಧನವನ್ನು ದಯಪಾಲಿಸುವಳು. ಇದನ್ನು ನೆರೆ ನಂಬಿ ಮಂತ್ರಮೂರ್ತಿಯನ್ನು ಪೂಜಿಸಿ ಫಲಪ್ರಾಪ್ತಿಯನ್ನು ಹೊಂದಬೇಕು. ಮತ್ತು ತನ್ನ ಯಾವ ಕಾರ್ಯವನ್ನಾದರೂ ಈ ದೇವಿಯಿಂದ ಸಾಧ್ಯ ಮಾಡಿಕೊಳ್ಳಬೇಕು. ಸಂದೇಹವಿಲ್ಲ.

## ಸುರುತಿ ಯಕ್ಷಿಣಿ ಮಂತ್ರ ವಿಧಾನವು

ಈ ಸುರುತಿದೇವತೆಯನ್ನು ಪೂಜಿಸಿ ಮಂತ್ರವನ್ನು ಪಠಣ ಮಾಡುವದರಿಂದ ಮಂತ್ರ ದೇವತೆಯು ಪ್ರಸನ್ನಳಾಗಿ ತನಗೆ ಸರ್ವ ಕಾರ್ಯಗಳನ್ನು ಸಾಧಿಸಿಕೊಡುವಳು.

ಮಂತ್ರ— ॥ಓಂ ನಮೋ ಭಗವತೆ ಹ್ರೀಂ ಐಂ ಕುಳುಕುರು ಸ್ವಹಾ॥

ಈ ಮಂತ್ರ ಶಿದ್ಧಿ ಮಾಡಿಕೊಂಡು ನಂತರ ಯಾವ ಕಾರ್ಯಕ್ಕಾದರೂ ಉಪಯೋಗಿಸಿಕೊಳ್ಳಬೇಕು. ಒಂದು ಶುಭ ದಿನವನ್ನು ನೋಡಿಕೊಂಡು ಜಿತೇಂದ್ರಿಯನಾಗಿ ಸ್ನಾನ ಸಂದ್ಯಾವಂದನೆಗಳನ್ನು ತನ್ನ ಮತಾನುಸಾರವಾಗಿ ತೀರಿಸಿಕೊಂಡ ನಂತರ ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಬೇಕು. ಅಂದರೆ ಮಂತ್ರವು ಶಿದ್ಧಿಯಾಗುವದು. ಈ ಮಂತ್ರವನ್ನುದಿನವಂದಕ್ಕೆ ಒಂದು ಸಾವಿರದಂತೆ ಇಪ್ಪತ್ತೊಂದು ದಿವಸ ಬಿಡದೇ ಪಠಣ ಮಾಡಬೇಕು. ದಿವಸಗಳು ಸಂಪೂರ್ಣ ಮುಗಿದ ದಿವಸ ಇಪ್ಪತ್ತೊಂದು ಸಾವಿರ ಜಪವು ಮಂತ್ರಮೂರ್ತಿಗೆ ಅರ್ಪಿಸಬೇಕು. ಅಂದರೆ ಮಂತ್ರ ಮೂರ್ತಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ಬಂದು ತನ್ನ ಎಲ್ಲ ಕಾರ್ಯಗಳನ್ನು ಪೂರ್ತಿಸಿಕೊಡುವೆನೆಂದು ಹೇಳುವಳು.

## ವಸತಿ ಯಕ್ಷಿಣಿ ಮಂತ್ರ ವಿಧಾನ

ಈ ವಸತಿ ದೇವತೆಯು ಮಂತ್ರವನ್ನು ಪಠಣ ಮಾಡುವದರಿಂದ ದೇವಿಯು ಪ್ರಸನ್ನಳಾಗಿ ತನಗೆ ಧನಧಾನ್ಯಾದಿಗಳನ್ನು ಪೂರೈಸಿಕೊಡುವಳು.

ಮಂತ್ರ—ಓಂ ಐಂ ಶ್ರೀಂ ಕ್ರೌಂ ಹ್ರೀಂ ಸ್ರೌಂ ಸ್ವಹಾ

ಈ ಮಂತ್ರವನ್ನು ಶಿದ್ಧಿ ಮಾಡಿಕೊಳ್ಳಬೇಕಾವರೆ ತಾನು ಜಿತೇಂದ್ರಿಯಾಗಿದ್ದು ವಂದು ಶಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಶಾಂತ ಮನಸ್ಸಿನಿಂದ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರು ಸಾಂಪ್ರದಾಯಕ ಪ್ರಕಾರ ಮಾಡಿಕೊಂಡು ನಂತರ ಮಂತ್ರವನ್ನು ಜಪಾರಂಭವನ್ನು ಮಾಡಬೇಕು ಈ ಮಂತ್ರವನ್ನು ಮೂರು ಲಕ್ಷದ ವರೆಗೆ ಜಪ ಮಾಡಬೇಕು ಅಂದರೆ ಈ ಮಂತ್ರವು ಪುನಶ್ಚರಣೆಯಿಂದ ಶಿದ್ದಿಯಾದಂತಾಗುವದು ಈ ಮಂತ್ರವನ್ನು ದಿನಾಲೂ ಹತ್ತು ಸಾವಿರದಂತೆ ಹತ್ತು ದಿವಸ ಪಠಣ ಮಾಡಬೇಕು ಆ ಕಡೆ ದಿವಸ ನಾನು ಪಠಣ ಮಾಡಿದಷ್ಟು ಮಂತ್ರವು ಮಂತ್ರ ಮೂರ್ತಿಗೆ ಸಲ್ಲಲಿ ಎಂದು ಶುಕ್ತಿಕಾ ಮುದ್ರೆಯಿಂದ ನೀರನ್ನು ಬಿಡಬೇಕು ಹೀಗೆ ಮಾಡೋಣದರಿಂದ ಮಂತ್ರದೇವತೆಯು ಸಂತುಷ್ಟಳಾಗಿ ರಾತ್ರಿ ಸ್ವಪ್ನದಲ್ಲಿ ಪ್ರಸನ್ನಳಾಗಿ ಧನ-ಧಾನ್ಯಾದಿಗಳನ್ನು ದಯಪಾಲಿಸುವಳು ಸಂದೇಹವಿಲ್ಲ ನಂಬಿ ದೇವತೆಯನ್ನು ಪ್ರಸನ್ನಳನ್ನಾಗಿ ಮಾಡಿಕೊಳ್ಳಬೇಕು.

## ಅನ್ನಪೂರ್ಣ ಯಕ್ಷಿಣಿ ಮಂತ್ರವಿಧಾನ

ಈ ಅನ್ನಪೂರ್ಣೆ ಯಕ್ಷಿಣಿಯ ಮಂತ್ರವನ್ನು ಜಪ ಮಾಡುವದರಿಂದ ಮಂತ್ರದೇವತೆಯು ಪ್ರಸನ್ನಳಾಗಿ ಯಥೇಚ್ಛ ಅನ್ನವನ್ನು ಸಮೃದ್ಧಿಯನ್ನಾಗಿ ಮಾಡಿಕೊಡುವಳು.

ಮಂತ್ರ— ||ಓಂ ನಮೋ ಮಾತಂಗೇಶ್ವರ್ಯೈನಮಃ ಸ್ವಹಾ ||

ಈ ಮಂತ್ರವನ್ನು ಪುನಶ್ಚರಣೆಯಿಲ್ಲದೆ ಪಠಣಮಾಡಿದರೆ ಅದು ಫಲಕಾರಿಯಾಗುವದಿಲ್ಲ. ಆದ್ದರಿಂದ ಎಲ್ಲ ಮಂತ್ರಗಳನ್ನು ಶಿದ್ಧಿ ಮಾಡಿಕೊಂಡು ಮಂತ್ರವನ್ನು ಪಠಣಮಾಡಿಕೊಳ್ಳಬೇಕು. ಈ ಮಂತ್ರವನ್ನು ಒಂದು ಶಿದ್ಧಿ ದಿನವನ್ನು ನೋಡಿಕೊಂಡು ಆ ದಿವಸ ಸ್ನಾನ ಸಂಧ್ಯಾವಂದನೆಗಳನ್ನು ತನ್ನ ಗುರುಸಂಪ್ರದಾಯ ಪ್ರಕಾರ ಮಾಡಿಕೊಂಡು ನಂತರ ಜಪವನ್ನು ಮಾಡಲಿಕ್ಕೆ ಆರಂಭ ಮಾಡಬೇಕು. ಮೊದಲು ನ್ಯಾಸಾದಿಗಳನ್ನು ದಿಗ್ಬಂಧನೆಗಳನ್ನು ಮಾಡಿಕೊಂಡು ಜಪವನ್ನು ಮಾಡಲಿಕ್ಕೆ ಆರಂಭಿಸಬೇಕು. ಈ ಮಂತ್ರವನ್ನು ಒಂದು ಲಕ್ಷ ಜಪವನ್ನು ಮಾಡಬೇಕು. ಅಂದರೆ ಮಂತ್ರಶಿದ್ಧಿಯಾಗುವದು. ಆಮೇಲೆ ದಿನಾಲೂ ಒಂದು ಸಾವಿರದಂತೆ ಇಪ್ಪತ್ತು ದಿವಸ ಪಠಣ ಮಾಡಬೇಕು. ಕಡೇ ದಿವಸ ಒಟ್ಟು ಎಲ್ಲಾ ಜಪವನ್ನು ಕೂಡಿಸಿ ಮಂತ್ರಮೂರ್ತಿಗೆ ಅರ್ಘ್ಯವನ್ನು ಕೊಡಬೇಕು. ಅನ್ನ ಸಂತರ್ಪಣೆಯನ್ನೂ ಮಾಡಬೇಕು. ಹೀಗೆ ಮಾಡಿದಲ್ಲಿ ದೇವಿಯು ಪ್ರಸನ್ನಳಾಗಿ ಭಕ್ತನಿಗೆ ನಿತ್ಯಪ್ರಸಾದಕ್ಕೆ ಅನ್ನವನ್ನು ದಯಪಾಲಿಸಿ ಕೊಡುವಳು.

## ಮಹಾ ಯಕ್ಷಿಣಿ ಮಂತ್ರವಿಧಾನ

ಈ ಮಹಾ ಯಕ್ಷಿಣಿಯ ಪೂಜೆಯನ್ನು ಮಾಡುವದರಿಂದ ಮಂತ್ರದೇವತೆಯು ಪ್ರಸನ್ನಳಾಗಿ ಅವಗೆ ಧನ ಧಾನ್ಯಾದಿಗಳನ್ನು ಸಂಗ್ರಹಿಸಿ ಕೊಡುವಳು. ನಂಬಿದ ಭಕ್ತನ ಭಾಗ್ಯಕ್ಕೆ ಬೆಲೆಯಿಲ್ಲ.

ಮಂತ್ರ— ||ಓಂ ಹ್ರೀಂ ಮಹಾಯಕ್ಷಿಣಿ ಭಾಮಿನಿ ಪ್ರಿಯೆ ಸ್ವಹಾ||

ಈ ಮಂತ್ರವನ್ನು ಪುನಶ್ಚರಣೆಯಿಲ್ಲದೆ ಪಠಣ ಮಾಡಿದರೆ ಫಲವಾಗುವದಿಲ್ಲವಾದ್ದರಿಂದ ಪುನಶ್ಚರಣೆಯನ್ನು ಮಾಡಿಕೊಂಡು ನಂತರ ಬೇಕಾದ ಕಾರ್ಯಕ್ಕೆ ಉಪಯೋಗಿಸಿಕೊಳ್ಳಬೇಕು. ಈ ಮಂತ್ರಶಿದ್ಧಿಯು ಎರಡುಲಕ್ಷ




ಜಪವನ್ನು ಮಾಡುವದರಿಂದ ಮಂತ್ರಶಿದ್ಧಿಯಾಗುವದು. ಮೊದಲು ಮಂತ್ರ ನ್ಯಾಸಾದಿಗಳನ್ನು ದಶ ದಿಗ್ಬಂಧನೆಗಳನ್ನು ಮಾಡಿಕೊಂಡು ಎರಡುಲಕ್ಷ ಜಪವನ್ನು ಮಾಡಬೇಕು. ಅಂದರೆ ಮಂತ್ರವು ಶಿದ್ಧಿಯಾಗುವದು. ಈ ಶಿದ್ಧವಾದ ಮಂತ್ರವನ್ನು ದಿನಾಲೂ ಒಂದು ಸಾವಿರದಂತೆ ಒಂದು ತಿಂಗಳ ವರೆಗೂ ಪಠಣ ಮಾಡಬೇಕು. ಕಡೇದಿವಸ ಮಂತ್ರಮೂರ್ತಿಗೆ ಅರ್ಪಿಸಬೇಕು. ಮತ್ತು ಒಬ್ಬ ಅತಿಥಿಗೆ ಭೋಜನವನ್ನು ಮಾಡಿಸಬೇಕು. ಅಂದರೆ ಶ್ರೀ ದೇವಿಯು ಸಂತುಷ್ಟಳಾಗಿ ರಾತ್ರಿ ಸ್ವಪ್ನದಲ್ಲಿ ಧನ ಧಾನ್ಯಾದಿಗಳನ್ನು ಕೊಟ್ಟು ಕಾಪಾಡುವಳು. ನಂಬಿಕೊಂಡು ಪಡೆದುಕೊಳ್ಳಬೇಕು.

## ಕರ್ಣಪಿಶಾಚಿ ಯಕ್ಷಿಣಿ ಮಂತ್ರವಿಧಾನ

ಈ ಕರ್ಣಪಿಶಾಚಿ ಯಕ್ಷಿಣಿಯ ಮಂತ್ರವನ್ನು ಪಠಣಮಾಡುವದರಿಂದ ದೇವಿಯು ಪ್ರಸನ್ನಳಾಗಿ ರಾತ್ರಿ ಸ್ವಪ್ನದಲ್ಲಿ ಎಲ್ಲ ಸರ್ವವಿಷಯಗಳನ್ನು ತಿಳಿಸುವಳು.

ಮಂತ್ರ – ।। ಓಂನಮೋ ಕರ್ಣಪಿಶಾಚಿನಿ ಪಿಂಗಲಲೋಚನೆ ಸ್ವಹಾ।।

ಈ ಮಂತ್ರವನ್ನು ಶಿದ್ಧಿ ಮಾಡಿಕೊಂಡ. ಪಠಣ ಮಾಡಬೇಕು. ಒಂದು ಸಿದ್ಧಿ ದಿನವನ್ನು ಗೊತ್ತು ಮಾಡಿಕೊಂಡು ಆ ದಿವಸ ಸ್ನಾನ ಮೊದಲಾದ ಸತ್ಕ್ರಿಯೆಗಳನ್ನು ಮಾಡಿಕೊಂಡು ನಂತರ ತನ್ನ ಗುರು ಸಾಂಪ್ರದಾಯ ಪ್ರಕಾರ ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ತನ್ನ ನಿತ್ಯಕರ್ಮಾದಿಗಳನ್ನು ತೀರಿಸಿಕೊಂಡು ನಂತರ ಸಿದ್ಧಿ ಜಪವನ್ನು ಮಾಡಿಕೊಳ್ಳಬೇಕು. ಈ ಮಂತ್ರವನ್ನು ೧ಲಕ್ಷ ಜಪವನ್ನು ಮಾಡಬೇಕು. ಅಂದರೆ ಮಂತ್ರಸಿದ್ಧಿಯಾಗುವದು. ಈ ಶಿದ್ಧಿಯಾದ ಮಂತ್ರವನ್ನು ಯಾವಾಗಾದರೂ ಯಾವ ಕೆಲಸಕ್ಕಾದರೂ ಪಠಣಮಾಡಿಕೊಳ್ಳಬೇಕು. ಈ ಮಂತ್ರವನ್ನು ದಿನಾಲೂ ಒಂದು ಸಾವಿರದಂತೆ ಇಪ್ಪತ್ತು ದಿವಸ ಮಾಡಬೇಕು. ಅಂದರೆ ಇಪ್ಪತ್ತು ಸಾವಿರ ಜಪವಾಗುವದು. ಈ ಇಪ್ಪತ್ತು ಸಾವಿರ ಮಂತ್ರಜಪವು ಮಂತ್ರಮೂರ್ತಿಗೆ ಸಲ್ಲಲಿ ಎಂದು ಶುಕ್ತಿ ಕಾಮುದ್ರಿಕೆಯಿಂದ ನೀರನ್ನು ಬಿಡಬೇಕು. ಅಂದರೆ ಮಂತ್ರದೇವತೆಯು ಪ್ರಸನ್ನಳಾಗಿ ಸರ್ವ ವಿಷಯವನ್ನು ತಿಳಿಸುವಳು.